

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಕೃಷ್ಣಾಮೃತಮಹಾರ್ಣವ

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

# ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)

'Pajaka'. 89/24, III Cross, Mount Joy Road, Hanumanthanagar, Bangalore - 560 019
Website: www.vyasamadhwa.org Ph:26602802 — Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

1. ಪ್ರಾಚೀನಸಂಸ್ಕೃತಹಸ್ತಪ್ರತಿಗ್ರಂಥಗಳನ್ನುಸಂಗ್ರಹಿಸಿ,ವ್ಯವಸ್ಥಿತವಾಗಿಸಂರಕ್ಷಿಸುವುದು;ಈಗಾಗಲೇ2000ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.
2. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ 40000 ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.
3. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.
4. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ 26 ವಿದ್ವಾಂಸರಿಗೆ ರೂ.1500/-ಗಳನ್ನುಸಲ್ಲಿಸುತ್ತಿದೆ.
5. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.
6. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ.12,000/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.
7. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.25,000/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.
8. ಶ್ರೀವ್ಯಾಸಮಧ್ವರನ್ನುಹಾಗೂಅವರಕೃತಿಗಳನ್ನುಕುರಿತಸಂಶೋಧನಕೃತಿಗಳಪ್ರಕಾಶನಕ್ಕೆಆರ್ಥಿಕಸಹಾಯ.
9. ಯುವಜನತೆಯಲ್ಲಿತಾತ್ತ್ವಿಕಜಾಗೃತಿಯನ್ನುಉಂಟುಮಾಡಲುಕಾಲಕಾಲಕ್ಕೆಶ್ರೀವ್ಯಾಸಮಧ್ವರತತ್ತ್ವಗಳ ಬಗ್ಗೆಕಾರ್ಯಾಗಾರಗಳನ್ನು,ವಿಚಾರಸಂಕಿರಣಗಳನ್ನುಮತ್ತು ವಿದ್ವದ್ಗೋಷ್ಠಿಗಳನ್ನುಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.15,000/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

ವಿ.ಸೂ.:

1. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ(ರಿ.)"S/B A/c No. 0472101031491, Canara Bank Hanumanthanagar Branch, ಬೆಂಗಳೂರು ಅಥವಾ "Sri Vyasa Madhwa Research Foundation (R), S/B A/c No. 0472101044870, Canara Bank Hanumanthanagar Branch, ಬೆಂಗಳೂರು" - IFSC Code CNRB 0000472 ಈ ಹೆಸರಿಗೆ ನಗದು / ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಶೀತಿಯನ್ನು ಪಡೆಯತಕ್ಕದ್ದು.
2. ಎಲ್ಲಬಗೆಯ ದೇಣಿಗೆಗಳಿಗೂ 80ಜಿ ಅನ್ವಯ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿರುತ್ತದೆ.




ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತ

# ಕೃಷ್ಣಾಮೃತಮಹಾರ್ಣವ

(ಸಂಸ್ಕೃತಮೂಲ, ಕನ್ನಡ ಅನುವಾದ, ವಿವರಣೆ ಹಾಗೂ
ಟಿಪ್ಪಣಿಗಳಲ್ಲಿನ ವಿಶೇಷಾಂಶಗಳೊಂದಿಗೆ)

ಸಂಪಾದನೆ - ಅನುವಾದ - ವಿವರಣೆ :

**ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಅಡ್ಡರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,
ಹನುಮಂತನಗರ, ಬೆಂಗಳೂರು - ೫೬೦ ೦೧೯.

**Kṛṣṇāmṛtamahārṇava of Śrī Ānandatīrthabhagavatpāda** : Edited with an introduction, translation and explanatory notes by Vidyāvācaspati, Darśana-ratnam, Pravacanācārya, Sacchāstravicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejāvar Math, Udupi and **Raṣṭrapati Award - 2005**) **Dr.Vyāsanakere Prabhanjanācārya**, M.A., Ph.D., D.Litt., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyāsanakere**, Publication wing of **Śrī VyāsaMadhva Samśodhana Pratiṣṭhāna Pājaka**, No.89/24, Third Cross, Mount Joy Road, Hanumanthanagar, Bangalore - 560019. Pages: 248 (22+22+ 208)

Phone : 26602802; 26611011.

Internet : www.vyasamadhwa.org

E-mail : info@vyasamadhwa.org



**KRISHNAMRUTAMAHARNAVA**
**ISBN : 978-81-920563-3-3**

Seventh Edition : 2017
Eighth Edition : 2018

Price : Rs. 100/-

Typeset by :
**Śrī Vyāsa Madhva Samśodhana Pratiṣṭhāna(Regd)**

Printed at :
**Vāgartha**, N.R. Colony, Bangalore, Ph: 22427677

# ವಿಷಯಾನುಕ್ರಮಣಿಕೆ

*****

# ಮುನ್ನುಡಿ

## ಶ್ರೀಮಧ್ವಾಚಾರ್ಯರು ಮತ್ತು ಅವರ ಕೃತಿಗಳು

ಶ್ರೀಮಧ್ವಾಚಾರ್ಯರು[೧] (ಕ್ರಿ.ಶ. ೧೨೦೦-೧೨೮೦) ಜಗತ್ತು ಕಂಡ ಅಪ್ರತಿಮ ದಾರ್ಶನಿಕರು; ಭಗವಂತನ ಪಾರಮ್ಯ, ವಿಶ್ವಸತ್ಯತ್ವಗಳನ್ನು ಸಾರಿದ ''**ವಿಶ್ವಗುರುಗಳು**''. ವಾಯುದೇವರ ತೃತೀಯಾವತಾರರಾದ ಅವರು ಜಗತ್ತಿನ ಉಸಿರಾದರೆ, ಅವರ ಕೃತಿಗಳು ಅಧ್ಯಾತ್ಮದ ಉಸಿರು. ಅವರ ಆಕೃತಿಯಂತೆ ಕೃತಿಗಳೂ ಅಪೂರ್ವ, ಅನನ್ಯ. ವಿಷಯವೈಪುಲ್ಯ, ವಿವೇಚನೆಯ ಸಮಗ್ರತೆಯ ದೃಷ್ಟಿಯಲ್ಲಿ ಶ್ರೀವೇದವ್ಯಾಸರ ಅನಂತರದ ಸ್ಥಾನ ಅವರದ್ದೇ. ಅವರು ನಿಜವಾದ ಅರ್ಥದಲ್ಲಿ '**ಅಭಿನವವೇದವ್ಯಾಸರು**'. ಆಸೇತುಹಿಮಾಚಲ ಮಾತ್ರವಲ್ಲದೆ ಉತ್ತರಬದರಿಯನ್ನೂ ಸಂದರ್ಶಿಸಿದ ಏಕಮಾತ್ರ ಪರಿವ್ರಾಜಕರು ಎಂಬುದು ಅವರು ಇನ್ನೊಂದು ಮಹತ್ತ್ವ. ಇಂತಹ ವಿಶ್ವಗುರುವನ್ನು ನೀಡಿದ ಭಾಗ್ಯ ಕನ್ನಡನಾಡಿನದು. ಅವರ ಜೀವನಗಾಥೆ ಸುಮಧ್ವವಿಜಯದಲ್ಲಿದ್ದರೆ, ಅವರ ಸಂದೇಶ ಅವರ ಕೃತಿಶ್ರೇಣಿಯಲ್ಲಿದೆ.

ಶ್ರೀಪದ್ಮನಾಭತೀರ್ಥರಂತಹ ಪರಮಹಂಸರು, ತ್ರಿವಿಕ್ರಮಪಂಡಿತಾಚಾರ್ಯರಂತಹ ಗೃಹಸ್ಥಶೇಖರರು, ಜಯಸಿಂಹರಾಜನಂತಹ ಅರಸ, ಕಲ್ಯಾಣೀದೇವಿಯಂತಹ ಮಹಿಳಾ-ಮಣಿಗಳು ಮೊದಲಾದ ಅಸಂಖ್ಯಶಿಷ್ಯವರ್ಗ ಅವರ ಉಪದೇಶಧಾರೆಯಲ್ಲಿ ಮಿಂದು ಪುನೀತವಾಯಿತು. ಜಿಜ್ಞಾಸುಗಳಾಗಿ, ಆರ್ತರಾಗಿ ಬಂದ ಯಾರನ್ನೂ ದೂರಮಾಡದೆ ಕರುಣೆಯಿಂದ ಕರೆದು ಉದ್ಧಾರದ ಹಾದಿತೋರಿದ ವಿಶ್ವಗುರು ಅವರು. ವೇದ-ವೇದಾಂತ ಗಳಿರಲಿ, ಶಿಕ್ಷಾವ್ಯಾಕರಣಾದಿವೇದಾಂಗಗಳಿರಲಿ, ತರ್ಕಮೀಮಾಂಸೆಗಳಿರಲಿ, ಸಂಗೀತ-ಶಾಸ್ತ್ರವಿರಲಿ, ವಿವಿಧಭಾಷಾಪ್ರಪಂಚವಿರಲಿ, ಕವಿತಾಪ್ರತಿಭೆಯಿರಲಿ ಎಲ್ಲದರಲ್ಲೂ ಅವರು ಪರಿಪೂರ್ಣಪ್ರಮತಿ. ಗಂಗಾನದಿಯ ಮೇಲೆ ನಡೆಯಬಲ್ಲ, ಹಿಮಾಲಯ ಪರ್ವತ-ಶ್ರೇಣಿಯಲ್ಲಿ ಮಿಂಚಿನಂತೆ ಸಾಗಬಲ್ಲ, ಭಾರದ ಬಂಡೆಗಳನ್ನು ಒಂದೇ ಕೈಯಲ್ಲಿ ಎತ್ತಿ ಬೇಕಾದ ಸ್ಥಳದಲ್ಲಿ ಇರಿಸಬಲ್ಲ, ಎಂತಹ ಜಟ್ಟಿಗಳನ್ನು ಸುಮ್ಮನೆ ಕುಳಿತಿದ್ದೇ ಪರಾಭವಗೊಳಿಸಬಲ್ಲ, ವಿಧರ್ಮೀಯರನ್ನೂ ಸಹ ತತ್ತ್ವಾರ್ಥಗರ್ಭಿತವಾದ ಅಪೂರ್ವವಾಕ್ಕೌಶಲದಿಂದ ಕ್ಷಣ-ಮಾತ್ರದಲ್ಲೇ ಪ್ರಭಾವಿತರನ್ನಾಗಿಸಬಲ್ಲ ಅನ್ಯಾದೃಶವಾದ ಹಿರಿಮೆ ಅವರದು. ಶ್ರೀರಾಘ-ವೇಂದ್ರಸ್ವಾಮಿಗಳು ತಮ್ಮ ಪ್ರಾತಃಸಂಕಲ್ಪಗದ್ಯದಲ್ಲಿ ವರ್ಣಿಸಿರುವಂತೆ ಶ್ರೀಮಧ್ವಾಚಾರ್ಯರು ಸಂಸಿದ್ಧಸಪ್ತಕೋಟಿಮಹಾಮಂತ್ರರಾದ ಯೋಗಿರಾಜರು.

ಅವರ ಹಾಗೂ ಅವರ ಮೇಲೆ ರಚಿತವಾಗಿರುವ ಕೃತಿಗಳಿಂದ ತಿಳಿದುಬರುವಂತೆ ಅವರು ಅನುಪಮವಿದ್ವಾಂಸರು, ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡ ದಾರ್ಶನಿಕರು, ಸರಸಕವಿಗಳು,

---

೧. ಶ್ರೀಮಧ್ವಾಚಾರ್ಯರ ಜೀವನ ಸಾಧನೆಗಳ ವಿಸ್ತೃತಪರಿಚಯವನ್ನು ನಮ್ಮ ಪ್ರಕಾಶನದ 'ಶ್ರೀಪೂರ್ಣಪ್ರಜ್ಞ- ದರ್ಶನ' ಕೃತಿಯಲ್ಲಿ ಕೊಡಲಾಗಿದೆ.

ವೇದದ್ರಷ್ಟಾರಋಷಿಗಳು, ತತ್ತ್ವೋಪದೇಶಕ ಗುರುಗಳು, ಅದ್ವಿತೀಯವಾಗ್ಮಿಗಳು, ವೈವಿಧ್ಯಮಯ ಗ್ರಂಥಕಾರರು, ಅಪೂರ್ವಸಂಶೋಧಕರು, ಅಪ್ರತಿಮವಾದಕೋವಿದರು, ಅಪೂರ್ವ ಅನುಭಾವಿಗಳು, ತತ್ತ್ವಜ್ಞಾನದ ರಸಋಷಿಗಳು, ಸಕಲಭಾಷಾಕೋವಿದರಾದ ಭಾಷಿಗರು, ಅಪೂರ್ವಭಾಷಾಶಾಸ್ತ್ರಜ್ಞರು, ಮಹಾತಪಸ್ವಿಗಳು, ಅನುಪಮಗಾನಕೋವಿದರು, ಪುರಾತತ್ತ್ವಶಾಸ್ತ್ರಜ್ಞರು, ಮೀಮಾಂಸಾದಿ ಸಕಲಶಾಸ್ತ್ರವಿಶಾರದರು, ಸಮರ್ಥ ಆಡಳಿತ-ಗಾರರು, ಅಸಾಮಾನ್ಯ ಸಂಘಟನಕಾರರು ಮತ್ತು ವಿಶಾಲಹೃದಯದ ಸಮಾಜಸುಧಾರಕರು. ಅವರು ನಿಜವಾದ ಅರ್ಥದಲ್ಲಿ ಸರ್ವಜ್ಞರು, ಸಕಲಕಲಾಕೋವಿದರೂ ಆಗಿದ್ದ ಮಹಾ-ನುಭಾವರು. ದ್ವಾತ್ರಿಂಶಲ್ಲಕ್ಷಣಭರಿತವಾದ ಅವರ ಆಕೃತಿ ಕಲಿಯುಗದ ಏಕೈಕ ದಾಖಲೆ. ಐವತ್ತು ಟನ್ನುಗಳಷ್ಟು ಭಾರದ ಬೃಹತ್ತಾದ ಶಿಲೆಯನ್ನು ಒಂದೇ ಕೈಯಿಂದ ಭದ್ರಾನದಿಯ ಪ್ರವಾಹಮಧ್ಯದಲ್ಲಿ ಇರಿಸಿದ ಅವರ ದೈಹಿಕಸಾಮರ್ಥ್ಯ ಊಹಾತೀತವಾದದ್ದು.

ಶ್ರೀಮದಾಚಾರ್ಯರ ಪ್ರತಿಯೊಂದು ಕೃತಿಯೂ ಅವರ ಪ್ರತಿಕೃತಿ. ನಿಜವಾದ ಅರ್ಥದಲ್ಲಿ ಅವರ 'ಸುವರ್ಣಪ್ರತೀಕ'. ಸಾಲಿಗ್ರಾಮ, ತುಳಸಿಗಳಂತೆ ವೈಷ್ಣವರ ಮನೆಮನೆ-ಗಳಲ್ಲಿ ಇರಲೇಬೇಕಾದ ಅಪೂರ್ವನಿಧಿ. ಅವುಗಳ ಅಧ್ಯಯನದಂತೆ ಅವುಗಳ ನಿತ್ಯ-ಪೂಜೆಯೂ ಸರ್ವಾನಿಷ್ಟನಿವಾರಕ, ಸಮಸ್ತಮಂಗಲಕಾರಕ; ಅವುಗಳನ್ನು ಓದಿದವರು ಪೂಜಿಸುತ್ತಾರೆ, ಪೂಜಿಸುವವರು ಅವುಗಳನ್ನು ಓದುವಂತಾಗುತ್ತಾರೆ.

ಅವರ ಗ್ರಂಥರಚನೆ ವೈವಿಧ್ಯಮಯವಾದದ್ದು. ಆರಂಭದ ತತ್ತ್ವಜಿಜ್ಞಾಸುಗಳನ್ನು ಆಳವಾದ ಚಿಂತನೆಗೆ ಅಣಿಗೊಳಿಸಲು ಪ್ರಮಾಣಲಕ್ಷಣ, ಕಥಾಲಕ್ಷಣ, ತತ್ತ್ವಸಂಖ್ಯಾನ, ತತ್ತ್ವವಿವೇಕ, ಉಪಾಧಿಖಂಡನ, ಮಾಯಾವಾದಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ, ತತ್ತ್ವೋದ್ಯೋತ, ವಿಷ್ಣುತತ್ತ್ವವಿನಿರ್ಣಯ ಮತ್ತು ಕರ್ಮನಿರ್ಣಯ ಎಂಬ ದಶಪ್ರಕರಣಗಳು, ವೇದರಹಸ್ಯವೆಂದು ಮಾನ್ಯವಾದ ಉಪನಿಷತ್ತುಗಳ ರಹಸ್ಯವನ್ನು ಅನಾವರಣಗೊಳಿಸುವ (ಈಶ, ಕೇನ, ಕಠ, ಷಟ್ಪ್ರಶ್ನ, ಮುಂಡಕ, ಮಾಂಡೂಕ, ತೈತ್ತಿರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಎಂಬ) ದಶೋಪನಿಷತ್ತುಗಳ ಭಾಷ್ಯಗಳು, ಅತ್ಯುನ್ನತ ಶಾಸ್ತ್ರಕೃತಿಯಾದ ಬ್ರಹ್ಮಸೂತ್ರಗಳ ಮೇಲೆ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ ಮತ್ತು ನ್ಯಾಯವಿವರಣ ಎಂಬ ನಾಲ್ಕು ಕೃತಿಗಳು, ಪುರಾಣಪ್ರಸ್ಥಾನದ ಮೇಲಿನ ಭಾಷ್ಯರೂಪವಾಗಿ ಶ್ರೀಮದ್ಭಾಗವತಮಹಾಪುರಾಣದ ಮೇಲೆ ರಚಿತವಾಗಿರುವ ಭಾಗವತತಾತ್ಪರ್ಯನಿರ್ಣಯ, ವೇದಗಳಿಗಿಂತ ಮಿಗಿಲೆನ್ನಿಸಿದ ಮಹಾಭಾರತದ ಮೇಲೆ ಮಹಾಭಾರತತಾತ್ಪರ್ಯನಿರ್ಣಯವೆಂಬ ಅನುಪಮಸಂಶೋಧನ ವಿಮರ್ಶನಕೃತಿ ಹಾಗೂ ಅದರ ಸಾರಸಂಗ್ರಹರೂಪವಾದ ಚಿತ್ರಕಾವ್ಯ ಯಮಕಭಾರತ, ಮಹಾಭಾರತಪಾರಿಜಾತದ ಸಕಲತತ್ತ್ವಗಳ ಮಧುವಾದ ಭಗವದ್ಗೀತೆಯ ಮೇಲೆ ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎಂಬ ಎರಡು ಕೃತಿಗಳು, ಅಪೌರುಷೇಯವೇದಗಳಲ್ಲಿ ಪ್ರಥಮಗಣ್ಯವಾದ ಋಗ್ವೇದದ ಮೇಲೆ ಅಧ್ಯಾತ್ಮಾದಿ

ಅರ್ಥತ್ರಯಗಳನ್ನು ವಿವೇಚಿಸುವ ಋಗ್ಭಾಷ್ಯ, ತತ್ತ್ವಜ್ಞಾನದ ಸಾಧನೆ ಮತ್ತು ಅನುಷ್ಠಾನಕ್ಕೆ ನೆರವಾಗುವ ತತ್ತ್ವಗಳನ್ನು ನಿರೂಪಿಸುವ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀನಿರ್ಣಯ, ಪ್ರಣವಕಲ್ಪ ತಂತ್ರಸಾರಸಂಗ್ರಹ ಎಂಬ ಆಚಾರಗ್ರಂಥಗಳು ಮತ್ತು ಕೊನೆಯದಾಗಿ ತಾವು ಪ್ರತಿಪಾದಿಸಿದ ಸಕಲತತ್ತ್ವಗಳನ್ನು ಅನುಸಂಧಾನಕ್ಕೆ ತಂದುಕೊಂಡು ಪರತತ್ತ್ವವಾದ ಭಗವಂತನನ್ನು ಪರಿಪರಿಯಾಗಿ ಸ್ತುತಿಸಲು ಅನುವು ಮಾಡಿಕೊಡುವ ದ್ವಾದಶಸ್ತೋತ್ರ ಮತ್ತು ನಖಸ್ತುತಿ (ಮತ್ತು ಕಂದುಕಸ್ತುತಿ) ಎಂಬ ಸ್ತೋತ್ರರತ್ನಗಳು – ಇವಿಷ್ಟು ಸರ್ವಮೂಲವೆಂದು ಪರಂಪರೆ ಕಾಪಾಡಿಕೊಂಡುಬಂದಿರುವ ಅವರ ಅಮೂಲ್ಯಕೃತಿಗಳು.

ಸರಳತೆ, ಸ್ಪಷ್ಟತೆ, ಗಾಂಭೀರ್ಯ, ಅಡಕವಾದ ನಿರೂಪಣೆ, ಪ್ರಮಾಣೋದಾಹರಣ ಹಾಗೂ ಯುಕ್ತಿವೈಭವಗಳು ಅವರ ಕೃತಿಗಳ ವಿಶಿಷ್ಟಲಕ್ಷಣಗಳು. ಜಗತ್ತಿನ ಬೇರಾವ ಗ್ರಂಥಕಾರರ ಕೃತಿಗಳಲ್ಲೂ ಕಾಣಸಿಗದ ನಿರಂತರ ಪ್ರಮಾಣೋದಾಹರಣೆ ಅವರ ಗ್ರಂಥಗಳ ಅಸಾಮಾನ್ಯ ಹಿರಿಮೆ. ಶಬ್ದವಿನ್ಯಾಸದಲ್ಲಿ ವಾಮನನಾಗಿದ್ದು ಅರ್ಥವೈಭವದಲ್ಲಿ ತ್ರಿವಿಕ್ರಮನಾಗಿರುವುದು ಅವರ ಬರವಣಿಗೆಯ ಅಸಾಧಾರಣಲಕ್ಷಣ.

'ಸರ್ವಮೂಲ'ವೆಂಬುದಾಗಿ ಪ್ರಸಿದ್ಧವಾಗಿರುವ ಅವರ ಕೃತಿಗಳು ವೇದ, ಉಪನಿಷತ್ತು, ಗೀತೆ, ಬ್ರಹ್ಮಸೂತ್ರ, ಮಹಾಭಾರತ, ರಾಮಾಯಣ, ಭಾಗವತ, ಪಂಚರಾತ್ರ, ಬ್ರಹ್ಮತರ್ಕ, ತಂತ್ರಸಾರ ಮೊದಲಾದ ಸಕಲಗ್ರಂಥಗಳ 'ಭಾವದೀಪ'ಗಳು. ಟೀಕಾಕೃತ್ಪಾದರಾದ ಶ್ರೀಜಯತೀರ್ಥರು, ದ್ವೈತಿಕುಲತಿಲಕ ಶ್ರೀಶ್ರೀಪಾದರಾಜರು, ವ್ಯಾಸತ್ರಯಗಳ ಶ್ರೀವ್ಯಾಸ-ರಾಜರು, ಯುಕ್ತಿಮಲ್ಲಿಕೆಯ ಶ್ರೀವಾದಿರಾಜರು, ಭಾವಬೋಧಕಾರ ಶ್ರೀರಘೂತ್ತಮರು, ಕಲಿಯುಗದ ಕಲ್ಪವೃಕ್ಷ ಕಾಮಧೇನು ಎನ್ನಿಸಿರುವ ಶ್ರೀರಾಘವೇಂದ್ರರು ಇವರ ಪರಂಪರೆಯ ಯತಿಶೇಖರರು. ಪರಮತಧುರೀಣರಾಗಿದ್ದ ತ್ರಿವಿಕ್ರಮಪಂಡಿತರು ಇವರಿಗೆ ಮಣಿದು, ಇವರ ಪ್ರಿಯ ಶಿಷ್ಯರಲ್ಲೊಬ್ಬರೆನ್ನಿಸಿದರು. ಶ್ರೀಪುರಂದರದಾಸರು, ಶ್ರೀಕನಕದಾಸರು, ಶ್ರೀವಿಜಯದಾಸರು, ಶ್ರೀಗೋಪಾಲದಾಸರು, ಶ್ರೀಜಗನ್ನಾಥದಾಸರು ಇವರ ಉಪದೇಶಾಮೃತವನ್ನು ಕನ್ನಡದಲ್ಲಿ ಆವಿಷ್ಕರಿಸಿದ ಪ್ರಸಿದ್ಧ ಹರಿದಾಸರು.

## ಕೃಷ್ಣಾಮೃತಮಹಾರ್ಣವ

ಸರ್ವಮೂಲಗ್ರಂಥಗಳಲ್ಲಿ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀ-ನಿರ್ಣಯ, ಪ್ರಣವಕಲ್ಪ ಮತ್ತು ತಂತ್ರಸಾರಸಂಗ್ರಹ ಎಂಬ ಐದು ಕೃತಿಗಳು ಆಚಾರವಿಭಾಗಕ್ಕೆ ಸೇರುವ ಅಪೂರ್ವಕೃತಿಗಳು. ಸದಾಚಾರಸ್ಮೃತಿಯಲ್ಲಿ ದೈನಂದಿನಸದಾಚಾರ ನಿರೂಪಿತ-ವಾಗಿದ್ದರೆ, ಯತಿಪ್ರಣವಕಲ್ಪದಲ್ಲಿ ವಿಶೇಷವಾಗಿ ಯತಿಗಳ ನಿತ್ಯಾಹ್ನಿಕವಿಧಿ ನಿರೂಪಿತವಾಗಿದೆ. ಜಯಂತೀನಿರ್ಣಯದಲ್ಲಿ ಕೃಷ್ಣಜಯಂತೀ ಉಪವಾಸದ ವಿಧಿವಿಧಾನಗಳು ಸಂಗೃಹೀತ-ವಾಗಿವೆ. ತಂತ್ರಸಾರಸಂಗ್ರಹವು ಮಂತ್ರಜಪದ ವಿಧಿವಿಧಾನಗಳು, ದೇವಪೂಜಾವಿಧಿ,

ತತ್ತ್ವನ್ಯಾಸ ಮಾತೃಕಾನ್ಯಾಸಾದಿಗಳ ವಿವರ, ಹೋಮವಿಧಿ, ದೇವತಾಪ್ರತಿಷ್ಠೆಯ ಸಮಗ್ರ ವಿಧಿವಿಧಾನಗಳು ಹಾಗೂ ಬಗೆಬಗೆಯ ಮಹಾಮಂತ್ರಗಳ ವಿವರಣೆ ಹಾಗೂ ಧ್ಯಾನಕ್ರಮಗಳನ್ನು ಒಳಗೊಂಡಿದೆ.

ಕೃಷ್ಣಾಮೃತಮಹಾರ್ಣವವು ಸಮಗ್ರಸದಾಚಾರದ ಸ್ವರೂಪವನ್ನು ಅನಾವರಣಗೊಳಿಸುವ ಮಹತ್ತರವಾದ ಕೃತಿ. ಇದನ್ನು ವೈದ್ಯನಾಥೇಶ್ವರವೆಂಬುದಾಗಿ ಪ್ರಸಿದ್ಧವಾಗಿರುವ ಕೊಕ್ಕಡ ಎಂಬ ಊರಿನಲ್ಲಿ ಇಡೆಪ್ಪಾಡಿತ್ತಾಯ ಎಂಬ ಭಕ್ತನ ಪ್ರಾರ್ಥನೆಯಂತೆ ಶ್ರೀಮದಾಚಾರ್ಯರು ರಚಿಸಿದರೆಂಬ ಮಾತು ಸುಮಧ್ವವಿಜಯ ಮತ್ತು ಅದರ ವ್ಯಾಖ್ಯಾನಗಳಲ್ಲಿ ಬಂದಿದೆ:

**ಕ್ಷೇತ್ರಾಗ್ರ್ಯಂ ತ್ರಿಭುವನವೈದ್ಯನಾಥನಾಥಂ**
**ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವೀ ।**
**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ**
**ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ ॥ (೧೬/೪೦)**

ಅರ್ಜುನನೊಬ್ಬನಿಗೆ ಶ್ರೀಕೃಷ್ಣ ಉಪದೇಶಿಸಿದ ಗೀತೆ ಸಕಲಸುಜನರ ಉದ್ಧಾರದ ಮಂಗಲಗೀತೆಯಾದಂತೆ, ಶ್ರೀಕೃಷ್ಣಭಕ್ತರಾದ ಶ್ರೀಮದಾಚಾರ್ಯರು ಇಡೆಪ್ಪಾಡಿತ್ತಾಯ ಎಂಬ ಭಕ್ತನಿಗೆ ಉಪದೇಶಿಸಿದ ಕೃಷ್ಣಾಮೃತಮಹಾರ್ಣವವು ಸಕಲಸದ್ಭಕ್ತರಿಗೆ ನೀಡಿದ ಆಧ್ಯಾತ್ಮಾಮೃತತರಂಗಿಣಿಯಾಗಿದೆ. ಆ ಭಕ್ತನ ಮನೆತನ ಇಂದೂ ಕೊಕ್ಕಡದಲ್ಲಿ ಉಳಿದುಬಂದಿದ್ದು, ಶ್ರೀಮದಾಚಾರ್ಯರು ಅನುಗ್ರಹಿಸಿದ ಜನಾರ್ದನ ಪ್ರತಿಮೆಯೊಂದು ಅವರಲ್ಲಿದೆ.

**ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥**

**ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।**
**ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥**

– ಎಂಬ ಇದರ ಮಾತುಗಳಲ್ಲಿ ಇದರ ಮಹತ್ತ್ವ ಪ್ರತಿಪಾದಿತವಾಗಿದೆ.

## 'ಕೃಷ್ಣಾಮೃತಮಹಾರ್ಣವ' ಕೃತಿಯ ಸಾರ

ಅರ್ಚನೆ, ಸ್ಮರಣೆ, ಧ್ಯಾನ, ಕೀರ್ತನ, ಕಥನ ಮತ್ತು ಶ್ರವಣಗಳಿಗೆ ಭಗವಂತ ಒಲಿದು ಮುಕ್ತಿ ನೀಡುವನು ಎಂಬ ಸಂದೇಶದೊಂದಿಗೆ ಪ್ರಾರಂಭವಾಗುವ ಈ ಕೃತಿಯಲ್ಲಿ ಮುಂದೆ ಈ ಆರುಸಾಧನಗಳ ಮಹತ್ತ್ವ ಮತ್ತು ವಿಧಿವಿಧಾನಗಳು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿತವಾಗಿವೆ.

ಪ್ರಧಾನವಾಗಿ ಇಲ್ಲಿಯ ಶ್ಲೋಕಗಳು ವಿಷ್ಣುಪುರಾಣ ಮೊದಲಾದ ಆಕರಗ್ರಂಥಗಳ ಶ್ಲೋಕಗಳ ಸಂಕಲನ; ಸುಮಧ್ವವಿಜಯ ಹೇಳಿರುವಂತೆ **'ಸದ್ವಚನತತಿ'**. ನಾಲ್ಕಾರು ಶ್ಲೋಕಗಳನ್ನು ಬಿಟ್ಟರೆ, ಇಲ್ಲಿಯ ಉಳಿದಶ್ಲೋಕಗಳೆಲ್ಲ ಪ್ರಧಾನವಾಗಿ ಪ್ರಮಾಣವಚನಗಳೇ ಆಗಿವೆ. ವಿಭಿನ್ನ ಆಕರಗಳ ಪ್ರಮಾಣವಚನಗಳನ್ನು ಉದಾಹರಿಸುವಾಗ 'ಶಂಕರಃ', 'ಯಮಃ', 'ಪುಲಸ್ತ್ಯಃ', 'ಪುಲಹಃ' ಮೊದಲಾಗಿ ಆ ವಚನ ನುಡಿದ ಮಹನೀಯರ ಹೆಸರುಗಳನ್ನೂ ಉಲ್ಲೇಖಿಸಿರುವುದು ಈ ಕೃತಿಯ ಮತ್ತೊಂದು ವಿಶೇಷತೆ. ಇದರಿಂದಾಗಿ ವಿಭಿನ್ನಕೃತಿಗಳ ಹೃದಯ ಎಂಬುದರ ಜೊತೆಗೆ, ವಿಭಿನ್ನಜ್ಞಾನಿಗಳ ಒಟ್ಟು ತೀರ್ಮಾನ (**'ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ'**- ಗೀತಾ-೨/೪೧) ಎಂಬ ಮತ್ತೊಂದು ರೀತಿಯ ಆಧಾರದಿಂದಲೂ ಹರಿಸರ್ವೋತ್ತಮತ್ವಾದಿ ಪ್ರಮೇಯಗಳು ನಿರೂಪಿತ-ವಾದಂತಾಗಿದೆ. ಈ ಕಾರಣದಿಂದಲೇ ಇದು ವಾಸಿಷ್ಠಕೃಷ್ಣರಾದ ಶ್ರೀವೇದವ್ಯಾಸದೇವರ ವಚನಾಮೃತಮಹಾರ್ಣವವೂ ಆಗಿ ಮಾನ್ಯವಾಗುವ ವಿಶಿಷ್ಟ ಕೃತಿ ಎನ್ನಿಸುವುದು. ಕೃಷ್ಣಾಮೃತಮಹಾರ್ಣವ ಎಂಬ ಇದರ ಹೆಸರು ಈ ಗ್ರಂಥಕ್ಕೆ ಮಾತ್ರವಲ್ಲದೇ ಕೃತಿಕಾರರಾದ ಶ್ರೀಮಧ್ವಾಚಾರ್ಯರಿಂದ ಉಡುಪಿಯಲ್ಲಿ ಪ್ರತಿಷ್ಠಾಪಿತವಾಗಿರುವ ಶ್ರೀಕೃಷ್ಣನಿಗೂ ಅನ್ವಯಿಸುವಂತಾಗಿ, ಅವನ ಮಹಿಮಾಮೃತಮಹಾರ್ಣವವೂ ಆಗಿದೆ; ಅದೂ ಸಹ ಭಕ್ತರ ಸಾಧನೆಗೆ ಒದಗುವ ವಿಘ್ನ ನಿವಾರಣೆಯ ಪರಮೋಪಾಯ ಎಂಬ ಪ್ರತೀತಿಯನ್ನೇ ಹೊಂದಿದೆ: **'ಸಿದ್ಧಿವಿಘ್ನಮುಖದೋಷಭೇಷಜಮ್'** (ಮಧ್ವವಿಜಯ ೯/೪೦); ಒಟ್ಟಾಗಿ ಇದು ಅವರ ಸರ್ವಮೂಲವೆನ್ನಿಸಿರುವ ಸಕಲ ಕೃತಿಗಳಿಗೂ ಅನ್ವಯಿಸುವ ಹೆಸರೂ ಆಗಿದೆ ಎನ್ನಬಹುದು.

ದೇವಪೂಜೆ ಜೀವನದ ಪ್ರಧಾನ ಫಲಶ್ರುತಿ; ವಿಷ್ಣುವು ಸಕಲದೇವೋತ್ತಮನಾದ್ದರಿಂದ ಅವನ ಆರಾಧನೆ ಸಕಲದೇವತೆಗಳ ಒಲುಮೆಗೂ ಸಾಧನ. ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಸಾರ್ಥಕ್ಯ ದೇವಪೂಜೆ ನಡೆದಾಗಲೇ; ಹರಿಯ ಆರಾಧನೆಗೆ ವಿಶೇಷ ದ್ರವ್ಯಗಳೇನೂ ಬೇಕಿಲ್ಲ; ಬೇರೇನೂ ಇಲ್ಲವಾದಾಗ ಕೇವಲ ಜಲದಿಂದಲೂ ಭಗವಂತನು ಪ್ರೀತನಾಗುವನು; ಸಾಲಿಗ್ರಾಮ, ಚಕ್ರಾಂಕಿತಗಳನ್ನು ಅವಶ್ಯ ಪೂಜಿಸಲೇಬೇಕು. ಇವುಗಳು ಇರುವ ಸ್ಥಳವು ಮಾತ್ರವಲ್ಲದೆ ಸುತ್ತಮುತ್ತದ ಯೋಜನಗಟ್ಟಲೆ ಪ್ರದೇಶವೂ ಕ್ಷೇತ್ರವೆನ್ನಿಸುವುದು. ಪ್ರತಿಯೊಬ್ಬನೂ ತಾನೇ ದೇವಪೂಜೆ ಮಾಡಿ ಸಿದ್ಧಪಡಿಸುವ ತೀರ್ಥ ಗಂಗಾದಿತೀರ್ಥಗಳಿಗಿಂತ ಮಿಗಿಲು; ಪ್ರದಕ್ಷಿಣೆ, ನಮಸ್ಕಾರಗಳು ಪೂಜೆಯ ಅಂಗಗಳು. ಪ್ರದಕ್ಷಿಣೆಯ ಹೆಜ್ಜೆಹೆಜ್ಜೆಗೂ ಜನ್ಮಾಂತರದ ಪಾಪಗಳು ನಶಿಸುತ್ತವೆ. ಒಂದೊಂದು ನಮಸ್ಕಾರವೂ ಅತಿ ಕಡಿಮೆ ಎಂದರೂ ಹತ್ತು ಅಶ್ವಮೇಧಯಾಗಗಳ ಪುಣ್ಯ ನೀಡುತ್ತದೆ. ಪ್ರತಿದಿನ ಸಾಲಿಗ್ರಾಮ ಸ್ಪರ್ಶಿಸಿ ಪೂಜಿಸುವವನ ಕೈಹಿಡಿದು ಉದ್ಧರಿಸಲು ಇಂದ್ರಾದಿದೇವತೆಗಳು ಕಾಯುತ್ತಿರುತ್ತಾರೆ. ದೇವಪೂಜೆಯನ್ನು ವಿಧ್ಯುಕ್ತಕ್ರಮದಲ್ಲಿ

ಶ್ರದ್ಧೆಯಿಂದ ಮಾಡಿದರೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದೂ ದುರ್ಲಭವಲ್ಲ.

ಭಗವಂತನ ಒಂದೊಂದು ನಾಮದ ಉಚ್ಚಾರಣೆಯೂ ಅತ್ಯಂತತಾರಕ; ಸಕಲ ಪಾಪನಾಶಕ. ಭಗವಂತನಿಗೆ ಸಮರ್ಪಿಸಿದ ಧೂಪ, ದೀಪ, ಮಂಗಳಾರತಿ, ನೈವೇದ್ಯ ಮೊದಲಾಗಿ ಸಕಲವನ್ನೂ ಶ್ರದ್ಧೆಯಿಂದ ಸ್ವೀಕರಿಸಬೇಕು. ವಿಷ್ಣುನೈವೇದ್ಯಶೇಷದ ಕಣಕಣವೂ ಚಾಂದ್ರಾಯಣವ್ರತಕ್ಕಿಂತ ಹೆಚ್ಚಿನ ಪುಣ್ಯವನ್ನು ನೀಡುವುದು. ಇತರದೇವತೆಗಳ ನೈವೇದ್ಯ ಸರ್ವಥಾ ಹೀಗೆ ಗ್ರಾಹ್ಯವಲ್ಲ. ವಿಷ್ಣುಪೂಜೆ, ವಿಷ್ಣುಸ್ಮರಣೆಗಳಂತೆ, ವಿಷ್ಣುಧ್ಯಾನವೂ ಅತ್ಯಂತಪಾವನ. ವಿಷ್ಣುವನ್ನು ಬಿಟ್ಟು ಇತರ ದೇವತೆಗಳನ್ನು ಸರ್ವೋತ್ತಮರೆಂದು ಆರಾಧಿಸುವವನು ಗಂಗೆಯ ತೀರದಲ್ಲಿ ಜಲಕ್ಕಾಗಿ ಬಾವಿ ತೋಡುವ, ತಾಯಿಯನ್ನು ತೊರೆದು ದಾಸಿಯನ್ನು ಪೂಜಿಸುವ, ಗೋವನ್ನು ಬಿಟ್ಟು ಗಾರ್ದಭಕ್ಕೆ ಮಣಿಯುವ, ಅಮೃತವನ್ನು ತೊರೆದು ಹಾಲಾಹಲವನ್ನು ಕುಡಿಯುವ ಮೂರ್ಖನೇ ಸರಿ. ಗೋಪೀಚಂದನಧಾರಣೆ ಅತ್ಯಂತ ಪಾವನ; ಅದನ್ನು ಧರಿಸದೆ ಮಾಡುವ ಜಪ, ಧ್ಯಾನ, ತಪಸ್ಸು, ಪಾಠ, ಪ್ರವಚನ, ಬ್ರಹ್ಮಯಜ್ಞ, ಪಿತೃಕಾರ್ಯ ಮೊದಲಾದ ಎಲ್ಲಾ ಸತ್ಕಾರ್ಯಗಳೂ ನಿಷ್ಫಲ. ಗೋಪೀಚಂದನ ಧರಿಸಿದವನು ನೋಡುವ ವಸ್ತುಗಳೂ ಪಾವನ. ಗೋಪೀಚಂದನಧಾರಣೆಯಂತೆ ಗೋಪೀಚಂದನದ ದಾನವೂ ಅತ್ಯಂತ ವಿಹಿತ. ಊರ್ಧ್ವಪುಂಡ್ರಧಾರಣೆ ವಿಹಿತ; ತಿರ್ಯಕ್ಪುಂಡ್ರ ಸರ್ವಥಾ ನಿಷಿದ್ಧ.

[೧]ಏಕಾದಶ್ಯುಪವಾಸವು ಪ್ರತಿಯೊಬ್ಬ ಸ್ತ್ರೀಪುರುಷರಿಗೂ, ಸಕಲವರ್ಣಾಶ್ರಮದವರಿಗೂ, ಒಟ್ಟಾಗಿ ಸಕಲಮಾನವರಿಗೂ ವಿಹಿತವಾಗಿರುವ ಕಡ್ಡಾಯ ವ್ರತ. ಇದರ ಆಚರಣೆಯಿಂದ ದೇಹದೊಳಗಿನ ಸಕಲದೋಷಗಳೂ ನಾಶವಾಗುವವು; ಏಕಾದಶೇಂದ್ರಿಯಗಳಿಂದ ಮಾಡಿದ ಸಕಲಪಾಪಗಳೂ ಏಕಾದಶ್ಯುಪವಾಸದಿಂದ ಪರಿಹಾರವಾಗುವುವು; ಇದಕ್ಕಿಂತ ಮಿಗಿಲಾದ ಮತ್ತೊಂದು ವ್ರತವೇ ಇಲ್ಲ; ಗಂಗಾದಿಸಕಲತೀರ್ಥಗಳೂ, ಕುರುಕ್ಷೇತ್ರಾದಿ ಸಕಲಕ್ಷೇತ್ರಗಳೂ, ಅಶ್ವಮೇಧಾದಿ ಸಕಲಯಾಗಗಳೂ ಏಕಾದಶ್ಯುಪವಾಸದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸವು; ಇದನ್ನು ಆಚರಿಸುವವರಿಗೆ ಯಮಲೋಕದ ಭಯವಿಲ್ಲ; ಶನಿ ಮೊದಲಾದ ಗ್ರಹಗಳ ದೋಷವೂ ಬಾಧಿಸುವುದಿಲ್ಲ. ಏಕಾದಶಿಯಂದು ಆಹಾರ ಸ್ವೀಕರಿಸುವುದು ಸಕಲ ಮಹಾಪಾಪಗಳಿಗೂ ಸಮನಾಗುವ ಮಹಾಪಾತಕ; ಎಲ್ಲ ಪಾಪಗಳೂ ಅಂದು ತಿನ್ನುವ ಆಹಾರದಲ್ಲಿ ನೆಲೆಸಿರುವುವು. ಆದ್ದರಿಂದ ಅಂದು ಸಂಪೂರ್ಣ ಉಪವಾಸವನ್ನೇ ಆಚರಿಸಬೇಕು[೨]; ಏಕಾದಶಿಯನ್ನು ತಾನು ಆಚರಿಸುವಂತೆ, ಇತರರಿಗೂ

---

೧. ಏಕಾದಶೀವ್ರತದ ಹಿರಿಮೆ, ಆಚರಣೆ ಮೊದಲಾದವುಗಳ ವಿವರಗಳನ್ನು ನಮ್ಮ ಪ್ರಕಾಶನದ 'ಏಕಾದಶೀವ್ರತ' ಎಂಬ ಕೃತಿಯಲ್ಲಿ ಕೊಡಲಾಗಿದೆ.

೨. ಏಕಾದಶೀವ್ರತದ ಆಚರಣೆಯಿಂದ ಆಹಾರದ ಮಹತ್ತ್ವ ಮನವರಿಕೆಯಾಗಿ, ಅದರ ಸಂರಕ್ಷಣೆ, ಅದರ ವಿನಿಯೋಗದ ಬಗ್ಗೆ ಜಾಗ್ರತೆ ಹುಟ್ಟುವುದು. ವೈದ್ಯಶಾಸ್ತ್ರ ತಿಳಿಸುವಂತೆ, ಏಕಾದಶೀವ್ರತವು ದೇಹದಲ್ಲಿನ ಸಕಲ

ಕಲ್ಮಷಗಳನ್ನು ಸಹ ಸಂಪೂರ್ಣವಾಗಿ ಹೊರಹಾಕುವ ರಾಜಮಾರ್ಗವಾಗಿದೆ; ಏಕಾದಶೀವ್ರತದ ಆಚರಣೆಯಿಂದ ದೇಹದಲ್ಲಿನ ರೋಗನಿರೋಧಕ ಶಕ್ತಿ ಹೆಚ್ಚಿ ರೋಗಗಳಿಂದಾಗುವ ಅಪಾಯದಿಂದ ಪಾರಾಗಬಹುದು; ಅದರಂತೆ, ಕಾರಣಾಂತರದಿಂದ ಒದಗಿದ ಭಯಾನಕ ರೋಗಗಳಿಂದ ಬಿಡುಗಡೆಯನ್ನೂ ಹೊಂದಬಹುದು. ಏಕಾದಶಿಯ ಉಪವಾಸ ದೇಹದಲ್ಲಿ ಕ್ಷಯಿಸಿ ಸತ್ತ್ವಹೀನವಾಗುವ ಜೀವಕೋಶಗಳನ್ನು ಹೊರಹಾಕಿ, ಹೊಸ ಜೀವಕೋಶಗಳು ರೂಪುಗೊಳ್ಳಲು ನೆರವಾಗುವುದು. ಬುದ್ಧಿಶಕ್ತಿ, ಸ್ಮೃತಿಶಕ್ತಿ ಬಹಳವಾಗಿ ಹೆಚ್ಚಿ ಇಹಪರಗಳ ಸಾಧನೆಗೆ ಅನುಕೂಲವಾಗುವುದು. ದೇಹದೊಂದಿಗೆ ಸಕಲ ಇಂದ್ರಿಯಗಳು ಸಹ ಪುನಶ್ಚೈತನ್ಯವನ್ನು ಗಳಿಸಿ ತಮ್ಮ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸುವಂತಾಗುವುದು. ಮನಸ್ಸಿನಲ್ಲಿ ಉಲ್ಲಾಸ ಮೂಡುವುದು. ದೇಹ ಹಗುರವೆನ್ನಿಸಿ ಉತ್ಸಾಹ ಚಿಮ್ಮತೊಡಗುವುದು. ಮನಸ್ಸಿನ ಶಕ್ತಿ ಅಪಾರವಾಗಿ ಹೆಚ್ಚಿ ಜೀವನದಲ್ಲಿ ಉಂಟಾಗುವ ಏರುಪೇರುಗಳನ್ನು ನಿಯಂತ್ರಿಸುವ ಸಾಮರ್ಥ್ಯ ಹುಟ್ಟುವುದು. ದೇಹದ ತೂಕವು ನಿಯಂತ್ರಣದಲ್ಲಿರುವ ಮೂಲಕ ರಕ್ತದೊತ್ತಡ, ಮಧುಮೇಹ ಮೊದಲಾದ ಅಪಾಯಕರವಾದ ರೋಗಗಳಿಂದ ದೂರವಿರಲು ಸಾಧ್ಯವಾಗುವುದು. ದೈಹಿಕ ಶಕ್ತಿ ಕುಂದಿದಂತೆ ಕಂಡರೂ, ಮಾನಸಿಕ ಶಕ್ತಿ ಅಪಾರವಾಗಿ ಹೆಚ್ಚುವುದರಿಂದ ದೇಹದ ಒಟ್ಟು ಸಾಮರ್ಥ್ಯವೇ ಗಮನಾರ್ಹಪ್ರಮಾಣದಲ್ಲಿ ವೃದ್ಧಿಸುವುದು. ದೇಹದಲ್ಲಿ ಪುನಶ್ಚೈತನ್ಯಗೊಳ್ಳುವ ಜೀವಕೋಶಗಳಿಂದಾಗಿ ಆಯುಷ್ಪ್ರಮಾಣವು ಹೆಚ್ಚುವುದು. ವೃದ್ಧಾಪ್ಯವನ್ನು ತಡೆಗಟ್ಟಲು ಸಹ ಉಪವಾಸದಿಂದಾಗುವ ಪ್ರಯೋಜನ ತುಂಬಾ ದೊಡ್ಡದು. ದೇಹದಲ್ಲಿನ ರಕ್ತ ಶುದ್ಧವು, ತೆಳುವು ಆಗುವುದರಿಂದ ಹೃದಯಸ್ತಂಭನ ಮೊದಲಾದ ಅಪಾಯಕರವಾದ ರೋಗಗಳು ಸಹ ದೂರಾಗುವವು. ಯೌವ್ವನವು ದೀರ್ಘಕಾಲ ಉಳಿಯುವಂತಾಗಿ ಜೀವನ ಸುಖಮಯವಾಗುವುದು. ಚಿಕ್ಕಂದಿನಿಂದಲೇ ಆರಂಭಿಸುವ ಏಕಾದಶೀವ್ರತವು ಸಮಗ್ರ ಜೀವನಕ್ಕೆ ಹೊಸ ಆಯಾಮವನ್ನು ನೀಡಿ, ಸಕಲ ರೀತಿಯ ಪ್ರಗತಿಗೂ ಸಾಧನವಾಗುವುದು. ಕೆಲವರು ತಪ್ಪು ತಿಳಿದಿರುವಂತೆ ನಿರ್ಜಲೀಕರಣ ಮೊದಲಾದವುಗಳು ಉಂಟಾಗಿ ದೇಹವು ಬಳಲುವುದು ಎಂಬುದು ಸರ್ವಥಾ ಸರಿಯಲ್ಲ. ಮನಸ್ಸಿನ ವಿಚಾರಶಕ್ತಿ ಹೆಚ್ಚುವುದರಿಂದ ಜೀವನದಲ್ಲಿ ಅನೇಕ ಸಮಸ್ಯೆಗಳನ್ನು ವಿವೇಕದಿಂದ ಎದುರಿಸಲು, ಸೂಕ್ತವಾಗಿ ಪರಿಹರಿಸಿಕೊಳ್ಳಲು ಸಾಧ್ಯವಾಗುವುದು; ಸಕಲ ಗ್ರಹಗಳು ಸಹ ಭಗವದಾಜ್ಞಾವರ್ತಿಗಳಾದ್ದರಿಂದ ಭಗವಂತನ ವಿಶೇಷ ಆರಾಧನೆಗೆ ಸಾಧನವಾಗುವ ಏಕಾದಶೀವ್ರತದಿಂದಾಗಿ ಶನಿ, ರಾಹು, ಮೊದಲಾದವುಗಳ ಪ್ರಭಾವದಿಂದ ಉಂಟಾಗುವ ಕೆಲವು ಅನಿಷ್ಟಗಳು ಸಹ ಗಮನಾರ್ಹಪ್ರಮಾಣದಲ್ಲಿ ಪರಿಹಾರ ಕಾಣುವವು. ಮನಃಶುದ್ಧಿಯುಂಟಾಗಿ ಪಾಪಕಾರ್ಯದಲ್ಲಿ ತೊಡಗುವ ಅಪಾಯವು ದೂರಾಗುವುದರಿಂದ ನರಕಪ್ರಾಪ್ತಿಯ ಅಪಾಯವು ಸಹ ತಪ್ಪುವುದು. ಅಪಾರಪ್ರಮಾಣದ ಆಹಾರದ ಉಳಿತಾಯದಿಂದಾಗಿ ಮನೆಯಲ್ಲಿ ಹಾಗೂ ದೇಶದಲ್ಲಿ ಆಹಾರದ ಕೊರತೆಯು ನಿವಾರಣೆಯಾಗುವುದು; ಸಂಪತ್ತು ಸಹ ವೃದ್ಧಿಸುವುದು. ಸಂತಾನಹೀನರಿಗೆ ಸಂತಾನವು ಸಹ ಲಭಿಸುವುದು. ಉಪವಾಸದಿಂದಾಗುವ ಪ್ರಯೋಜನವನ್ನು ಆಧುನಿಕ ವೈದ್ಯಶಾಸ್ತ್ರ ಹಿಂದೆಂದಿಗಿಂತಲೂ ಹೆಚ್ಚಾಗಿ ಇಂದು ಗುರುತಿಸಿದೆ. ಕಳೆದ ಬಾರಿಯ ವಿಶ್ವಖ್ಯಾತಿಯ ನೋಬಲ್ ಪ್ರಶಸ್ತಿ ಲಭಿಸಿರುವುದು ಸಹ ಉಪವಾಸದಿಂದಾಗುವ ಸತ್ಪ್ರಯೋಜನದ ವಿಶ್ಲೇಷಣೆಗಾಗಿಯೇ ಎಂಬುದು ಗಮನಿಸಬೇಕಾದ ಸಂಗತಿ. ಜಾತಿ, ಮತಗಳನ್ನು ಮೀರಿ ಏಕಾದಶಿ ಆಚರಣೆಯ ವಿಧಿ ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವುದರಿಂದ ಇದು ಸಾರ್ವಜನಿಕವಾದ, ಸಾರ್ವಕಾಲಿಕವಾದ, ಸಾರ್ವದೇಶಿಕವಾದ ಅಪೂರ್ವವ್ರತವಾಗಿದೆ. ವೇದೋಪನಿಷತ್ತುಗಳನ್ನೊಳಗೊಂಡಂತೆ ಸಕಲ ಶಾಸ್ತ್ರಗಳು ಸಹ ಈ ವ್ರತದ ಮಹತ್ತ್ವವನ್ನು ಮುಕ್ತಕಂಠದಿಂದ ಶ್ಲಾಘಿಸಿವೆ. ಧರ್ಮಶಾಸ್ತ್ರಗಳಂತೂ ಇದರ ಆಚರಣೆಯನ್ನು ಪರಿಪರಿಯಾಗಿ ವರ್ಣಿಸಿವೆ. ಎಲ್ಲ ವ್ರತಗಳಿಗು ಪ್ರವೇಶರೂಪವಾಗಿರುವ ಈ ವ್ರತ ಐಚ್ಛಿಕವ್ರತಗಳ ಸಾಲಿಗೆ ಸೇರದೆ, ಸರ್ವರಿಗೂ, ಸರ್ವಕಾಲಕ್ಕೂ ಕಡ್ಡಾಯವೆನ್ನಿಸಿದ ವ್ರತವಾಗಿದೆ. ನಿರೋಗಿಗಳಿಗೆ ರೋಗ ಬರುವ ಅಪಾಯ ತಪ್ಪುವಂತೆ, ರೋಗಿಗಳಿಗೆ ರೋಗನಿವಾರಣೆಯ ಉಪಾಯವೂ ಆಗಿ ಮಾನ್ಯವಾಗಿದೆ. ಇದರೊಂದಿಗೆ ವರ್ಷಕ್ಕೊಮ್ಮೆ

ಆಚರಿಸುವಂತೆ ತಿಳಿಸಿಕೊಡಬೇಕು[೧]; ಆದರಿಂದ ಹನ್ನೆರಡು ಏಕಾದಶೀವ್ರತದ ಪುಣ್ಯವು ಹೆಚ್ಚಾಗಿ ಲಭಿಸುವುದು.

ಹರಿದಿನದ ಉಪವಾಸದಂತೆ ದ್ವಾದಶೀಪಾರಣೆಯೂ ವಿಹಿತ; ಸಾಧನೆ ಇದ್ದಾಗ ಅಷ್ಟರಲ್ಲಿಯೇ ಪಾರಣೆ ವಿಹಿತ; ಹರಿವಾಸರವಿದ್ದಾಗ ಅದು ಕಳೆದ ಮೇಲೆಯೇ ಪಾರಣೆ. ಸಾಧನೀದ್ವಾದಶಿಯನ್ನು ಆಚರಿಸದಿದ್ದಲ್ಲಿ ಹನ್ನೆರಡು ಏಕಾದಶಿಗಳ ಪುಣ್ಯ ನಾಶವಾಗುವುದು. ಏಕಾದಶೀ ಉಪವಾಸದಂತೆ ಶ್ರವಣದ್ವಾದಶೀ, ಅತಿರಿಕ್ತದ್ವಾದಶಿಗಳಂದು ಸಹ ಉಪವಾಸವನ್ನು ಮಾಡಲೇಬೇಕು. ಶ್ರವಣದ್ವಾದಶೀ ಆಚರಿಸದಿದ್ದರೆ ಐದು ವರ್ಷಗಳ ಸಕಲಪುಣ್ಯಗಳು ನಿಷ್ಫಲ. ಅತಿರಿಕ್ತದ್ವಾದಶೀ ಆಚರಿಸದಿದ್ದಲ್ಲಿ ಹನ್ನೆರಡು ಏಕಾದುಶ್ಯುಪವಾಸಗಳ ಪುಣ್ಯನಾಶ. ಏಕಾದಶೀ ಉಪವಾಸ ಮಾಡದ ತಂದೆ, ತಾಯಿ, ಅಣ್ಣತಮ್ಮಂದಿರು, ಅಕ್ಕತಂಗಿಯರು ಮಕ್ಕಳು ಮೊದಲಾಗಿ ಎಲ್ಲರೂ ನಿಂದ್ಯರೇ ಸರಿ.

ಏಕಾದಶಿಯು ದಶಮಿವಿದ್ಧವಾಗಿದ್ದಾಗ, ಎಂದರೆ ಏಕಾದಶಿಯಂದು ಅರುಣೋದಯ-ಕಾಲದಲ್ಲಿ ದಶಮೀತಿಥಿಯ ಸಂಪರ್ಕವಿದ್ದಾಗ, ಉಪವಾಸ ಮಾಡುವುದು ವಿಹಿತವಲ್ಲ. ಆದ್ದರಿಂದ ಪುತ್ರರು, ಐಶ್ವರ್ಯಾದಿಗಳು ನಾಶವಾಗುವವು. ದಶಮೀವಿದ್ಧ ಏಕಾದಶಿಯಂದು ಉಪವಾಸ ಆಚರಿಸದೆ ದ್ವಾದಶಿಯಂದು ಉಪವಾಸ ಆಚರಿಸಿ, ತ್ರಯೋದಶಿಯಂದು ಪಾರಣ ಮಾಡಬೇಕು. ವೇಧದ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ, ಆ ಬಾರಿ ಅಂತಹ ಏಕಾದಶಿಯಂದು ಉಪವಾಸ ಮಾಡದೇ ದ್ವಾದಶಿಯಂದು ಉಪವಾಸ ಮಾಡುವುದೇ ವಿಹಿತ.

ಏಕಾದಶಿಯು ಮೂಲವ್ರತ; ಇದನ್ನು ಆಚರಿಸದೆ ಬೇರಾವ ವಿಹಿತವ್ರತ ಮಾಡಿದರೂ ನಿಷ್ಫಲ, ನಿಷಿದ್ಧವ್ರತಗಳನ್ನಂತೂ ಆಚರಿಸಲೇಕೂಡದು; (ಅನಂತವ್ರತ, ವರದ-

---

ಬರುವ ಕೃಷ್ಣಾಷ್ಟಮೀ (ಕೃಷ್ಣಜಯಂತೀ)ವ್ರತವನ್ನು ಸಹ ಇದರಂತೆಯೇ ಕಡ್ಡಾಯವಾಗಿ ಆಚರಿಸುವ ವಿಧಿಯನ್ನು ಶಾಸ್ತ್ರಗಳು ಸಾರಿವೆ. ಈ ಎರಡು ವೈಷ್ಣವ ವ್ರತಗಳ ಆಚರಣೆ ನಿಜವಾದ ವೈಷ್ಣವದೀಕ್ಷೆ ಎನ್ನಿಸಿ ಪೂರ್ಣಪ್ರಮಾಣದಲ್ಲಿ ಸಾಧನೆಗೆ ನೆರವಾಗುವುದು. ಹರಿದಾಸಸಾಹಿತ್ಯದಲ್ಲೂ ಏಕಾದಶೀವ್ರತದ ಹಿರಿಮೆ-ಗರಿಮೆಗಳ ನಿರೂಪಣೆ ತುಂಬಾ ವಿಸ್ತಾರವಾಗಿಯೇ ಕಂಡುಬರುತ್ತದೆ. ಸಕಲ ಪುರಾಣಗಳಲ್ಲೂ ಇದರ ಮಹಿಮೆ ಬಂದಿರುವಂತೆ ವಸಿಷ್ಠಾದಿ ಸಕಲ ಮಹಾಮುನಿಗಳ ಮಾತುಗಳಲ್ಲೂ ಇದರ ಹಿರಿಮೆ ನಿರೂಪಿತವಾಗಿದೆ.

೧. ಆಧುನಿಕ ಸಂಶೋಧನೆಗಳೂ ಸಹ ಉಪವಾಸವ್ರತದ ಹಿರಿಮೆಯನ್ನು ಬಹಳವಾಗಿ ಪ್ರತಿಪಾದಿಸಿವೆ. ದೇಹದ ಆರೋಗ್ಯ, ಮನಸ್ಸಿನ ಉಲ್ಲಾಸ, ತಾತ್ತ್ವಿಕಪರಿಶುದ್ಧಿ ನಿತ್ಯಯೌವನ ಮೊದಲಾದವುಗಳನ್ನು ಉಪವಾಸವ್ರತದಿಂದ ಸಾಧಿಸಬಹುದು ಎಂಬದನ್ನು ಸಂಶೋಧನೆಗಳು ದೃಢಪಡಿಸಿವೆ. 'Fasting can save your life' (by Dr. Herbert M. Shelton, published by American natural hygiene soceity, Indian edition published Prakruti Jivana Kendra, Bangalore, 1984) ಎಂಬ ಸುಮಾರು ಮುನ್ನೂರು ಪುಟಗಳ ಪುಸ್ತಕ ಉಪವಾಸದ ಬಹುಮುಖಪ್ರಯೋಜನವನ್ನು ಸಾಧಾರವಾಗಿ ನಿರೂಪಿಸಿದೆ. ಆದರಿಂದ ಸ್ಫುಟ- ಪಡುವ ಕೆಲವು ವಿಚಾರಗಳನ್ನು ಅನೇಕ ಗ್ರಂಥಗಳು ಸಂಗ್ರಹವಾಗಿ ನಿರೂಪಿಸಿವೆ.

ಮಹಾಲಕ್ಷ್ಮೀವ್ರತ) ಮೊದಲಾದ ವಿಹಿತವ್ರತಗಳೂ ಸಹ ಫಲಕಾರಿಯಾಗುವುದು ಏಕಾದಶಿಯನ್ನು ತಪ್ಪದೆ ಆಚರಿಸಿದಾಗ ಮಾತ್ರ. ಭಗವದಾರಾಧನೆಗೆ ಪುರುಷರಂತೆ ಸ್ತ್ರೀಯರೂ ಯಥೋಚಿತವಾಗಿ ಅರ್ಹರೇ ಆಗಿರುವರು[೧].

ಹದಿಮೂರು ತುಂಬಿದ ಪ್ರತಿಯೊಬ್ಬರೂ ಪ್ರತಿನಿತ್ಯವೂ ಮುಂದೆ ಕನಿಷ್ಠ ಹತ್ತು ಜನ್ಮಗಳಿಗೆ ಕಾರಣವಾಗುವಷ್ಟು ಕರ್ಮಗಳನ್ನು ಮಾಡುವರು; ಎಂದರೆ ಕರ್ಮದ ಬಂಧನ ಅತ್ಯಂತ ಗಾಢವಾದುದು. ಕೇವಲ ಕರ್ಮಾಚರಣೆಯಿಂದಲೇ ಅದನ್ನು ತೊಡೆಯುವುದು ಕೆಸರಿಂದ ಕೆಸರು ತೊಳೆದಂತೆ ದುಃಸಾಧ್ಯ. ಆದಕ್ಕೆ ತತ್ತ್ವಜ್ಞಾನವೇ ಪ್ರಧಾನಸಾಧನ. ಮಹಾ ಅಪರೋಕ್ಷಜ್ಞಾನಿಗೂ ಸಹ ಶಾಸ್ತ್ರೋಕ್ತವಾದ ವಿಹಿತಕರ್ಮಗಳ ಆಚರಣೆ ಕಡ್ಡಾಯ.

ಹೀಗೆ ಕೃಷ್ಣಾಮೃತಮಹಾರ್ಣವವು ಸದಾಚಾರದ ಸಮಗ್ರಸ್ವರೂಪವನ್ನೇ ತೆರೆದಿಡುವ ಅಪೂರ್ವಕೃತಿ. ಏಕಾದಶ್ಯುಪವಾಸದ ವಿಧಿವಿಧಾನಗಳ ನಿರೂಪಣೆಗೆ ಐವತ್ತಕ್ಕಿಂತ ಹೆಚ್ಚು ಶ್ಲೋಕಗಳು ಮೀಸಲಾಗಿವೆ. ಶ್ರೀಮದಾಚಾರ್ಯರೇ ತಿಳಿಸಿರುವಂತೆ ಇದು ಅಮೃತದ ಮಹಾರ್ಣವ; ಇಂದ್ರಜಿತ್‌ನ ಬಾಣಗಳಿಂದ ಮೃತನಾಗಿದ್ದ ಕಪಿಗಳನ್ನು ಮರಳಿ ಬದುಕಿಸಲು ಹನುಮದ್ರೂಪದಿಂದ ಸಂಜೀವನ ತಂದಿತ್ತ ಶ್ರೀವಾಯುದೇವರು, ಇಂದ್ರಿಯಗಳ ಸೆಳೆತಕ್ಕೆ ಸಿಲುಕಿ ಮೃತಪ್ರಾಯರಾದ ಜನರನ್ನು ಮರಳಿ ಬದುಕಿಸಲು ಶ್ರೀಮಧ್ವರೂಪದಿಂದ ಹೀಗೆ ಕೃಷ್ಣಾಮೃತಮಹಾರ್ಣವವನ್ನು ಒದಗಿಸಿರುವರು ಎಂದು ತಿಳಿಯಬೇಕು.

ಪ್ರಧಾನವಾಗಿ ಅನುಷ್ಟುಪ್ ಶ್ಲೋಕಗಳನ್ನು ಹೊಂದಿರುವ ಈ ಕೃತಿ, ಭಾಷೆಯಲ್ಲಿ ಅತ್ಯಂತಸುಲಭ; ಶೈಲಿಯಲ್ಲೂ ಅತ್ಯಂತಸರಳ ; ನಿರೂಪಣೆ ಮಾತ್ರ ಅತ್ಯಂತ ಪರಿಣಾಮಕಾರಿ. ಶ್ರವಣದ ಮಹತ್ತ್ವವನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುವ ಈ ಶ್ಲೋಕದ ಸೊಬಗನ್ನು ಗಮನಿಸಬಹುದು:

---

೧. The fasting cure universally and rationally applied, would save thousands of life every year- Dr.Page - (Q.in Fasting can save your life, P.65)

'The brain becomes wonderfully clear, the body grows into a recognition of its own power, languor, disinclination to mental and physical work disappears, and one enters upon his daily duties with a vim and energy and a delight that betokens the possession of the perfect and abounding health which is every man's birthright'

- Fasting can save your life By Dr.Herbert M.Shelton. P.49

'A fast gives rest to the various processes going on in the body such as digestion, blood-circulation, metabolism and revitalizes them. Fasting is a never-failing therapy for those patients who have been disappointed by numerous medicines and therapies for the cure of their diseases'

- Efficacy of Fasting, P.7

ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।
ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ಗಚ್ಛತಿ ॥

## 'ಕೃಷ್ಣಾಮೃತಮಹಾರ್ಣವ'ದ ವ್ಯಾಖ್ಯಾನಗಳು

೧. ನಾರಾಯಣಪಂಡಿತಾಚಾರ್ಯ ಕೃತ (ಅನುಪಲಬ್ಧ)
೨. ಶ್ರೀವಿಜಯಧ್ವಜತೀರ್ಥಕೃತ ವ್ಯಾಖ್ಯಾನ (ಅನುಪಲಬ್ಧ)
೩. ಶ್ರೀವಿಶ್ವೇಶ್ವರತೀರ್ಥಕೃತ ವ್ಯಾಖ್ಯಾನ (ಅನುಪಲಬ್ಧ)
೪. ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯ ಕೃತ (×ಪ್ರಕಾಶಿತ) (ಜ+)
೫. ತಾಮ್ರಪರ್ಣೀಶ್ರೀನಿವಾಸಾಚಾರ್ಯ[೧] ಕೃತ [೨]ತರಂಗಮಾಲಾ (×ಪ್ರಕಾಶಿತ; ಜ)
೬. ಉಮರ್ಜೀಪ್ರಹ್ಲಾದಕೃಷ್ಣಾಚಾರ್ಯಕೃತ (×ಪ್ರಕಾಶಿತ; ಜ)
೭. ವಾದರತ್ನಾವಲಿ ಬರೆದ ವಿಷ್ಣುದಾಸಾಚಾರ್ಯವಂಶದ ಉಪೇಂದ್ರಕೃಷ್ಣ-ಭಟ್ಟಾರ್ಯಸೂನುಕೃತ ವ್ಯಾಖ್ಯಾನ (×ಪ್ರಕಾಶಿತ; ಜ)
೮. ಕೋನೇರೀ ಆಚಾರ್ಯಕೃತ ವ್ಯಾಖ್ಯಾನ (×ಪ್ರಕಾಶಿತ; ಜ)
೯. ಕೃಷ್ಣಾಚಾರ್ಯಕೃತ ವ್ಯಾಖ್ಯಾನ (×ಪ್ರಕಾಶಿತ; ಜ)
೧೦. ತಾಮ್ರಪರ್ಣಿ ಆನಂದತೀರ್ಥಾಚಾರ್ಯಕೃತ (ಅನುಪಲಬ್ಧ)
೧೧. ಆನಂದತೀರ್ಥಾಚಾರ್ಯಶಿಷ್ಯಕೃತ ವ್ಯಾಖ್ಯಾನ (ಪಂಜಾಬ್ ವಿಶ್ವವಿದ್ಯಾಲಯ ಗ್ರಂಥಾಲಯ)
೧೨. ನರಸಿಂಹಕೃತ ವ್ಯಾಖ್ಯಾನ (ಬರೋಡಾ ವಿಶ್ವವಿದ್ಯಾಲಯ ಗ್ರಂಥಾಲಯ)
೧೩. ತಿಮ್ಮಣ್ಣಭಟ್ಟಕೃತ ವ್ಯಾಖ್ಯಾನ
೧೪. ಕೃಷ್ಣಾಚಾರ್ಯದೀಪಕೃತ ವ್ಯಾಖ್ಯಾನ(ಅನುಪಲಬ್ಧ)
೧೫. ತಿಮ್ಮಣ್ಣಾಚಾರ್ಯ ವರಖೇಡಿಕೃತ ವ್ಯಾಖ್ಯಾನ (ಅನುಪಲಬ್ಧ)

---

೧. ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು, ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರು ಮೊದಲಾದವರ ಪರಿಚಯ ಹಾಗೂ ಕೃತಿಗಳ ವಿವರಗಳನ್ನು ನಮ್ಮ ಪ್ರಕಾಶನದ ದ್ವೈತವೇದಾಂತಗ್ರಂಥಸೂಚಿಯಲ್ಲಿ ಕೊಡಲಾಗಿದೆ.

೨. ತಾಮ್ರಪರ್ಣೀಶ್ರೀನಿವಾಸಾಚಾರ್ಯರ ವ್ಯಾಖ್ಯಾನವು ೧೯೯೩ರಲ್ಲಿ ನನ್ನ ಸಂಪಾದಕತ್ವದಲ್ಲಿ ತಿರುಚಾನೂರಿನ ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀ ಸಭಾದಿಂದ ಪ್ರಕಾಶಿತವಾಗಿದೆ.

\+ (ಜ): ನನ್ನ ಸಂಗ್ರಹ – ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತಗ್ರಂಥಾಲಯದಲ್ಲಿ ಉಪಲಬ್ಧ.

× ಉತ್ತರಾದಿಮಠದ ವಿಶ್ವಮಧ್ವಮಹಾಪರಿಷತ್‌ನಿಂದ ಪ್ರಕಾಶಿತ (೨೦೦೨)

೧೬. ತಿಮ್ಮಣ್ಣಾಚಾರ್ಯಕಾಶೀಕೃತ ವ್ಯಾಖ್ಯಾನ(ಅನುಪಲಬ್ಧ)
೧೭. ಕೇಶವಾರ್ಯಸೂನುತಿರುಮಲಾಚಾರ್ಯಕೃತ ವ್ಯಾಖ್ಯಾನ (ಅನುಪಲಬ್ಧ)
೧೮. ಪಾಂಫ್ರಿ ಆಚಾರ್ಯಕೃತ ವ್ಯಾಖ್ಯಾನ (ಅನುಪಲಬ್ಧ)

ಪ್ರಸ್ತುತ ಅನುವಾದವು ಉಪಲಬ್ಧವ್ಯಾಖ್ಯಾನಗಳಲ್ಲಿನ ವಿವರಗಳನ್ನು ಒಳಗೊಂಡಂತೆ ರಚಿತವಾಗಿದೆ. ಮೊದಲಿಗೆ ಮೂಲಕೃತಿಯನ್ನು ಮಾತ್ರ ಪ್ರತ್ಯೇಕವಾಗಿ ಮುದ್ರಿಸಿ, ಮುಂದೆ, ಮೂಲಶ್ಲೋಕಗಳನ್ನು ಅನುವಾದ ಹಾಗೂ ವಿವರಣೆಗಳೊಂದಿಗೆ ಕೊಡಲಾಗಿದೆ. ಮೂಲಶ್ಲೋಕಗಳ ಆಕರಗಳನ್ನು ಸಹ ಸಾಧ್ಯವಾದಲ್ಲೆಲ್ಲ ಗುರುತಿಸಿ ಸೂಚಿಸಲಾಗಿದೆ. ಅಡಿಟಿಪ್ಪಣಿಯಲ್ಲಿ ವ್ಯಾಖ್ಯಾನಗಳ ವಿಶೇಷಾಂಶಗಳನ್ನೂ, ಪ್ರಮಾಣಸಂಗ್ರಹರೂಪವಾದ ಶ್ಲೋಕಗಳನ್ನೂ ಅಳವಡಿಲಾಗಿದೆ. ಶ್ಲೋಕಾರ್ಥವನ್ನು ಸುಲಭಗ್ರಾಹ್ಯವನ್ನಾಗಿಸಲು ಉದ್ದಕ್ಕೂ ಶೀರ್ಷಿಕೆಗಳನ್ನು ನೀಡಲಾಗಿದೆ. ಕೃಷ್ಣಾಮೃತಮಹಾರ್ಣವದ ಮೂಲಪಾಠಕ್ಕೆ ನಮ್ಮ ಪ್ರತಿಷ್ಠಾನವು ಹೊರತಂದಿರುವ ಸರ್ವಮೂಲಗ್ರಂಥಗಳಲ್ಲಿನ ಪ್ರಾಚೀನಪಾಠವನ್ನು ಅವಲಂಬಿಸಲಾಗಿದೆ. ಕೋಶಾಂತರಗಳಲ್ಲಿನ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗಿದೆ. ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರ ವ್ಯಾಖ್ಯಾನ ಹಾಗೂ ಇತರ ಕೆಲವು ಲಿಖಿತಗ್ರಂಥಗಳಲ್ಲಿ ಕಂಡುಬರುವ ಅಧಿಕಶ್ಲೋಕಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ಆ ಶ್ಲೋಕಗಳು ಮೂಲಕೃತಿಯ ಅನೇಕ ಶ್ಲೋಕಗಳಿಗೆ ವಿವರಣೆಯಂತಿರುವುದರಿಂದ, ಅವುಗಳ ಅಧ್ಯಯನವೂ ಸಹ ಜಿಜ್ಞಾಸುಗಳಿಗೆ ತುಂಬ ಉಪಯುಕ್ತ ಎಂದು ಭಾವಿಸಿ, ಅವುಗಳಿಗೂ ಸಹ ಅನುವಾದ ನೀಡಲಾಗಿದೆ. ಅಧ್ಯಯನಕ್ಕೆ ಉಪಯುಕ್ತವಾಗಲೆಂದು ಮೂಲ ಹಾಗೂ ಪರಿಶಿಷ್ಟಗಳಲ್ಲಿನ ಶ್ಲೋಕಗಳ ಶ್ಲೋಕಾರ್ಧಾನುಕ್ರಮಣಿಕೆಯನ್ನು ಪರಿಶಿಷ್ಟ - ೨ ಹಾಗೂ ಪರಿಶಿಷ್ಟ - ೩ರಲ್ಲಿ ಕೊಡಲಾಗಿದೆ.

ಕೃಷ್ಣಾಮೃತಮಹಾರ್ಣವದ ಅಧ್ಯಯನ ಸಾಧಕನ ಅನುಷ್ಠಾನ ಭಾಗಕ್ಕೆ ತೋರುವ ಬೆಳಕು ಅಪೂರ್ವವಾದುದು. ಇದರಿಂದ ಶಾಸ್ತ್ರೋಕ್ತವಾದ ಸದಾಚಾರದ ಸ್ವರೂಪ ಸ್ಫುಟವಾಗಿ ನಿರೂಪಿತವಾಗುವುದು. ಸ್ವತಃ ಶ್ರೀಮದಾಚಾರ್ಯರೇ ಉಪಸಂಹಾರದಲ್ಲಿ ತಿಳಿಸಿರುವಂತೆ ಇದು ಸಿದ್ಧಿ ನೀಡುವ ವಿಶಿಷ್ಟಕೃತಿ. ಇದರಲ್ಲಿ ಕೇಶವಾದಿ ಅನೇಕ ಭಗವನ್ನಾಮಗಳು ವಿಶೇಷವಾಗಿ ಉಲ್ಲೇಖಿಸಲ್ಪಟ್ಟಿವೆ. ಅವುಗಳ ಅರ್ಥವಿವರಣೆ ಸರ್ವಮೂಲಗ್ರಂಥಗಳಲ್ಲಿ ಕಾಣಸಿಗುವುದು. ಹರಿದಾಸಸಾಹಿತ್ಯಕ್ಕೆ ದ್ವಾದಶಸ್ತೋತ್ರದಂತೆ ಈ ಕೃತಿಯೂ ಸಹ ನೀಡಿರುವ ಪ್ರೇರಣೆ ಅನುಪಮವಾದುದು.

ಹರಿದಾಸಸಾಹಿತ್ಯದ ಸ್ತೋತ್ರಛಾಯೆಗೆ ದ್ವಾದಶಸ್ತೋತ್ರ ಹರಿದಾಸಸಾಹಿತ್ಯಕ್ಕೆ ಸ್ಫೂರ್ತಿಯಾಗಿದ್ದರೆ, ಉಪದೇಶಛಾಯೆಗೆ ಕೃಷ್ಣಾಮೃತಮಹಾರ್ಣವವು ಮುಖ್ಯಸ್ಫೂರ್ತಿಯಾಗಿದೆ. ಇಲ್ಲಿಯ ಪ್ರತಿಯೊಂದು ಶ್ಲೋಕವೂ ಸಹ ಹರಿದಾಸರ ನೂರಾರು ಕೃತಿಗಳಿಗೆ ಪ್ರೇರಣೆಯಾಗಿರುವುದನ್ನು ಹರಿದಾಸಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ

ಜಿಜ್ಞಾಸುಗಳು ಗುರುತಿಸಬಹುದು. ಅಂತಹ ಕೆಲವು ನಿದರ್ಶನಗಳನ್ನು ವಿವರಣೆಯಲ್ಲಿ ಕೊಡಲಾಗಿದೆ. ಇದರಿಂದ ಹರಿದಾಸಸಾಹಿತ್ಯದ ಅಧ್ಯಯನಕ್ಕೆ ಸಿಕ್ಕುವ ನೆರವು ಅಪಾರವಾದುದು. ಇದರ ಯೋಗ್ಯ ಉಪಯೋಗ ಪಡೆದಲ್ಲಿ ಹರಿದಾಸಸಾಹಿತ್ಯದ ಪರಿಣಾಮಕಾರಿಯಾದ ಅಧ್ಯಯನ ಸಾಧ್ಯವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದ ಅನುವಾದವನ್ನು ನಮ್ಮ ಪ್ರತಿಷ್ಠಾನ ಪ್ರಕಾಶನ ಪಡಿಸಿದ ಬಳಿಕ, ಅವರ ಇತರಗ್ರಂಥಗಳ ಅನುವಾದವನ್ನು ಸಹ ಅದೇ ಬಗೆಯಲ್ಲಿ ನೀಡಲು ಅನೇಕ ಜಿಜ್ಞಾಸುಗಳು ಕೇಳಿಕೊಂಡರು. ಅದರ ಫಲವಾಗಿ ಈ ಅನುವಾದ ಪ್ರಕಟಗೊಳ್ಳುತ್ತಿದೆ. ಮುಂದೆ ಕ್ರಮವಾಗಿ ಅವರ ಇತರ ಗ್ರಂಥಗಳನ್ನೆಲ್ಲ ಕನ್ನಡಕ್ಕೆ ತರುವ ಯೋಜನೆಯನ್ನು ನಮ್ಮ ಪ್ರತಿಷ್ಠಾನ ಹಮ್ಮಿಕೊಂಡಿದೆ.

ಕೃಷ್ಣಾಮೃತಮಹಾರ್ಣವ (ಅನುವಾದ ಸಮೇತ) ಕೃತಿಯ ಪ್ರಸ್ತುತ ಆವೃತ್ತಿಯನ್ನು ಶ್ರೀಹರಿಗುರುಗಳ ವಿಶೇಷ ಭಕ್ತರಾದ, ಭಾರತೀಯ ತತ್ತ್ವಜ್ಞಾನದ ಅದರಲ್ಲೂ ವಿಶೇಷವಾಗಿ ಮಧ್ವಸಿದ್ಧಾಂತದ ಪ್ರಸಾರದಲ್ಲಿ ತುಂಬಾ ಆಸಕ್ತರಾದ **ಶ್ರೀಮತಿ ಶ್ರುತಿ ಮತ್ತು ಶ್ರೀ ವೈ.ಆರ್. ಪ್ರದೀಪ್** ದಂಪತಿಗಳು ಪ್ರಾಯೋಜಿಸಿರುವರು; ಅವರಿಗೆ ಹಾಗೂ ಅವರ ಕುಟುಂಬಕ್ಕೆ ವಿಶೇಷ ಶ್ರೇಯಸ್ಸನ್ನು ನಮ್ಮ ಪ್ರತಿಷ್ಠಾನ ಹಾರೈಸುತ್ತದೆ. ಡಿ.ಟಿ.ಪಿ ಕಾರ್ಯ ನಮ್ಮ ಪ್ರತಿಷ್ಠಾನದ್ದು. ಸಹಕಾರ ಶ್ರೀಪ್ರವೀಣಕಟ್ಟಿ ಚಿ. ಸುದರ್ಶನ (ಆನಂದಪದ್ಮನಾಭ), ಚಿ. ವಿ. ಮಾರುತಿರಾವ್, ಶ್ರೀ ಎಂ.ವಿ.ಕಲಘಟಗಿ ಹಾಗೂ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಅವರದು. ವಿಶೇಷ ಸಹಕಾರ ನನ್ನ ಧರ್ಮಪತ್ನಿ ಸೌ. ಜಯಶ್ರೀ ಪಿ. ವ್ಯಾಸನಕೆರೆ ಹಾಗೂ ನನ್ನ ಸೊಸೆ ಚಿ.ಕುಂ.ಸೌ. ಶ್ರುತಿ ವ್ಯಾಸನಕೆರೆ ಇವರದು. ಮುದ್ರಣ ವಾಗರ್ಥ ಅವರದು. ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನ ಋಣಿ.

ಬೆಂಗಳೂರು — ವ್ಯಾಸನಕೆರೆ ಪ್ರಭಂಜನಾಚಾರ್ಯ

ವಿಲಂಬಿ - ಶ್ರೀಕೃಷ್ಣಜಯಂತೀವ್ರತ (೦೨.೦೯.೨೦೧೮)

॥ ಶ್ರೀಃ ॥

ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತ

# ಕೃಷ್ಣಾಮೃತಮಹಾರ್ಣವಃ

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

ಅರ್ಚಿತಃ ಸಂಸ್ಮೃತೋ ಧ್ಯಾತಃ ಕೀರ್ತಿತಃ ಕಥಿತಃ ಶ್ರುತಃ ।
ಯೋ ದದಾತ್ಯಮೃತತ್ವಂ ಹಿ ಸ ಮಾಂ ರಕ್ಷತು ಕೇಶವಃ ॥ ೧ ॥

ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।
ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥ ೨ ॥

ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಮ್ ।
ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥ ೩ ॥

ಸಂಸಾರೇಽಸ್ಮಿನ್ ಮಹಾಘೋರೇ ಜನ್ಮರೋಗಭಯಾಕುಲೇ ।
ಅಯಮೇಕೋ ಮಹಾಭಾಗಃ ಪೂಜ್ಯತೇ ಯದಧೋಕ್ಷಜಃ ॥ ೪ ॥

ಸ ನಾಮ ಸುಕೃತೀ ಲೋಕೇ ಕುಲಂ ತೇನ ಹ್ಯಲಂಕೃತಮ್ ।
ಆಧಾರಃ ಸರ್ವಭೂತಾನಾಂ ಯೇನ ವಿಷ್ಣುಃ ಪ್ರಸಾದಿತಃ ॥ ೫ ॥

ಯಜ್ಞಾನಾಂ ತಪಸಾಂ ಚೈವ ಶುಭಾನಾಂ ಚೈವ ಕರ್ಮಣಾಮ್ ।
ತದ್ವಿಶಿಷ್ಟಫಲಂ ನೄಣಾಂ ಸದೈವಾರಾಧನಂ ಹರೇಃ ॥ ೬ ॥

ಕಲೌ ಕಲಿಮಲಧ್ವಂಸಿಸರ್ವಪಾಪಹರಂ ಹರಿಮ್ ।
ಯೇಽರ್ಚಯಂತಿ ಸದಾ ನಿತ್ಯಂ ತೇ ಚ ವಂದ್ಯಾ ಯಥಾ ಹರಿಃ ॥ ೭ ॥

ನಾಸ್ತಿ ಶ್ರೇಯಸ್ತಮಂ ನೄಣಾಂ ವಿಷ್ಣೋರಾರಾಧನಾನ್ಮುನೇ ।
ಯುಗೇಽಸ್ಮಿಂಸ್ತಾಮಸೇ ಲೋಕೇ ಸತತಂ ಪೂಜ್ಯತೇ ಹರಿಃ ॥ ೮ ॥

ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ ।
ಅರ್ಚಿತಾಃ ಸರ್ವದೇವಾಃ ಸ್ಯುರ್ಯತಃ ಸರ್ವಗತೋ ಹರಿಃ ॥ ೯ ॥

ಸ್ವರ್ಚಿತೇ ಸರ್ವಲೋಕೇಶೇ ಸುರಾಸುರನಮಸ್ಕೃತೇ ।
ಕೇಶವೇ ಕಂಸಕೇಶಿಘ್ನೇ ನ ಯಾತಿ ನರಕಂ ನರಃ ॥ ೧೦ ॥

ಸಕೃದಭ್ಯರ್ಚ್ಯ ಗೋವಿಂದಂ ಬಿಲ್ವಪತ್ರೇಣ ಮಾನವಃ ।
ಮುಕ್ತಿಭಾಗೀ ನಿರಾತಂಕೀ ವಿಷ್ಣುಲೋಕೇ ಮಹೀಯತೇ ॥ ೧೧ ॥

ಸಕೃದಭ್ಯರ್ಚಿತೋ ಯೇನ ಹೇಲಯಾಽಪಿ ನಮಸ್ಕೃತಃ ।
ಸ ಯಾತಿ ಪರಮಂ ಸ್ಥಾನಂ ಯತ್ ಸುರೈರಪಿ ದುರ್ಲಭಮ್ ॥ ೧೨ ॥

ಶ್ರೀನಾರದಃ

ಸಮಸ್ತಲೋಕನಾಥಸ್ಯ ದೇವದೇವಸ್ಯ ಶಾರ್ಙ್ಗಿಣಃ ।
ಸಾಕ್ಷಾದ್ಭಗವತೋ ವಿಷ್ಣೋಃ ಪೂಜನಂ ಜನ್ಮನಃ ಫಲಮ್ ॥ ೧೩ ॥

ಪುಲಸ್ತ್ಯಃ

ಭಕ್ತ್ಯಾ ದೂರ್ವಾಂಕುರೈಃ ಪುಂಭಿಃ ಪೂಜಿತಃ ಪುರುಷೋತ್ತಮಃ ।
ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಮ್ ॥ ೧೪ ॥

ವಿಧಿನಾ ದೇವದೇವೇಶಃ ಶಂಖಚಕ್ರಧರೋ ಹರಿಃ ।
ಫಲಂ ದದಾತಿ ಸುಲಭಂ ಸಲಿಲೇನಾಪಿ ಪೂಜಿತಃ ॥ ೧೫ ॥

ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ ।
ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ॥ ೧೬ ॥

ಶಂಕರಃ

ದ್ರವ್ಯಾಣಾಮಪ್ಯಭಾವೇ ತು ಸಲಿಲೇನಾಪಿ ಪೂಜಿತಃ ।
ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ ॥ ೧೭ ॥

ಧರ್ಮ ಉವಾಚ

ನರಸಿಂಹೋ ಹೃಷೀಕೇಶಃ ಪುಂಡರೀಕನಿಭೇಕ್ಷಣಃ ।
ಸ್ಮರಣಾನ್ಮುಕ್ತಿದೋ ನೃಣಾಂ ಸ ತ್ವಯಾ ಕಿಂ ನ ಪೂಜಿತಃ ॥ ೧೮ ॥

ಬ್ರಹ್ಮೋವಾಚ

ಗರ್ಭಸ್ಥಿತಾ ಮೃತಾ ವಾಽಪಿ ಮುಷಿತಾಸ್ತೇ ಸುದೂಷಿತಾಃ ।
ನ ಪ್ರಾಪ್ತಾ ಯೈರ್ಹರೇರ್ದೀಕ್ಷಾ ಸರ್ವದುಃಖವಿಮೋಚನೀ ॥ ೧೯ ॥

ಮಾರ್ಕಂಡೇಯಃ

ಸಕೃದಭ್ಯರ್ಚಿತೋ ಯೇನ ದೇವದೇವೋ ಜನಾರ್ದನಃ ।
ಯತ್ ಕೃತಂ ತತ್ ಕೃತಂ ತೇನ ಸಂಪ್ರಾಪ್ತಂ ಪರಮಂ ಪದಮ್ ॥ ೨೦ ॥

ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ।
ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥ ೨೧ ॥

ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ ।
ಪ್ರಣಾಮಂ ಯೇ ಪ್ರಕುರ್ವಂತಿ ತೇಷಾಮಪಿ ನಮೋ ನಮಃ ॥ ೨೨ ॥

ಮರೀಚಿಃ

ಅನಾರಾಧಿತಗೋವಿಂದೈರ್ನರೈಃ ಸ್ಥಾನಂ ನೃಪಾತ್ಮಜ ।
ನ ಹಿ ಸಂಪ್ರಾಪ್ಯತೇ ಶ್ರೇಷ್ಠಂ ತಸ್ಮಾದಾರಾಧಯಾಚ್ಯುತಮ್ ॥ ೨೩ ॥

ಅತ್ರಿಃ

ಪರಃ ಪರಾಣಾಂ ಪುರುಷಸ್ತುಷ್ಟೋ ಯಸ್ಯ ಜನಾರ್ದನಃ ।
ಸ ಚಾಪ್ನೋತ್ಯಕ್ಷಯಂ ಸ್ಥಾನಮೇತತ್ ಸತ್ಯಂ ಮಯೋದಿತಮ್ ॥ ೨೪ ॥

ಅಂಗಿರಾಃ

ಯಸ್ಯಾಂತಃ ಸರ್ವಮೇವೇದಮಚ್ಯುತಸ್ಯಾವ್ಯಯಾತ್ಮನಃ ।
ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದಿಚ್ಛಸಿ ॥ ೨೫ ॥

ಪುಲಸ್ತ್ಯಃ

ಪರಂ ಬ್ರಹ್ಮ ಪರಂ ಧಾಮ ಯೋಽಸೌ ಬ್ರಹ್ಮ ಸನಾತನಮ್ ।
ತಮಾರಾಧ್ಯ ಹರಿಂ ಯಾತಿ ಮುಕ್ತಿಮಪ್ಯತಿದುರ್ಲಭಾಮ್ ॥ ೨೬ ॥

ಐಂದ್ರಮಿಂದ್ರಃ ಪರಂ ಸ್ಥಾನಂ ಯಮಾರಾಧ್ಯ ಜಗತ್ಪತಿಮ್ ।
ಪ್ರಾಪ ಯಜ್ಞಪತಿಂ ವಿಷ್ಣುಂ ತಮಾರಾಧಯ ಸುವ್ರತ ॥ ೨೭ ॥

ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ ।
ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ಲೋಕೋತ್ತರೋತ್ತರಮ್ ॥೨೮॥

ಯೇ ಸ್ಮರಂತಿ ಸದಾ ವಿಷ್ಣುಂ ಶಂಖಚಕ್ರಗದಾಧರಮ್ ।
ಸರ್ವಪಾಪವಿನಿರ್ಮುಕ್ತಾಃ ಪರಂ ಬ್ರಹ್ಮ ವಿಶಂತಿ ತೇ ॥ ೨೯ ॥

ತತೋಽನಿರುದ್ಧಂ ದೇವೇಶಂ ಪ್ರದ್ಯುಮ್ನಂ ಚ ತತಃ ಪರಮ್ ।
ತತಃ ಸಂಕರ್ಷಣಂ ದೇವಂ ವಾಸುದೇವಂ ಪರಾತ್ ಪರಮ್ ॥ ೩೦ ॥

ವಾಸುದೇವಾತ್ ಪರಂ ನಾಸ್ತಿ ಇತಿ ವೇದಾಂತನಿಶ್ಚಯಃ ।
ವಾಸುದೇವಂ ಪ್ರವಿಷ್ಟಾನಾಂ ಪುನರಾವರ್ತನಂ ಕುತಃ ॥ ೩೧ ॥

ಅತ್ರಿಃ

ಯೋ ಯಾನಿಚ್ಛೇನ್ನರಃ ಕಾಮಾನ್ ನಾರೀ ವಾ ವರವರ್ಣಿನೀ ।
ತಾನ್ ಸಮಾಪ್ನೋತಿ ವಿಪುಲಾನ್ ಸಮಾರಾಧ್ಯ ಜನಾರ್ದನಮ್॥ ೩೨ ॥

ಬ್ರಹ್ಮಾ

ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪುಮಾನ್ ಭುವಿ ।
ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತುಮಿಚ್ಛತಿ ॥ ೩೩ ॥

ಅನಾರಾಧಿತಗೋವಿಂದಾ ಯೇ ನರಾ ದುಃಖಭಾಗಿನಃ ।
ಆರಾಧ್ಯ ವಾಸುದೇವಂ ಸ್ಯುರ್ನಿತ್ಯಾನಂದೈಕಭಾಗಿನಃ ॥ ೩೪ ॥

ಶಂಕರಃ

ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।
ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್ ॥ ೩೫ ॥

ನ ಹ್ಯಪುಣ್ಯವತಾಂ ಲೋಕೇ ಮೂಢಾನಾಂ ಕುಟಿಲಾತ್ಮನಾಮ್ ।
ಭಕ್ತಿರ್ಭವತಿ ಗೋವಿಂದೇ ಸ್ಮರಣಂ ಕೀರ್ತನಂ ತಥಾ ॥ ೩೬ ॥

ತದೈವ ಪುರುಷೋ ಮುಕ್ತೋ ಜನ್ಮಮೃತ್ಯುಜರಾದಿಭಿಃ ।
ಜಿತೇಂದ್ರಿಯೋ ವಿಶುದ್ಧಾತ್ಮಾ ಯದೈವ ಸ್ಮರತೇ ಹರಿಮ್ ॥ ೩೭ ॥

ಪ್ರಾಪ್ತೇ ಕಲಿಯುಗೇ ಘೋರೇ ಧರ್ಮಜ್ಞಾನವಿವರ್ಜಿತೇ ।
ನ ಕಶ್ಚಿತ್ ಸ್ಮರತೇ ಲೋಕೇ ಕೃಷ್ಣಂ ಕಲಿಮಲಾಪಹಮ್ ॥ ೩೮ ॥

ನ ಕಲೌ ದೇವದೇವಸ್ಯ ಜನ್ಮದುಃಖಾಪಹಾರಿಣಃ ।
ಕರೋತಿ ಮರ್ತ್ಯೋ ಮೂಢಾತ್ಮಾ ಸ್ಮರಣಂ ಕೀರ್ತನಂ ಹರೇಃ ॥ ೩೯ ॥

ಯೇ ಸ್ಮರಂತಿ ಸದಾ ವಿಷ್ಣುಂ ವಿಶುದ್ಧೇನಾಂತರಾತ್ಮನಾ ।
ತೇ ಪ್ರಯಾಂತಿ ಭವಂ ತ್ಯಕ್ತ್ವಾ ವಿಷ್ಣುಲೋಕಮನಾಮಯಮ್ ॥ ೪೦ ॥

ಗರ್ಭದುಃಖಜರಾರೋಗಜನ್ಮಸಂಸಾರಬಂಧನೈಃ ।
ನ ಬಾಧ್ಯತೇ ನರೋ ನಿತ್ಯಂ ವಾಸುದೇವಮನುಸ್ಮರನ್ ॥ ೪೧ ॥

ಯಮಮಾರ್ಗಂ ಮಹಾಘೋರಂ ನರಕಾಣಿ ಯಮಂ ತಥಾ ।
ಸ್ವಪ್ನೇऽಪಿ ನೈವ ಪಶ್ಯೇತ ಯಃ ಸ್ಮರೇದ್ಗರುಡಧ್ವಜಮ್ ॥ ೪೨ ॥

ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।
ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ ॥ ೪೩ ॥

ಗೋವಿಂದಸ್ಮರಣಂ ಪುಂಸಾಂ ಪಾಪರಾಶಿಮಹಾಚಲಮ್ ।
ಅಸಂಶಯಂ ದಹತ್ಯಾಶು ತೂಲರಾಶಿಮಿವಾನಲಃ ॥ ೪೪ ॥

ಅಗಸ್ತ್ಯಃ

ಸ್ಮರಣಾದೇವ ಕೃಷ್ಣಸ್ಯ ಪಾಪಸಂಘಾತಪಂಜರಃ ।
ಶತಧಾ ಭೇದಮಾಯಾತಿ ಗಿರಿರ್ವಜ್ರಹತೋ ಯಥಾ ॥ ೪೫ ॥

ಕೃಷ್ಣೇ ರತಾಃ ಕೃಷ್ಣಮನುಸ್ಮರಂತ-
ಸ್ತದ್ಭಾವಿತಾಸ್ತದ್ಗತಮಾನಸಾಶ್ಚ ।
ಭಿನ್ನೇऽಪಿ ದೇಹೇ ಪ್ರವಿಶಂತಿ ಕೃಷ್ಣಂ
ಹವಿರ್ಯಥಾ ಮಂತ್ರಹುತಂ ಹುತಾಶೇ ॥ ೪೬ ॥

ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಚಾಂಧಜಡಮೂಕತಾ ।
ಯನ್ಮುಹೂರ್ತಂ ಕ್ಷಣಂ ವಾऽಪಿ ವಾಸುದೇವೋ ನ ಚಿಂತ್ಯತೇ ॥ ೪೭ ॥

ನಾರಾಯಣೋ ನಾಮ ನರೋ ನರಾಣಾಂ
ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಮ್ ।
ಅನೇಕಜನ್ಮಾರ್ಜಿತಪಾಪಸಂಚಯಂ
ಹರತ್ಯಶೇಷಂ ಸ್ಮೃತಮಾತ್ರ ಏವ ॥ ೪೮ ॥

ಯಸ್ಯ ಸಂಸ್ಮರಣಾದೇವ ವಾಸುದೇವಸ್ಯ ಚಕ್ರಿಣಃ ।
ಕೋಟಿಜನ್ಮಾರ್ಜಿತಂ ಪಾಪಂ ತತ್‌ಕ್ಷಣಾದೇವ ನಶ್ಯತಿ ॥ ೪೯ ॥

ಕಿಂ ತಸ್ಯ ಬಹುಭಿಸ್ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।
ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ ॥ ೫೦ ॥

ಯೇ ಮಾನವಾ ವಿಗತರಾಗಪರಾವರಜ್ಞಾ
ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।
ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೇ
ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥ ೫೦ ॥

ಹೇ ಚಿತ್ತ ಚಿಂತಯಸ್ವೇಹ ವಾಸುದೇವಮಹರ್ನಿಶಮ್ ।
ನೂನಂ ಯಶ್ಚಿಂತಿತಃ ಪುಂಸಾಂ ಹಂತಿ ಸಂಸಾರಬಂಧನಮ್ ॥ ೫೨ ॥

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ ೫೩ ॥

ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ ।
ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಮ್ ॥ ೫೪ ॥

ವೇದೇಷು ಯಜ್ಞೇಷು ತಪಸ್ಸು ಚೈವ
ದಾನೇಷು ತೀರ್ಥೇಷು ವ್ರತೇಷು ಯಚ್ಚ ।
ಇಷ್ಟೇಷು ಪೂರ್ತೇಷು ಚ ಯತ್ ಪ್ರದಿಷ್ಟಂ
ಪುಣ್ಯಂ ಸ್ಮೃತೇ ತತ್ ಖಲು ವಾಸುದೇವೇ ॥ ೫೫ ॥

ಔರ್ವಃ

ಆರಾಧ್ಯೈವಂ ನರೋ ವಿಷ್ಣುಂ ಮನಸಾ ಯದ್ಯದಿಚ್ಛತಿ ।
ಫಲಂ ಪ್ರಾಪ್ನೋತಿ ವಿಪುಲಂ ಭೂರಿ ಸ್ವಲ್ಪಮಥಾಪಿ ವಾ ॥ ೫೬ ॥

ಯನ್ನಾಮಕೀರ್ತನಂ ಭಕ್ತ್ಯಾ ವಿಲಾಪನಮನುತ್ತಮಮ್ ।
ಮೈತ್ರೇಯಾಶೇಷಪಾಪಾನಾಂ ಧಾತೂನಾಮಿವ ಪಾವಕಃ ॥ ೫೭ ॥

ಕಲಿಕಲ್ಮಷಮತ್ಯುಗ್ರಂ ನರಕಾರ್ತಿಪ್ರದಂ ನೃಣಾಮ್ ।
ಪ್ರಯಾತಿ ವಿಲಯಂ ಸದ್ಯಃ ಸಕೃತ್ ಸಂಕೀರ್ತಿತೇಽಚ್ಯುತೇ ॥ ೫೮ ॥

ಅನಾಯಾಸೇನ ಯಾಯಾಂತಿ ಮುಕ್ತಿಂ ಕೇಶವಸಂಶ್ರಿತಾಃ ।
ತದ್ವಿಘಾತಾಯ ಜಾಯಂತೇ ಶಕ್ರಾದ್ಯಾಃ ಪರಿಪಂಥಿನಃ ॥ ೫೯ ॥

ಚತುಃಸಾಗರಮಾಸಾದ್ಯ ಜಂಬೂದ್ವೀಪೋತ್ತಮೇ ಕ್ವಚಿತ್ ।
ನ ಪುಮಾನ್ ಕೇಶವಾದನ್ಯಃ ಸರ್ವಪಾಪಚಿಕಿತ್ಸಕಃ ॥ ೬೦ ॥

ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಸಹಸ್ರಕಮ್ ।
ಫಲಂ ಪ್ರಾಪ್ನೋತ್ಯವಿಕಲಂ ಕಲೌ ಸಂಕೀರ್ತ್ಯ ಕೇಶವಮ್ ॥ ೬೧ ॥

ಕ್ಷೀಯತೇ ತು ಯದಾ ಧರ್ಮಃ ಪ್ರಾಪ್ತೇ ಘೋರೇ ಕಲೌ ಯುಗೇ ।
ತದಾ ನ ಕೀರ್ತಯೇತ್ ಕಶ್ಚಿನ್ಮುಕ್ತಿದಂ ದೇವಮಚ್ಯುತಮ್ ॥ ೬೨ ॥

ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।
ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತಮೃಗೈರಿವ ॥ ೬೩ ॥

ಬ್ರಹ್ಮಾ

ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥ ೬೪ ॥

ಆರ್ತಾ ವಿಷಣ್ಣಾಃ ಶಿಥಿಲಾಶ್ಚ ಭೀತಾ
ಘೋರೇಷು ಚ ವ್ಯಾಧಿಷು ವರ್ತಮಾನಾಃ ।
ಸಂಕೀರ್ತ್ಯ ನಾರಾಯಣಶಬ್ದಮಾತ್ರಂ
ವಿಮುಕ್ತದುಃಖಾಃ ಸುಖಿನೋ ಭವಂತಿ ॥ ೬೫ ॥

ಕೌಶಿಕಃ

ಅನಾರಾಧಿತಗೋವಿಂದಾ ಯೇ ನರಾ ದುಃಖಭಾಗಿನಃ ।
ಆರಾಧ್ಯ ವಾಸುದೇವಂ ಸ್ಯುಃ ಸದಾನಂದೈಕಭೋಗಿನಃ ॥ ೬೬ ॥

ಸಕೃದುಚ್ಚರಿತೋ ಯೈಸ್ತು ಕೃಷ್ಣೇತಿ ನ ವಿಶಂತಿ ತೇ ।
ಗರ್ಭಾಗಾರಗೃಹಂ ಮಾತುರ್ಯಮಲೋಕಂ ಚ ದುಃಸಹಮ್ ॥ ೬೭।

ಕ್ವ ನಾಕಪೃಷ್ಠಗಮನಂ ಪುನರಾವೃತ್ತಿಲಕ್ಷಣಮ್ ।
ಕ್ವ ಜಪೋ ವಾಸುದೇವೇತಿ ಮುಕ್ತಿಬೀಜಮನುತ್ತಮಮ್ ॥ ೬೮ ॥

ಬುದ್ಧ್ವಾ ಬುದ್ಧ್ವಾ ವದಸ್ವೈನಂ ಹರಿರಿತ್ಯಕ್ಷರದ್ವಯಮ್ ।
ಸ್ಮರಣಾತ್ ಕೀರ್ತನಾದ್ಯಸ್ಯ ನ ಪುನರ್ಜಾಯತೇ ಕ್ವಚಿತ್ ॥ ೬೯ ॥

ಹೇ ಜಿಹ್ವೇ ಮಮ ನಿಸ್ನೇಹೇ ಹರಿಂ ಕಿಂ ನು ನ ಭಾಷಸೇ ।
ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿನೌರ್ಹರಿಃ ॥ ೭೦ ॥

ಅಸಾರೇ ಖಲು ಸಂಸಾರೇ ಸಾರಾತ್ ಸಾರತರೋ ಹರಿಃ ।
ಪುಣ್ಯಹೀನಾ ನ ವಿಂದಂತಿ ಸಾರಂಗಾಶ್ಚ ಯಥಾ ಜಲಮ್ ॥ ೭೧ ॥

ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ ಪುಷ್ಕರೇಣ ಕಿಮ್ ।
ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಮ್ ॥ ೭೨ ॥

ಬ್ರಹ್ಮಾ

ಅಸಾರೇ ಖಲು ಸಂಸಾರೇ ಸಾರಮೇಕಂ ನಿರೂಪಿತಮ್ ।
ಸಮಸ್ತಲೋಕನಾಥಸ್ಯ ಸಾರಮಾರಾಧನಂ ಹರೇಃ ॥ ೭೩ ॥

ಸಾ ಜಿಹ್ವಾ ಯಾ ಹರಿಂ ಸ್ತೌತಿ ತಚ್ಚಿತ್ತಂ ಯತ್ತದರ್ಪಣಮ್ ।
ತಾವೇವ ಕೇವಲೌ ಶ್ಲಾಘ್ಯೌ ಯೌ ತತ್ಪೂಜಾಕರೌ ಕರೌ ॥ ೭೪ ॥

ಯಸ್ತು ವಿಷ್ಣುಪರೋ ನಿತ್ಯಂ ದೃಢಭಕ್ತಿರ್ಜಿತೇಂದ್ರಿಯಃ ।
ಸ್ವಗೃಹೇಽಪಿ ವಸನ್ ಯಾತಿ ತದ್ವಿಷ್ಣೋಃ ಪರಮಂ ಪದಮ್ ॥ ೭೫ ॥

ಶಂಕರಃ

ಸಾಧು ಸಾಧು ಮಹಾಭಾಗ ಸಾಧು ದಾನವನಾಶನ ।
ಯಸ್ಮಾಂ ಪೃಚ್ಛಸಿ ಧರ್ಮಜ್ಞ ಕೇಶವಾರಾಧನಂ ಪ್ರತಿ ॥ ೭೬ ॥

ನಿಮಿಷಂ ನಿಮಿಷಾರ್ಧಂ ವಾ ಮುಹೂರ್ತಮಪಿ ಭಾರ್ಗವ ।
ನಾದಗ್ಧಾಶೇಷಪಾಪಾನಾಂ ಭಕ್ತಿರ್ಭವತಿ ಕೇಶವೇ ॥ ೭೭ ॥

ಕಿಂ ತೇನ ಮನಸಾ ಕಾರ್ಯಂ ಯನ್ನ ತಿಷ್ಠತಿ ಕೇಶವೇ ।
ಮನೋ ಮುಕ್ತಿಫಲಾವಾಪ್ತೌ ಕಾರಣಂ ಸುಪ್ರಯೋಜಿತಮ್ ॥ ೭೮ ॥

ನೂನಂ ತತ್ ಕಂಠಶಾಲೂಕಮಥವಾಽಪ್ಯುಪಜಿಹ್ವಿಕಾ ।
ರೋಗೋ ನಾಮ ನ ಸಾ ಜಿಹ್ವಾ ಯಾ ನ ವಕ್ತಿ ಹರೇರ್ಗುಣಾನ್ ॥ ೭೯ ॥

ಭಾರಭೂತೈಃ ಕರೈಃ ಕಾರ್ಯಂ ಕಿಂ ತಸ್ಯ ನೃಪಶೋರ್ದ್ವಿಜಾಃ ।
ಯೈರ್ಹಿ ನ ಕ್ರಿಯತೇ ವಿಷ್ಣೋರ್ಗೃಹಸಂಮಾರ್ಜನಾದಿಕಮ್ ॥ ೮೦ ॥

ಚರಣೌ ತೌ ತು ಸಫಲೌ ಕೇಶವಾಲಯಗಾಮಿನೌ ।
ತೇ ಚ ನೇತ್ರೇ ಮಹಾಭಾಗ ಯಾಭ್ಯಾಂ ಸಂದೃಶ್ಯತೇ ಹರಿಃ ॥ ೮೧ ॥

ಕಿಂ ತಸ್ಯ ಚರಣೈಃ ಕಾರ್ಯಂ ವೃಥಾಸಂಚರಣೈರ್ದ್ವಿಜಾಃ ।
ಯೈರ್ಹಿ ನ ವ್ರಜತೇ ಜಂತುಃ ಕೇಶವಾಲಯದರ್ಶನೇ ॥ ೮೨ ॥

ವೇದವೇದಾಂತವಿದುಷಾಂ ಮುನೀನಾಂ ಭಾವಿತಾತ್ಮನಾಮ್ ।
ಋಷಿತ್ವಮಪಿ ಧರ್ಮಜ್ಞ ವಿಜ್ಞೇಯಂ ತತ್ಪ್ರಸಾದಜಮ್ ॥ ೮೩ ॥

ವಿಚಿತ್ರರತ್ನಪರ್ಯಂಕೇ ಮಹಾಭೋಗೇ ಚ ಭೋಗಿನಃ ।
ರಮಂತೇ ನಾಕಿರಾಮಾಭಿಃ ಕೇಶವಸ್ಮರಣಾತ್ ಫಲಮ್ ॥ ೮೪ ॥

ಅಶ್ವಮೇಧಸಹಸ್ರಾಣಾಂ ಯಃ ಸಹಸ್ರಂ ಸಮಾಚರೇತ್ ।
ನಾಸೌ ತತ್ಫಲಮಾಪ್ನೋತಿ ತದ್ಭಕ್ತೈರ್ಯದವಾಪ್ಯತೇ ॥ ೮೫ ॥

ರೇ ರೇ ಮನುಷ್ಯಾಃ ಪುರುಷೋತ್ತಮಸ್ಯ
ಕರೌ ನ ಕಸ್ಮಾನ್ಮುಕಲೀಕುರುಧ್ವಮ್ ।
ಕ್ರಿಯಾಜುಷಾಂ ಕೋ ಭವತಾಂ ಪ್ರಯಾಸಃ
ಫಲಂ ಹಿ ಯತ್ ತತ್ ಪದಮಚ್ಯುತಸ್ಯ ॥ ೮೬ ॥

ವಿಷ್ಣೋರ್ವಿಮಾನಂ ಯಃ ಕುರ್ಯಾತ್ ಸಕೃದ್ಭಕ್ತ್ಯಾ ಪ್ರದಕ್ಷಿಣಮ್ ।
ಅಶ್ವಮೇಧಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥ ೮೭ ॥

ಪ್ರದಕ್ಷಿಣಂ ತು ಯಃ ಕುರ್ಯಾದ್ಧರಿಂ ಭಕ್ತ್ಯಾ ಸಮನ್ವಿತಃ ।
ಹಂಸಯುಕ್ತವಿಮಾನೇನ ವಿಷ್ಣುಲೋಕಂ ಸ ಗಚ್ಛತಿ ॥ ೮೮ ॥

ತೀರ್ಥಕೋಟಿಸಹಸ್ರಾಣಿ ವ್ರತಕೋಟಿಶತಾನಿ ಚ ।
ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೮೯ ॥

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ ೯೦ ॥

ಶಾಠ್ಯೇನಾಪಿ ನಮಸ್ಕಾರಂ ಕುರ್ವತಃ ಶಾರ್ಙ್ಗಪಾಣಯೇ ।
ಶತಜನ್ಮಾರ್ಜಿತಂ ಪಾಪಂ ನಶ್ಯತ್ಯೇವ ನ ಸಂಶಯಃ ॥ ೯೧ ॥

ಸಂಸಾರಾರ್ಣವಮಗ್ನಾನಾಂ ನರಾಣಾಂ ಪಾಪಕರ್ಮಣಾಮ್ ।
ನಾನ್ಯೋದ್ಧರ್ತಾ ಜಗನ್ನಾಥಂ ಮುಕ್ತ್ವಾ ನಾರಾಯಣಂ ಪರಮ್ ॥ ೯೨ ॥

ರೇಣುಕುಂಠಿತಗಾತ್ರಸ್ಯ ಕಣಾ ಯಾವಂತಿ ಭಾರತ ।
ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥ ೯೩ ॥

ಪಾವನಂ ವಿಷ್ಣುನೈವೇದ್ಯಂ ಸುಭೋಜ್ಯಮೃಷಿಭಿಃ ಸ್ಮೃತಮ್ ।
ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೯೪ ॥

ಕೋಟ್ಯೈಂದವಸಹಸ್ರೈಸ್ತು ಮಾಸೋಪೋಷಣಕೋಟಿಭಿಃ।
ಯತ್ಫಲಂ ಲಭ್ಯತೇ ಪುಂಭಿರ್ವಿಷ್ಣೋರ್ನೈವೇದ್ಯಭಕ್ಷಣಾತ್ ॥ ೯೫ ॥

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ।
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೯೬ ॥

ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ।
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ॥ ೯೭ ॥

ಗಂಗಾಪ್ರಯಾಗಗಯಪುಷ್ಕರನೈಮಿಷಾಣಿ
ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ।
ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ
ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ॥ ೯೮ ॥

ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ।
ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ॥ ೯೯ ॥

ಸ್ನಾನಂ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ ಧಾರಯನ್।
ಸರ್ವಪಾಪವಿನಿರ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್ ॥ ೧೦೦ ॥

ಯಥಾ ಪಾದೋದಕಂ ಪುಣ್ಯಂ ನಿರ್ಮಾಲ್ಯಂ ಚಾನುಲೇಪನಮ್।
ನೈವೇದ್ಯಂ ಧೂಪಶೇಷಂ ಚ ಆರಾರ್ತಿಶ್ಚ ತಥಾ ಹರೇಃ ॥ ೧೦೧ ॥

ತುಲಸ್ಯಾಸ್ತು ರಜೋಜುಷ್ಟನೈವೇದ್ಯಸ್ಯ ಚ ಭಕ್ಷಣಮ್।
ನಿರ್ಮಾಲ್ಯಂ ಶಿರಸಾ ಧಾರ್ಯಂ ಮಹಾಪಾತಕನಾಶನಮ್ ॥ ೧೦೨ ।

ಭಕ್ತ್ಯಾ ವಾ ಯದಿ ವಾಽಭಕ್ತ್ಯಾ ಚಕ್ರಾಂಕಿತಶಿಲಾಂ ಪ್ರತಿ।
ದರ್ಶನಂ ಸ್ಪರ್ಶನಂ ವಾಽಪಿ ಸರ್ವಪಾಪಪ್ರಣಾಶನಮ್ ॥ ೧೦೩ ॥

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ।
ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೦೪ ॥

ಮ್ಲೇಚ್ಛದೇಶೇಽಶುಚೌ ವಾಽಪಿ ಚಕ್ರಾಂಕೋ ಯತ್ರ ತಿಷ್ಠತಿ।
ಯೋಜನಾನಿ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥ ೧೦೫ ॥

ಸಾಲಗ್ರಾಮೋದ್ಭವೋ ದೇವೋ ಶೈಲಂ ಚಕ್ರಾಂಕಮಂಡಿತಮ್ ।
ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ॥ ೧೦೬ ॥

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।
ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥ ೧೦೭ ॥

ಹರಿಣಾ ಮುಕ್ತಿದಾನೀಹ ಮುಕ್ತಿಸ್ಥಾನಾನಿ ಸರ್ವಶಃ ।
ಸ ಯಸ್ಯ ಸರ್ವಭಾವೇಷು ತಸ್ಯ ತೈಃ ಕಿಂ ಪ್ರಯೋಜನಮ್ ॥ ೧೦೮ ॥

ಹರಿರ್ಯಾತಿ ಹರಿರ್ಯಾತಿ ದಸ್ಯುವ್ಯಾಜೇನ ಯೋ ವದೇತ್ ।
ಸೋಽಪಿ ಸದ್ಗತಿಮಾಪ್ನೋತಿ ಗತಿಂ ಸುಕೃತಿನೋ ಯಥಾ ॥ ೧೦೯ ॥

ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ।
ತ್ಯಕ್ತ್ವಾಽಮೃತಂ ಸ ಮೂಢಾತ್ಮಾ ಭುಂಕ್ತೇ ಹಾಲಾಹಲಂ ವಿಷಮ್ ॥೧೧೦॥

ತ್ಯಕ್ತ್ವಾಽಮೃತಂ ಯಥಾ ಕಶ್ಚಿದನ್ಯಪಾನಂ ಪಿಬೇನ್ನರಃ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೧ ॥

ಸ್ವಧರ್ಮಂ ತು ಪರಿತ್ಯಜ್ಯ ಪರಧರ್ಮಂ ಯಥಾ ಚರೇತ್ ।
ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ॥ ೧೧೨ ॥

ಗಾಂ ಚ ತ್ಯಕ್ತ್ವಾ ವಿಮೂಢಾತ್ಮಾ ಗಾರ್ದಭೀಂ ವಂದತೇ ಯಥಾ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೩ ॥

ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ।
ತೃಷಿತೋ ಜಾಹ್ನವೀತೀರೇ ಕೂಪಂ ಖನತಿ ದುರ್ಮತಿಃ ॥ ೧೧೪ ॥

ಯಥಾ ಗಂಗೋದಕಂ ತ್ಯಕ್ತ್ವಾ ಪಿಬೇತ್ ಕೂಪೋದಕಂ ನರಃ ।
ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ॥ ೧೧೫ ॥

ಸ್ವಮಾತರಂ ಪರಿತ್ಯಜ್ಯ ಶ್ವಪಾಕೀಂ ವಂದತೇ ಯಥಾ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೬ ॥

ಯಾವತ್ ಸ್ವಸ್ಥಮಿದಂ ಪಿಂಡಂ ನೀರುಜಂ ಕರಣಾನ್ವಿತಮ್ ।
ತಾವತ್ ಕುರುಷ್ವಾತ್ಮಹಿತಂ ಪಶ್ಚಾತ್ ತಾಪೇನ ತಪ್ಯಸೇ ॥ ೧೧೭ ॥

ಕೋಟ್ಯೈಂದವಸಹಸ್ರೈಸ್ತು ಮಾಸೋಪೋಷಣಕೋಟಿಭಿಃ।
ಯತ್ಫಲಂ ಲಭ್ಯತೇ ಪುಂಭಿರ್ವಿಷ್ಣೋರ್ನೈವೇದ್ಯಭಕ್ಷಣಾತ್ ॥ ೯೫ ॥

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ।
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೯೬ ॥

ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ।
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ॥ ೯೭ ॥

ಗಂಗಾಪ್ರಯಾಗಗಯಪುಷ್ಕರನೈಮಿಷಾಣಿ
ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ।
ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ
ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ॥ ೯೮ ॥

ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ।
ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ॥ ೯೯ ॥

ಸ್ನಾನಂ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ ಧಾರಯನ್।
ಸರ್ವಪಾಪವಿನಿರ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್ ॥ ೧೦೦ ॥

ಯಥಾ ಪಾದೋದಕಂ ಪುಣ್ಯಂ ನಿರ್ಮಾಲ್ಯಂ ಚಾನುಲೇಪನಮ್।
ನೈವೇದ್ಯಂ ಧೂಪಶೇಷಂ ಚ ಆರಾರ್ತಿಕ್ಯಂ ತಥಾ ಹರೇಃ ॥ ೧೦೧ ॥

ತುಲಸ್ಯಾಸ್ತು ರಜೋಜುಷ್ಟನೈವೇದ್ಯಸ್ಯ ಚ ಭಕ್ಷಣಮ್।
ನಿರ್ಮಾಲ್ಯಂ ಶಿರಸಾ ಧಾರ್ಯಂ ಮಹಾಪಾತಕನಾಶನಮ್ ॥ ೧೦೨ ।

ಭಕ್ತ್ಯಾ ವಾ ಯದಿ ವಾಽಭಕ್ತ್ಯಾ ಚಕ್ರಾಂಕಿತಶಿಲಾಂ ಪ್ರತಿ।
ದರ್ಶನಂ ಸ್ಪರ್ಶನಂ ವಾಽಪಿ ಸರ್ವಪಾಪಪ್ರಣಾಶನಮ್ ॥ ೧೦೩ ॥

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ।
ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೦೪ ॥

ಮ್ಲೇಚ್ಛದೇಶೇಽಶುಚೌ ವಾಽಪಿ ಚಕ್ರಾಂಕೋ ಯತ್ರ ತಿಷ್ಠತಿ।
ಯೋಜನಾನಿ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥ ೧೦೫ ॥

ಸಾಲಗ್ರಾಮೋದ್ಭವೋ ದೇವೋ ಶೈಲಂ ಚಕ್ರಾಂಕಮಂಡಿತಮ್ ।
ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ॥ ೧೦೬ ॥

ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।
ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥ ೧೦೭ ॥

ಹರಿಣಾ ಮುಕ್ತಿದಾನೀಹ ಮುಕ್ತಿಸ್ಥಾನಾನಿ ಸರ್ವಶಃ ।
ಸ ಯಸ್ಯ ಸರ್ವಭಾವೇಷು ತಸ್ಯ ತೈಃ ಕಿಂ ಪ್ರಯೋಜನಮ್ ॥ ೧೦೮ ॥

ಹರಿರ್ಯಾತಿ ಹರಿರ್ಯಾತಿ ದಸ್ಯುವ್ಯಾಜೇನ ಯೋ ವದೇತ್ ।
ಸೋಽಪಿ ಸದ್ಗತಿಮಾಪ್ನೋತಿ ಗತಿಂ ಸುಕೃತಿನೋ ಯಥಾ ॥ ೧೦೯ ॥

ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ।
ತ್ಯಕ್ತ್ವಾಽಮೃತಂ ಸ ಮೂಢಾತ್ಮಾ ಭುಂಕ್ತೇ ಹಾಲಾಹಲಂ ವಿಷಮ್ ॥೧೧೦॥

ತ್ಯಕ್ತ್ವಾಽಮೃತಂ ಯಥಾ ಕಶ್ಚಿದನ್ಯಪಾನಂ ಪಿಬೇನ್ನರಃ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೧ ॥

ಸ್ವಧರ್ಮಂ ತು ಪರಿತ್ಯಜ್ಯ ಪರಧರ್ಮಂ ಯಥಾ ಚರೇತ್ ।
ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ॥ ೧೧೨ ॥

ಗಾಂ ಚ ತ್ಯಕ್ತ್ವಾ ವಿಮೂಢಾತ್ಮಾ ಗಾರ್ದಭೀಂ ವಂದತೇ ಯಥಾ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೩ ॥

ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ।
ತೃಷಿತೋ ಜಾಹ್ನವೀತೀರೇ ಕೂಪಂ ಖನತಿ ದುರ್ಮತಿಃ ॥ ೧೧೪ ॥

ಯಥಾ ಗಂಗೋದಕಂ ತ್ಯಕ್ತ್ವಾ ಪಿಬೇತ್ ಕೂಪೋದಕಂ ನರಃ ।
ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ॥ ೧೧೫ ॥

ಸ್ವಮಾತರಂ ಪರಿತ್ಯಜ್ಯ ಶ್ವಪಾಕೀಂ ವಂದತೇ ಯಥಾ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೬ ॥

ಯಾವತ್ ಸ್ವಸ್ಥಮಿದಂ ಪಿಂಡಂ ನೀರುಜಂ ಕರಣಾನ್ವಿತಮ್ ।
ತಾವತ್ ಕುರುಷ್ವಾತ್ಮಹಿತಂ ಪಶ್ಚಾತ್ ತಾಪೇನ ತಪ್ಯಸೇ ॥ ೧೧೭ ॥

ಯಾವತ್ ಸ್ವಾಸ್ಥ್ಯಂ ಶರೀರೇಷು ಕರಣೇಷು ಚ ಪಾಟವಮ್ ।
ತಾವದರ್ಚಯ ಗೋವಿಂದಮಾಯುಷ್ಯಂ ಸಾರ್ಥಕಂ ಕುರು ॥ ೧೧೮ ॥

ಸ್ಮರ್ಯತಾಂ ತು ಹೃಷೀಕೇಶೋ ಹೃಷೀಕೇಷು ದೃಢೇಷು ಚ ।
ಅದೃಢೇಷು ಹೃಷೀಕೇಷು ಹೃಷೀಕೇಶಂ ಸ್ಮರಂತಿ ಕೇ ॥ ೧೧೯ ॥

ಯಾವಚ್ಚಿಂತಯತೇ ಜಂತುರ್ವಿಷಯಾನ್ ವಿಷಸನ್ನಿಭಾನ್ ।
ತಾವಚ್ಚೇತ್ ಸ್ಮರತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥ ೧೨೦ ॥

ಯಾವತ್ ಪ್ರಲಪತೇ ಜಂತುರ್ಲೋಕವಾರ್ತಾದಿಭಿಃ ಸದಾ ।
ತಾವಚ್ಚೇದ್ವದತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥ ೧೨೧ ॥

ಸೂತಃ

ಜ್ಞಾತ್ವಾ ವಿಪ್ರಾಸ್ತಿಥಿಂ ಸಮ್ಯಗ್ ದೈವಜ್ಞೈಃ ಸಮುದೀರಿತಾಮ್ ।
ಕರ್ತವ್ಯ ಉಪವಾಸಸ್ತು ಹ್ಯನ್ಯಥಾ ನರಕಂ ವ್ರಜೇತ್ ॥ ೧೨೨ ॥

ಕ್ಷಯೇ ವಾऽಪ್ಯಥವಾ ವೃದ್ಧೌ ಸಂಪ್ರಾಪ್ತೇ ವಾ ದಿನಕ್ಷಯೇ ।
ಉಪೋಷ್ಯಾ ದ್ವಾದಶೀ ಪುಣ್ಯಾ ಪೂರ್ವವಿದ್ಧಾಂ ಪರಿತ್ಯಜೇತ್ ॥ ೧೨೩ ॥

ಪೂರ್ವವಿದ್ಧಾಂ ಪ್ರಕುರ್ವಾಣೋ ನರೋ ಧರ್ಮಾನ್ ನಿಕೃಂತತಿ ।
ಸಂತತೇಸ್ತು ವಿನಾಶಾಯ ಸಂಪದೋ ಹರಣಾಯ ಚ ॥ ೧೨೪ ॥

ಕಲಾವೇಧೇऽಪಿ ವಿಪ್ರೇಂದ್ರ ದಶಮ್ಯೈಕಾದಶೀಂ ತ್ಯಜೇತ್ ।
ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭ ಇವ ಸಂತ್ಯಜೇತ್ ॥ ೧೨೫ ॥

ಶ್ವದೃತೌ ಪಂಚಗವ್ಯಂ ಚ ದಶಮ್ಯಾ ದೂಷಿತಾಂ ತ್ಯಜೇತ್ ।
ಏಕಾದಶೀಂ ದ್ವಿಜಶ್ರೇಷ್ಠಾಃ ಪಕ್ಷಯೋರುಭಯೋರಪಿ ॥ ೧೨೬ ॥

ತಸ್ಮಾದ್ವಿಪ್ರಾ ನ ವಿದ್ಧಾ ಹಿ ಕರ್ತವ್ಯೈಕಾದಶೀ ಕ್ವಚಿತ್ ।
ವಿದ್ಧಾ ಹಂತಿ ಪುರಾಪುಣ್ಯಂ ಶ್ರಾದ್ಧಂ ಚ ವೃಷಲೀಪತಿಃ ॥ ೧೨೭ ॥

ಜಪ್ತಂ ದತ್ತಂ ಹುತಂ ಸ್ನಾತಂ ತಥಾ ಪೂಜಾ ಕೃತಾ ಹರೇಃ ।
ತತ್ ಸರ್ವಂ ವಿಲಯಂ ಯಾತಿ ತಮಃ ಸೂರ್ಯೋದಯೇ ಯಥಾ೧೨೮

ಏಕಾದಶ್ಯಾಂ ಯದಾ ಬ್ರಹ್ಮನ್ ದಿನಕ್ಷಯತಿಥಿರ್ಭವೇತ್ ।
ಉಪೋಷ್ಯಾ ದ್ವಾದಶೀ ತತ್ರ ತ್ರಯೋದಶ್ಯಾಂ ತು ಪಾರಣಮ್ ॥ ೧೨೯ ॥

ಪ್ರತಿಪತ್ಪ್ರಭೃತಯಃ ಸರ್ವಾ ಉದಯಾದುದಯಾದ್ರವೇಃ ।
ಸಂಪೂರ್ಣಾ ಇತಿ ವಿಜ್ಞೇಯಾ ಹರಿವಾಸರವರ್ಜಿತಾಃ ॥ ೧೩೦ ॥

ಅರುಣೋದಯವೇಲಾಯಾಂ ದಶಮೀ ಯದಿ ದೃಶ್ಯತೇ ।
ನ ತತ್ರೈಕಾದಶೀ ಕಾರ್ಯಾ ಧರ್ಮಕಾಮಾರ್ಥನಾಶಿನೀ ॥ ೧೩೧ ॥

ಅರುಣೋದಯವೇಲಾಯಾಂ ದಶಮೀ ಯದಿ ದೃಶ್ಯತೇ ।
ಪಾಪಮೂಲಂ ತದಾ ಜ್ಞೇಯಮೇಕಾದಶ್ಯುಪವಾಸನಮ್ ॥ ೧೩೨ ॥

ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ ।
ಯತೀನಾಂ ಸ್ನಾನಕಾಲೋಽಯಂ ಗಂಗಾಂಭಃ ಸದೃಶಂ ಜಲಮ್ । ೧೩೩ ।

ಉದಯಾತ್ ಪ್ರಾಗ್ ಯದಾ ವಿಪ್ರಾ ಮುಹೂರ್ತದ್ವಯಸಂಯುತಾ ।
ಸಂಪೂರ್ಣೈಕಾದಶೀ ನಾಮ ತತ್ರೈವೋಪವಸೇದ್ಗೃಹೀ ॥ ೧೩೪ ॥

ಉದಯಾತ್ ಪ್ರಾಕ್ ತ್ರಿಘಟಿಕಾವ್ಯಾಪಿನ್ಯೈಕಾದಶೀ ಯದಾ ।
ಸಂದಿಗ್ಧೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ ॥ ೧೩೫ ॥

ಪುತ್ರಪೌತ್ರವಿವೃದ್ಧ್ಯರ್ಥಂ ದ್ವಾದಶ್ಯಾಮುಪವಾಸನಮ್ ।
ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಮ್ ॥ ೧೩೬ ॥

ಉದಯಾತ್ ಪ್ರಾಗ್ ದ್ವಿಘಟಿಕಾ ವ್ಯಾಪಿನ್ಯೈಕಾದಶೀ ಯದಾ ।
ಸಂಕೀರ್ಣೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ ॥ ೧೩೭ ॥

ಪುತ್ರರಾಜ್ಯವಿವೃದ್ಧ್ಯರ್ಥಂ ದ್ವಾದಶ್ಯಾಮುಪವಾಸನಮ್ ।
ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಮ್ ॥ ೧೩೮ ॥

ದಶಮೀಶೇಷಸಂಯುಕ್ತಾ ಗಾಂಧಾರ್ಯಾ ಸಮುಪೋಷಿತಾ ।
ತಸ್ಯಾಃ ಪುತ್ರಶತಂ ನಷ್ಟಂ ತಸ್ಮಾತ್ ತಾಂ ಪರಿವರ್ಜಯೇತ್ ॥ ೧೩೯ ॥

ಅಪೀಷದ್ದಶಮೀವಿದ್ಧಾ ತದಾ ತಾಂ ಪರಿವರ್ಜಯೇತ್ ।
ಸುರಾಬಿಂದುಸಮಾಯುಕ್ತಾಂ ಪ್ರವದಂತಿ ಮನೀಷಿಣಃ ॥ ೧೪೦ ॥

ಬಹ್ವಾಗಮವಿರೋಧೇಷು ಬ್ರಾಹ್ಮಣೇಷು ವಿವಾದಿಷು ।
ಉಪೋಷ್ಯಾ ದ್ವಾದಶೀ ತತ್ರ ತ್ರಯೋದಶ್ಯಾಂ ತು ಪಾರಣಮ್ ॥ ೧೪೧ ॥

ಏಕಾದಶ್ಯಾಂ ತು ವಿದ್ಧಾಯಾಂ ಸಂಪ್ರಾಪ್ತೇ ಶ್ರವಣೇ ತಥಾ ।
ಉಪೋಷ್ಯಾ ದ್ವಾದಶೀ ಪುಣ್ಯಾ ಪಕ್ಷಯೋರುಭಯೋರಪಿ ॥ ೧೪೨ ॥

ಉಪರಾಗಸಹಸ್ರಾಣಿ ವ್ಯತೀಪಾತಾಯುತಾನಿ ಚ ।
ಅಮಾಲಕ್ಷಂ ತು ದ್ವಾದಶ್ಯಾಃ ಕಲಾಂ ನಾರ್ಹಂತಿ ಷೋಡಶೀಮ್ ॥ ೧೪೩ ॥

ಶುದ್ಧಾಽಪಿ ದ್ವಾದಶೀ ಗ್ರಾಹ್ಯಾ ಪರತೋ ದ್ವಾದಶೀ ನ ಚೇತ್ ।
ವಿಷಂ ತು ದಶಮೀ ಜ್ಞೇಯಾಽಮೃತಂ ಚೈಕಾದಶೀ ತಿಥಿಃ ।
ವಿಷಪ್ರಧಾನಾ ವರ್ಜ್ಯಾ ಸಾಽಮೃತಾ ಗ್ರಾಹ್ಯಾ ಪ್ರಯತ್ನತಃ ॥ ೧೪೪ ॥

ದ್ವಾದಶ್ಯಾಂ ಭೋಜನಂ ಚೈವ ವಿದ್ಧಾಯಾಂ ಹರ್ಯುಪೋಷಣಮ್ ।
ಯಃ ಕುರ್ಯಾನ್ಮಂದಬುದ್ಧಿತ್ವಾನ್ನಿರಯಂ ಸೋಽಧಿಗಚ್ಛತಿ ॥ ೧೪೫ ॥

ಯಾನಿ ಕಾನಿ ಚ ವಾಕ್ಯಾನಿ ವಿದ್ಧೋಪೋಷಾಪರಾಣಿ ತು ।
ಧನದಾರ್ಥಾಪರಾಣಿ ಸ್ಯುರ್ವೈಷ್ಣವೀ ನ ದಶಾಯುತಾ ॥ ೧೪೬ ॥

ಅಥವಾ ಮೋಹನಾರ್ಥಾಯ ಮೋಹಿನ್ಯಾ ಭಗವಾನ್ ಹರಿಃ ।
ಅರ್ಥಿತಃ ಕಾರಯಾಮಾಸ ವ್ಯಾಸರೂಪೀ ಜನಾರ್ದನಃ ॥ ೧೪೭ ॥

ಧನದಾರ್ಥಾವಿವೃದ್ಧ್ಯರ್ಥಂ ಮಹಾವಿತ್ತಲಯಸ್ಯ ಚ ।
ಅಸುರಾಣಾಂ ಮೋಹನಾರ್ಥಂ ಪಾಷಂಡಾನಾಂ ವಿವೃದ್ಧಯೇ ।
ಆತ್ಮಸ್ವರೂಪಾವಿಜ್ಞಪ್ತ್ಯೈ ಸ್ವಲೋಕಾಪ್ರಾಪ್ತಯೇ ತಥಾ ॥ ೧೪೮ ॥

ಏವಂ ವಿದ್ಧಾಂ ಪರಿತ್ಯಜ್ಯ ದ್ವಾದಶ್ಯಾಮುಪವಾಸಿನಾಮ್ ।
ಕೋಟಿಜನ್ಮಾರ್ಜಿತಂ ಪಾಪಮೇಕಯೈವ ವಿನಶ್ಯತಿ ॥ ೧೪೯ ॥

ತತಃ ಕೋಟಿಗುಣಂ ವಾಽಪಿ ನಿಷಿದ್ಧಸ್ಯೇತರೈರ್ಜನೈಃ ।
ಯದನಾದಿಕೃತಂ ಪಾಪಂ ತದೂರ್ಧ್ವಂ ಯತ್ ಕರಿಷ್ಯತಿ ॥ ೧೫೦ ॥

ತತ್ ಸರ್ವಂ ವಿಲಯಂ ಯಾತಿ ಪರೇಷಾಮುಪವಾಸನಾತ್ ।
ನ ಚ ತಸ್ಮಾತ್ ಪ್ರಿಯತಮಃ ಕೇಶವಸ್ಯ ಮಮಾಪಿ ವಾ ॥ ೧೫೧ ॥

ಏಕಾದಶ್ಯಾ ಹ್ಯವೇಧೇ ತು ದ್ವಾದಶೀಂ ನ ಪರಿತ್ಯಜೇತ್ ।
ಪಾರಣೇ ಮರಣೇ ಚೈವ ತಿಥಿಸ್ತಾತ್ಕಾಲಿಕೀ ಸ್ಮೃತಾ ॥ ೧೫೨ ॥

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ ॥ ೧೫೩ ॥

ಅಭರ್ತೃಕಾ ತಥಾಽನ್ಯೇ ವಾ ಸೂತವೈದೇಹಿಕಾದಿಕಾಃ ।
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ ೧೫೪ ॥

ಏಕಾದಶ್ಯಾಂ ತು ಯೋ ಭುಂಕ್ತೇ ಮೋಹೇನಾವೃತಚೇತನಃ ।
ಶುಕ್ಲಾಯಾಮಥ ಕೃಷ್ಣಾಯಾಂ ನಿರಯಂ ಯಾತಿ ಸ ಧ್ರುವಮ್ ॥ ೧೫೫ ॥

ವಿವೇಚಯತಿ ಯೋ ಮೋಹಾಚ್ಛುಕ್ಲಾ ಕೃಷ್ಣೇತಿ ಪಾಪಕೃತ್ ।
ಏಕಾದಶೀಂ ಸ ವೈ ಯಾತಿ ನಿರಯಂ ನಾತ್ರ ಸಂಶಯಃ ॥ ೧೫೬ ॥

ಯಥಾ ಗೌರ್ನೈವ ಹಂತವ್ಯಾ ಶುಕ್ಲಾ ಕೃಷ್ಣೇತಿ ಭಾಮಿನಿ ।
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ ೧೫೭ ॥

ಯಾನಿ ಕಾನಿ ಚ ವಾಕ್ಯಾನಿ ಕೃಷ್ಣೈಕಾದಶಿವರ್ಜನೇ ।
ಭರಣ್ಯಾದಿನಿಷೇಧೇನ ತಾನಿ ಕಾಮ್ಯಫಲಾರ್ಥಿನಾಮ್ ॥ ೧೫೮ ॥

ಕಾಮಿನೋಽಪಿ ನಿಯತ್ಯರ್ಥಂ ಕುರ್ಯುರೇವೋಪವಾಸನಮ್ ।
ಪ್ರೀಣನಾಯ ಹರೇರ್ನಿತ್ಯಂ ನ ತು ಕಾಮ್ಯವ್ಯಪೇಕ್ಷಯಾ ॥ ೧೫೯ ॥

ತಸ್ಮಾಚ್ಛುಕ್ಲಾಮಥೋ ಕೃಷ್ಣಾಂ ಭರಣ್ಯಾದಿಯುತಾಮಪಿ ।
ಪ್ರತ್ಯವಾಯನಿಷೇಧಾರ್ಥಮುಪವಾಸೀತ ನಿತ್ಯಶಃ ।
ಪ್ರೀಣನಾರ್ಥಂ ಹರೇಶ್ಚಾಪಿ ವಿಷ್ಣುಲೋಕಸ್ಯ ಚಾಪ್ತಯೇ ॥ ೧೬೦ ॥

ಕಲಾ ವಾ ಘಟಿಕಾ ವಾಽಪಿ ಪರತೋ ದ್ವಾದಶೀ ಯದಿ ।
ದ್ವಾದಶ ದ್ವಾದಶೀರ್ಹಂತಿ ಪೂರ್ವೇದ್ಯುಃ ಪಾರಣೇ ಕೃತೇ ॥ ೧೬೧ ॥

ಅತಿರಿಕ್ತಾ ದ್ವಾದಶೀ ಚೇತ್ ತಾಂ ನೋಪೋಷಯೇದ್ಯದಿ ।
ದ್ವಾದಶ ದ್ವಾದಶೀರ್ಹಂತಿ ದ್ವಾದಶೀ ಚಾತಿಲಂಘಿತಾ ॥ ೧೬೨ ॥

ದ್ವಾದಶ್ಯಾಮತಿರಿಕ್ತಾಯಾಂ ಯೋ ಭುಂಕ್ತೇ ಪೂರ್ವವಾಸರೇ ।
ದ್ವಾದಶ ದ್ವಾದಶೀರ್ಹಂತಿ ದ್ವಾದಶೀಂ ನ ಪರಿತ್ಯಜೇತ್ ॥ ೧೬೩ ॥

ದ್ವಾದಶೀಂ ಶ್ರವಣೋಪೇತಾಂ ಯೋ ನೋಪೋಷ್ಯಾತ್ ಸುಮಂದಧೀಃ ।
ಪಂಚಸಂವತ್ಸರಕೃತಂ ಪುಣ್ಯಂ ತಸ್ಯ ವಿನಶ್ಯತಿ ॥ ೧೬೪ ॥

ಏಕಾದಶೀಮುಪೋಷ್ಯಾಥ ದ್ವಾದಶೀಮಪ್ಯುಪೋಷಯೇತ್ ।
ನ ತತ್ರ ವಿಧಿಲೋಪಃ ಸ್ಯಾದುಭಯೋರ್ದೇವತಾ ಹರಿಃ ॥ ೧೬೫ ॥

ಅಲ್ಪಾಯಾಮಪಿ ವಿಪ್ರೇಂದ್ರ ಪಾರಣಂ ತು ಕಥಂ ಭವೇತ್ ।
ಪಾರಯಿತ್ವೋದಕೇನಾಪಿ ಭುಂಜಾನೋ ನೈವ ದುಷ್ಯತಿ ॥ ೧೬೬ ॥

ಯದಾಽಲ್ಪಾಂ ದ್ವಾದಶೀಂ ದೃಷ್ಟ್ವಾ ನಿಶೀಥಾದೂರ್ಧ್ವಮೇವ ತು ।
ಆಮಧ್ಯಾಹ್ನಾಃ ಕ್ರಿಯಾಃ ಸರ್ವಾಃ ಕರ್ತವ್ಯಾಃ ಶಂಭುಶಾಸನಾತ್ ॥ ೧೬೭ ॥

ವ್ಯಾಸಃ

ಉಷಸಿ ದ್ವೇ ತು ಕರ್ತವ್ಯೇ ಪ್ರಾತರ್ಮಾಧ್ಯಾಹ್ನಿಕಕ್ರಿಯೇ ।
ಭುಜೀರ್ಯದಾಽಪಕರ್ಷಸ್ಯ ತದಂತರ್ನ್ಯಾಯತೋ ಭವೇತ್ ॥ ೧೬೮ ।

ಕರ್ತುಂ ಸಾಧ್ಯಂ ಯದಾ ನಾಲಂ ದ್ವಾದಶ್ಯದ್ಭಿಸ್ತು ಪಾರಯೇತ್ ।
ಕ್ರತಾವಲ್ಪಾಶಿವತ್ ಪಶ್ಚಾದ್ಭುಂಜೀತೇತ್ಯಪರೇ ಜಗುಃ ॥ ೧೬೯ ॥

ಅಶಿತಾನಶಿತಾ ಯಸ್ಮಾದಾಪೋ ವಿದ್ವದ್ಭಿರೀರಿತಾಃ ।
ಅಂಭಸಾ ಕೇವಲೇನೈವ ಕರಿಷ್ಯೇ ವ್ರತಪಾರಣಮ್ ॥ ೧೭೦ ॥

ನ ಕಾಶೀ ನ ಗಯಾ ಗಂಗಾ ನ ರೇವಾ ನ ಚ ಗೌತಮೀ ।
ನ ಚಾಪಿ ಕೌರವಂ ಕ್ಷೇತ್ರಂ ತುಲ್ಯಂ ಭೂಪ ಹರೇರ್ದಿನಾತ್ ॥೧೭೧ ॥

ಅಶ್ವಮೇಧಸಹಸ್ರಾಣಿ ವಾಜಪೇಯಾಯುತಾನಿ ಚ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೧೭೨ ॥

ಏಕಾದಶೀಸಮುತ್ಥೇನ ವಹ್ನಿನಾ ಪಾತಕೇಂಧನಮ್ ।
ಭಸ್ಮೀಭವತಿ ರಾಜೇಂದ್ರ ಅಪಿ ಜನ್ಮಶತೋದ್ಭವಮ್ ॥ ೧೭೩ ॥

ನೇದೃಶಂ ಪಾವನಂ ಕಿಂಚಿನ್ನರಾಣಾಂ ಭುವಿ ವಿದ್ಯತೇ ।
ಯಾದೃಶಂ ಪದ್ಮನಾಭಸ್ಯ ದಿನಂ ಪಾತಕಹಾನಿದಮ್ ॥ ೧೭೪ ॥

ತಾವತ್ ಪಾಪಾನಿ ದೇಹೇಽಸ್ಮಿನ್ ತಿಷ್ಠಂತಿ ಮನುಜಾಧಿಪ ।
ಯಾವನ್ನೋಪೋಷಯೇಜ್ಜಂತುಃ ಪದ್ಮನಾಭದಿನಂ ಶುಭಮ್ ॥ ೧೭೫ ॥

ಏಕಾದಶೇಂದ್ರಿಯೈಃ ಪಾಪಂ ಯತ್ ಕೃತಂ ಭವತಿ ಪ್ರಭೋ ।
ಏಕಾದಶ್ಯುಪವಾಸೇನ ತತ್ ಸರ್ವಂ ವಿಲಯಂ ಭವೇತ್ ॥ ೧೭೬ ॥

ಏಕಾದಶೀಸಮಂ ಕಿಂಚಿತ್ ಪಾಪತ್ರಾಣಂ ನ ವಿದ್ಯತೇ ।
ವ್ಯಾಜೇನಾಪಿ ಕೃತಾ ರಾಜನ್ ನ ದರ್ಶಯತಿ ಭಾಸ್ಕರಿಮ್ ॥ ೧೭೭ ॥

ಶ್ರೀವ್ಯಾಸಃ

ಸ ಬ್ರಹ್ಮಹಾ ಸ ಗೋಘ್ನಶ್ಚ ಸ್ತೇನಃ ಸ ಗುರುತಲ್ಪಗಃ ।
ಏಕಾದಶ್ಯಾಂ ಹಿ ಭುಂಜಾನಃ ಪಕ್ಷಯೋರುಭಯೋರಪಿ ॥ ೧೭೮ ॥

ವರಂ ಸ್ವಮಾತೃಗಮನಂ ವರಂ ಗೋಮಾಂಸಭಕ್ಷಣಮ್ ।
ವರಂ ಹತ್ಯಾ ಸುರಾಪಾನಮೇಕಾದಶ್ಯಾಂ ತು ಭೋಜನಾತ್ ॥ ೧೭೯ ॥

ಏಕಾದಶೀದಿನೇ ಪ್ರಾಪ್ತೇ ಭುಂಜತೇ ಯೇ ನರಾಧಮಾಃ ।
ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ ೧೮೦ ॥

ಪೃಥಿವ್ಯಾಂ ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ॥ ೧೮೧ ॥

ರುಕ್ಮಾಂಗದಃ

ಅಷ್ಟವರ್ಷಾಧಿಕೋ ಯಸ್ತು ಹ್ಯಶೀತಿರ್ನಹಿ ಪೂರ್ಯತೇ ।
ಯೋ ಭುಂಕ್ತೇ ಮಾನವಃ ಪಾಪೀ ವಿಷ್ಣೋರಹನಿ ಚಾಗತೇ ॥ ೧೮೨ ॥

ಪಿತಾ ವಾ ಯದಿ ವಾ ಪುತ್ರೋ ಭಾರ್ಯಾ ವಾಽಪಿ ಸುಹೃಜ್ಜನಃ ।
ಪದ್ಮನಾಭದಿನೇ ಭುಂಕ್ತೇ ನಿಗ್ರಾಹ್ಯೋ ದಸ್ಯುವದ್ಭವೇತ್ ॥ ೧೮೩ ॥

ಬ್ರಹ್ಮಾ

ಉಪೋಷ್ಯ ದ್ವಾದಶೀಂ ಪುಣ್ಯಾಂ ಸರ್ವಪಾಪಕ್ಷಯಪ್ರದಾಮ್ ।
ನ ಪಶ್ಯತಿ ಯಮಂ ವಾಽಪಿ ನರಕಾಣಿ ನ ಯಾತನಾಃ ॥ ೧೮೪ ॥

ರಟಂತಿ ಹಿ ಪುರಾಣಾನಿ ಭೂಯೋ ಭೂಯೋ ವರಾನನೇ ।
ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ॥ ೧೮೫ ॥

ದ್ವಾದಶೀ ನ ಪ್ರಮೋಕ್ತವ್ಯಾ ಯಾವದಾಯುಃ ಪ್ರವರ್ತತೇ ।
ಅರ್ಚನೀಯೋ ಹೃಷೀಕೇಶೋ ವಿಶುದ್ಧೇನಾಂತರಾತ್ಮನಾ ॥ ೧೮೬ ॥

ಭಕ್ತ್ಯಾ ಗ್ರಾಹ್ಯೋ ಹೃಷೀಕೇಶೋ ನ ಧನೈರ್ಧರಣೀಸುರಾಃ ।
ಭಕ್ತ್ಯಾ ಸಂಪೂಜಿತೋ ವಿಷ್ಣುಃ ಫಲಂ ಧತ್ತೇ ಸಮೀಹಿತಮ್ ॥ ೧೮೭ ॥

ಜಲೇನಾಪಿ ಜಗನ್ನಾಥಃ ಪೂಜಿತಃ ಕ್ಲೇಶನಾಶನಃ ।
ಪರಿತೋಷಂ ಪ್ರಯಾತ್ಯಾಶು ತೃಷಾರ್ತಾಸ್ತು ಯಥಾ ಜಲೈಃ ॥ ೧೮೮ ॥

ಆಸೀನಸ್ಯ ಶಯಾನಸ್ಯ ತಿಷ್ಠತೋ ವ್ರಜತೋಽಪಿ ವಾ ।
ರಮಸ್ವ ಪುಂಡರೀಕಾಕ್ಷ ಹೃದಯೇ ಮಮ ಸರ್ವದಾ ॥ ೧೮೯ ॥

ಸರ್ವಗಶ್ಚೈವ ಸರ್ವಾತ್ಮಾ ಸರ್ವಾವಸ್ಥಾಸು ಚಾಚ್ಯುತ ।
ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥ ೧೯೦ ॥

ಕರಾವಲಂಬನಂ ದೇಹಿ ಶ್ರೀಕೃಷ್ಣ ಕಮಲೇಕ್ಷಣ ।
ಭವಪಂಕಾರ್ಣವೇ ಘೋರೇ ಮಜ್ಜತೋ ಮಮ ಶಾಶ್ವತ ॥ ೧೯೧ ॥

ತ್ರಾಹಿ ತ್ರಾಹಿ ಜಗನ್ನಾಥ ವಾಸುದೇವಾಚ್ಯುತಾವ್ಯಯ ।
ಮಾಂ ಸಮುದ್ಧರ ಗೋವಿಂದ ದುಃಖಸಂಸಾರಸಾಗರಾತ್ ॥ ೧೯೨ ॥

## ಗ್ರಂಥಪ್ರಶಸ್ತಿಃ

ಏತತ್ ಪುಣ್ಯಂ ಪರಂ ಗುಹ್ಯಂ ಪವಿತ್ರಂ ಪಾಪನಾಶನಮ್ ।
ಆಯುಷ್ಯಂ ಚ ಯಶಸ್ಯಂ ಚ ಕಲೌ ದುಃಖಪ್ರಣಾಶನಮ್ ॥ ೧೯೩ ॥

ಕಲೌ ಪಾಪಂ ಕಿಯನ್ಮಾತ್ರಂ ಹತ್ಯಾಸ್ತೇಯಾದಿಸಂಭವಮ್ ।
ಸ್ಮೃತೇ ಮನಸಿ ಗೋವಿಂದೇ ದಹ್ಯತೇ ತೂಲರಾಶಿವತ್ ॥ ೧೯೪ ॥

ಕಲೌ ಕೇಶವಭಕ್ತಾನಾಂ ನ ಭಯಂ ವಿದ್ಯತೇ ಕ್ವಚಿತ್ ।
ಸ್ಮೃತೇ ಸಂಕೀರ್ತಿತೇ ಧ್ಯಾತೇ ಸಂಕ್ಷಯಂ ಯಾತಿ ಪಾತಕಮ್ ॥ ೧೯೫ ॥

ಅಧ್ಯೇತವ್ಯಮಿದಂ ಶಾಸ್ತ್ರಂ ಶ್ರೋತವ್ಯಂ ಚ ಪ್ರಯತ್ನತಃ ।
ಭಕ್ತೇಭ್ಯಶ್ಚ ಪ್ರದಾತವ್ಯಂ ಧಾರ್ಮಿಕೇಭ್ಯಃ ಪುನಃ ಪುನಃ ॥ ೧೯೬ ॥

ಅಧೀಯಾನಾ ಇದಂ ನಿತ್ಯಂ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ ।
ಸರ್ವಪಾಪವಿನಿರ್ಮುಕ್ತಾಃ ಪ್ರಾಪ್ನುವಂತಿ ಪರಂ ಪದಮ್ ॥ ೧೯೭ ॥

ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।
ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ವಿಂದತಿ ॥ ೧೯೮ ॥

ತಸ್ಮಾದಿದಂ ಸದಾ ಶ್ರಾವ್ಯಂ ಶ್ರೋತವ್ಯಂ ಚ ಸದೈವ ಹಿ ।
ಕುತರ್ಕದಾವದಗ್ಧೇಭ್ಯೋ ನ ದಾತವ್ಯಂ ಕದಾಚನ ॥ ೧೯೯ ॥

ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।
ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥ ೨೦೦ ॥

ಕ್ಲಿನ್ನಂ ಪಾದೋದಕೇನೈವ ಯಸ್ಯ ನಿತ್ಯಂ ಕಲೇವರಮ್ ।
ತೀರ್ಥಕೋಟಿಸಹಸ್ರೈಸ್ತು ಸ್ನಾತೋ ಭವತಿ ಪ್ರತ್ಯಹಮ್ ॥ ೨೦೧ ॥

ತೋಯಂ ಯದಿ ಪಿಬೇನ್ನಿತ್ಯಂ ಶಾಲಗ್ರಾಮಶಿಲಾಚ್ಯುತಮ್ ।
ತೀರ್ಥಕೋಟಿಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಮ್ ॥ ೨೦೨ ॥

ಶಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದಿನೇ ದಿನೇ ।
ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ ॥ ೨೦೩ ॥

ದುಃಸಹೋ ನಾರಕೋ ವಹ್ನಿರ್ದುಃಸಹಾ ಯಮಕಿಂಕರಾಃ ।
ವಿಷಮಶ್ಚಾಂತಕಪಥಃ ಪ್ರೇತತ್ವಂ ಚಾತಿದಾರುಣಮ್ ॥ ೨೦೪ ॥

ವಿಚಿಂತ್ಯ ಮನಸಾಽಪ್ಯೇವಂ ಪಾತಕಾದ್ವಿನಿವರ್ತಯೇತ್ ।
ಸ್ಮರಣಂ ಕೀರ್ತನಂ ವಿಷ್ಣೋಃ ಸದೈವ ನ ಪರಿತ್ಯಜೇತ್ ॥ ೨೦೫ ॥

ವ್ಯಾಸಃ

ತೀರ್ಥಕೋಟಿಸಹಸ್ರೈಸ್ತು ಸೇವಿತೈಃ ಕಿಂಪ್ರಯೋಜನಮ್ ।
ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾಃ ।
ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥ ೨೦೬ ॥

ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ॥ ೨೦೭ ॥

ಸಕೃದುಚ್ಚಾರಿತಂ ಯೇನ ಹರಿರಿತ್ಯಕ್ಷರದ್ವಯಮ್ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೨೦೮ ॥

ಏವಂ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।
ಕೀರ್ತಯಂತಿ ಸುರಶ್ರೇಷ್ಠಂ ದೇವಂ ನಾರಾಯಣಂ ಪ್ರಭುಮ್ ॥ ೨೦೯ ॥

ಕಿಂ ತಸ್ಯ ದಾನೈಃ ಕಿಂ ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।
ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ ॥ ೨೧೦ ॥

ನಿತ್ಯೋತ್ಸವೋ ಭವೇತ್ ತೇಷಾಂ ನಿತ್ಯಶ್ರೀರ್ನಿತ್ಯಮಂಗಲಮ್ ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನಂ ಹರಿಃ ॥ ೨೧೧ ॥

ಜೀವಂಶ್ಚತುರ್ದಶಾದೂರ್ಧ್ವಂ ಪುರುಷೋ ನಿಯಮೇನ ತು ।
ಸ್ತ್ರೀವಾಽಪ್ಯನೂನದಶಕಂ ದೇಹಂ ಮಾನುಷಮಾರ್ಜತೇ ॥ ೨೧೨ ॥

ಚತುರ್ದಶೋರ್ಧ್ವಜೀವೀನಿ ಸಂಸಾರಶ್ಚಾದಿವರ್ಜಿತಃ ।
ಅವಿದಿತ್ವಾ ಪರಂ ದೇವಂ ಮೋಕ್ಷಾಶಾ ಕಾ ಮಹಾಮುನೇ ॥ ೨೧೩ ॥

ಆಚತುರ್ದಶಮಾದ್ವರ್ಷಾತ್ ಕರ್ಮಾಣಿ ನಿಯಮೇನ ತು ।
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ।
ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥ ೨೧೪ ॥

ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ।
ಕ್ರಿಯತೇ ಯೇನ ದೇವೋಽಪಿ ಸ್ವಪದಾದ್‌ಭ್ರಶ್ಯತೇ ಹಿ ಸಃ ॥ ೨೧೫ ॥

ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥ ೨೧೬ ॥

ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ ।
ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ ॥ ೨೧೭ ॥

ಯಥಾ ಸುಹೃತ್ಸು ಕರ್ತವ್ಯಂ ಪಿತೃಶತೃಸುತೇಷು ಚ ।
ತಥಾ ಕರೋತಿ ಪೂಜಾದಿ ಸಮಬುದ್ಧಿಃ ಸ ಉಚ್ಯತೇ ॥ ೨೧೮ ॥

ತಿರ್ಯಕ್ಪುಂಡ್ರಂ ನ ಕುರ್ವೀತ ಸಂಪ್ರಾಪ್ತೇ ಮರಣೇಽಪಿ ವಾ ।
ನ ಚಾನ್ಯನ್ನಾಮ ವಿಬ್ರೂಯಾತ್ ಪರಂ ನಾರಾಯಣಾದೃತೇ ॥ ೨೧೯ ॥

ನೈವೇದ್ಯಶೇಷಂ ದೇವಸ್ಯ ಯೋ ಭುನಕ್ತಿ ದಿನೇ ದಿನೇ ।
ಸಿಕ್ಥೇ ಸಿಕ್ಥೇ ಭವೇತ್ ಪುಣ್ಯಂ ಚಾಂದ್ರಾಯಣಶತಾಧಿಕಮ್ ॥ ೨೨೦ ॥

ಊರ್ಧ್ವಪುಂಡ್ರಮೃಜುಂ ಸೌಮ್ಯಂ ಲಲಾಟೇ ಯಸ್ಯ ದೃಶ್ಯತೇ ।
ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೨೨೧ ॥

ಅಶುಚಿರ್ವಾಽಪ್ಯನಾಚಾರೋ ಮನಸಾ ಪಾಪಮಾಚರನ್ ।
ಶುಚಿರೇವ ಭವೇನ್ನಿತ್ಯಮೂರ್ಧ್ವಪುಂಡ್ರಾಂಕಿತೋ ನರಃ ॥ ೨೨೨ ॥

ಊರ್ಧ್ವಪುಂಡ್ರವಿಹೀನಸ್ಯ ಶ್ಮಶಾನಸದೃಶಂ ಮುಖಮ್ ।
ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ ೨೨೩ ॥

ಯಜ್ಞೋ ದಾನಂ ತಪಶ್ಚೈವ ಸ್ವಾಧ್ಯಾಯಃ ಪಿತೃತರ್ಪಣಮ್ ।
ವ್ಯರ್ಥಂ ಭವತಿ ತತ್ ಸರ್ವಮೂರ್ಧ್ವಪುಂಡ್ರಂ ವಿನಾ ಕೃತಮ್ ॥ ೨೨೪ ॥

ಗೋಪೀಚಂದನಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ ।
ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ॥ ೨೨೫ ॥

ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ ।
ವೈಷ್ಣವೋಽಸ್ಮತ್ಕುಲೇ ಜಾತಃ ಸ ನಃ ಸಂತಾರಯಿಷ್ಯತಿ ॥ ೨೨೬ ॥

ಜೀವಿತಂ ವಿಷ್ಣುಭಕ್ತಸ್ಯ ವರಂ ಪಂಚದಿನಾನ್ಯಪಿ ।
ನ ತು ಕಲ್ಪಸಹಸ್ರೈಸ್ತು ಭಕ್ತಿಹೀನಸ್ಯ ಕೇಶವೇ ॥ ೨೨೭ ॥

ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನಶತ್ರುಣಾ ।
ಯೋ ಜಾತೋ ನಾರ್ಚಯೇದ್ವಿಷ್ಣುಂ ನ ಸ್ಮರೇನ್ನಾಪಿ ಕೀರ್ತಯೇತ್ ॥೨೨೮॥

ಯೋ ದದಾತಿ ದ್ವಿಜಾತಿಭ್ಯಶ್ಚಂದನಂ ಗೋಪಿಮರ್ದಿತಮ್ ।
ಅಪಿ ಸರ್ಷಪಮಾತ್ರೇಣ ಪುನಾತ್ಯಾಸಪ್ತಮಂ ಕುಲಮ್ ॥ ೨೨೯ ॥

ಜ್ಞಾನೀ ಚ ಕರ್ಮಾಣಿ ಸದೋದಿತಾನಿ
ಕುರ್ಯಾದಕಾಮಃ ಸತತಂ ಭವೇತ ॥ ೨೩೦ ॥

ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।
ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ॥ ೨೩೧ ॥

ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ
ತದೇವ ವೀರ್ಯವತ್ತರಂ ಭವತಿ ॥ ೨೩೨ ॥

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨೩೩ ॥

ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ।
ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೨೩೪ ॥

ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ॥ ೨೩೫ ॥

ಶ್ರೀಮದಾನಂದತೀರ್ಥಾರ್ಯಸಹಸ್ರಕಿರಣೋತ್ಥಿತಾ ।
ಗೋತತಿಃ ಸತತಂ ಸೇವ್ಯಾ ಗೀರ್ವಾಣೈಃ ಸಿದ್ಧಿದಾ ಭವೇತ್ ॥ ೨೩೬ ॥

ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-
ರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ ೨೩೭ ॥

ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೨೩೮ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಪ್ರಣೀತಃ
ಕೃಷ್ಣಾಮೃತಮಹಾರ್ಣವಃ ॥

*****

॥ ಶ್ರೀಕೃಷ್ಣಾರ್ಪಣಮಸ್ತು ॥

*****

|| ಶ್ರೀಃ ||

## ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತ

# ಕೃಷ್ಣಾಮೃತಮಹಾರ್ಣವ

|| ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕಶ್ರೀಲಕ್ಷ್ಮೀಹಯಗ್ರೀವಾಯ ನಮಃ ||

### ಮಂಗಳಾಚರಣೆ

**ಅರ್ಚಿತಃ ಸಂಸ್ಮೃತೋ ಧ್ಯಾತಃ ಕೀರ್ತಿತಃ ಕಥಿತಃ ಶ್ರುತಃ |[೧]**
**ಯೋ ದದಾತ್ಯಮೃತತ್ವಂ ಹಿ ಸ ಮಾಂ ರಕ್ಷತು ಕೇಶವಃ || ೧ ||**

**ಅನುವಾದ :** ಅರ್ಚನೆ, ಸಂಸ್ಮರಣೆ, ಧ್ಯಾನ, ಕೀರ್ತನೆ, ಕಥನ ಹಾಗೂ ಶ್ರವಣಗಳಿಂದ ಪ್ರಸನ್ನನಾಗಿ ಮೋಕ್ಷವನ್ನು ನೀಡುವ ಬ್ರಹ್ಮರುದ್ರಪ್ರವರ್ತಕನಾದ ಶ್ರೀಹರಿಯು ನನ್ನನ್ನು ಪಾಲಿಸಲಿ.

**ವಿವರಣೆ :** ೧. ಕೃಷ್ಣಾಮೃತಮಹಾರ್ಣವ ಎಂಬ ಈ ಅಪೂರ್ವಕೃತಿಯನ್ನು ರಚಿಸುತ್ತಾ ಶ್ರೀಮದಾಚಾರ್ಯರು ಮೊದಲಿಗೆ ಈ ಶ್ಲೋಕದ ಮೂಲಕ ಮಂಗಲಾಚರಣೆ ಮಾಡಿರುವರು.

೨. ಶ್ರೀಹರಿಯು ಸರ್ವೋತ್ತಮ ಎಂಬುದನ್ನು ಸೂಚಿಸುವ ಕೇಶವ ಎಂಬ ಪದದಿಂದಲೇ ಅವನನ್ನು ಸ್ತುತಿಸುತ್ತಿರುವುದು ಇಲ್ಲಿಯ ವಿಶೇಷ.

೩. ಈ ಕೃತಿರಚನೆ ಮಾಡಿದ್ದು ವೈದ್ಯನಾಥೇಶ್ವರವೆಂದು ಪ್ರಸಿದ್ಧವಾದ ಕೊಕ್ಕಡ ಕ್ಷೇತ್ರದಲ್ಲಿ, ಆ ಮುನ್ನ ಎರ್ಕಿಮಠ(ರಾಮಕುಂಜ)ದಲ್ಲಿ ತಟಾಕ ತುಂಬುವಂತೆ ಮಳೆಸುರಿಸಿ ಅಲ್ಲಿಯ ಜನರಿಗೆ ಧರ್ಮಪರಾಯಣರಾಗುವಂತೆ ಆದೇಶಿಸಿ ಅವರ ಆರಾಧನೆಗೆಂದು ಕೇಶವಮೂರ್ತಿಯನ್ನು ನೀಡಿದ ಶ್ರೀಮದಾಚಾರ್ಯರು ಅಲ್ಲಿಯ ಕೇಶವನನ್ನೇ ಎಂಬಂತೆ ಇಲ್ಲಿ ಕೇಶವರೂಪವನ್ನು ಸ್ತುತಿಸಿರುವುದು ವಿಶೇಷ.

೪. ಕೇಶವ ರೂಪ ಇಪ್ಪತ್ತನಾಲ್ಕು ರೂಪಗಳಲ್ಲಿ ಮೊದಲನೆಯದಾಗಿರುವಂತೆ ಆಚಮನಕ್ಕೆ ವಿಹಿತವಾದ ಮೊದಲ ರೂಪವೂ ಆಗಿದೆ. ಈ ಪದದ ಪ್ರಯೋಗದ ಮೂಲಕ ಶ್ರೀಮದಾಚಾರ್ಯರು ಆಚಮನೋಪಲಕ್ಷಿತವಾದ ಸಕಲ ಸತ್ಕರ್ಮಗಳನ್ನೂ ಸಹ ಶ್ರೀಹರಿಯ ಪ್ರೀತ್ಯರ್ಥವಾಗಿ ತಪ್ಪದೇ ಆಚರಿಸಲೇಬೇಕು ಎಂಬ ವಿಧಿಯನ್ನೂ ಸಹ ಸೂಚಿಸಿರುವರು.

---

೧. ಯತ್ಕೀರ್ತನಂ ಯತ್ಸ್ಮರಣಂ ಯದೀಕ್ಷಣಂ ಯದ್ವಂದನಂ ಯಚ್ಛ್ರವಣಂ ಯದರ್ಹಣಮ್ |
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ ತಸ್ಮೈ ಸುಭದ್ರಶ್ರವಸೇ ನಮೋ ನಮಃ ||
– ಭಾಗವತ (೨/೪/೧೫)

೫. ಸದಾಚಾರಸ್ಮೃತಿಯಲ್ಲಿ ನಿತ್ಯಸದಾಚಾರದ ಪಟ್ಟಿಯನ್ನು ಒದಗಿಸಿದ ಶ್ರೀಮದಾ-ಚಾರ್ಯರು ಈ ಕೃತಿಯಲ್ಲಿ ಅಂತಹ ಸದಾಚಾರಕ್ಕೆ ಅತ್ಯಂತ ಆವಶ್ಯಕವಾದ ಅನುಸಂಧಾನ ಅರ್ಪಣೆ ವೈಷ್ಣವಸಂಸ್ಕಾರ ಮೊದಲಾದ ಅನೇಕ ವಿವರಗಳನ್ನು ನೀಡುತ್ತಿರುವರು.

೬. ಶ್ರೀಹರಿಯನ್ನು ಒಲಿಸುವ ಆರುಬಗೆಯ ಸಾಧನೆಗಳನ್ನು ಇಲ್ಲಿ ತಿಳಿಸಿರುವರು.

೭. **ಅರ್ಚನೆ** ಎಂದರೆ ಪೂಜೆ; **ಸಂಸ್ಮರಣೆ** ಎಂದರೆ ನೆನೆಯುವಿಕೆ; **ಧ್ಯಾನ** ಮನಸ್ಸನ್ನು ಏಕಾಗ್ರಗೊಳಿಸುವ ರೀತಿ; **ಕೀರ್ತನೆ** ತಾನಾಗಿಯೇ ಶ್ರೀಹರಿಯನ್ನು ಕೊಂಡಾಡುವುದು; **ಕಥನ** ಎಂದರೆ ಯೋಗ್ಯರಿಗೆ ತನಗೆ ತಿಳಿದ ಶ್ರೀಹರಿಯ ಮಹಿಮೆಯನ್ನು ತಿಳಿಸುವುದು; **ಶ್ರವಣ**ವೆಂದರೆ ಜ್ಞಾನಿಗಳಿಂದ ಶ್ರೀಹರಿಯ ಮಾಹಾತ್ಮ್ಯವನ್ನು ಶ್ರವಣಮಾಡುವುದು.

೮. ಈ ಕೃತಿಯಲ್ಲಿ ಈ ಆರರ ಬಗ್ಗೆ ವಿಶೇಷ ವಿವರಗಳು ಮುಂದೆ ಬಂದಿವೆ; ಇದರಿಂದ ಈ ಶ್ಲೋಕ ಮಂಗಳಶ್ಲೋಕವಾಗಿರುವಂತೆ ವಿಷಯಗಳನ್ನು ಸಂಗ್ರಹವಾಗಿ ನಿರೂಪಿಸುವ ಪೀಠಿಕೆಯೂ ಆಗಿದೆ.

೯. ಕೇಶವ ಎಂದರೆ ಬ್ರಹ್ಮ ರುದ್ರರನ್ನು ಪ್ರವರ್ತಿಸುವವನು ಎಂದರ್ಥ. 'ಕ' – ಬ್ರಹ್ಮ; 'ಈಶ' – ಶಂಕರ; 'ವ' ಎಂದರೆ ಸೃಷ್ಟ್ಯಾದಿಗಳನ್ನು ಮಾಡಿ ಪ್ರವರ್ತಿಸುವವನು. ಬ್ರಹ್ಮರುದ್ರ ಉಪಲಕ್ಷಿತವಾದ ಸಮಸ್ತವಿಶ್ವವನ್ನು ನಿಯಮಿಸುವವನು ಎಂದು ತಾತ್ಪರ್ಯ:

**ಕಂ ಬ್ರಹ್ಮಾಣಮೀಶಂ ರುದ್ರಂ ಚ ವರ್ತಯತೀತಿ ಕೇಶವಃ। ತಥಾಪಿ ನಿರುಕ್ತಿಃ ಕೃತಾ ಹರಿವಂಶೇಷು ರುದ್ರೇಣ ಕೈಲಾಸಯಾತ್ರಾಯಾಮ್।**

**'ಹಿರಣ್ಯಗರ್ಭಃ ಕಃ ಪ್ರೋಕ್ತ ಈಶಃ ಶಂಕರ ಏವ ಚ।**
**ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್' ಇತಿ ವಚನಾಂತರಾಚ್ಚ।**
**– ಗೀತಾಭಾಷ್ಯ (೨/೫೪)**

೧೦. ಕೇಶವ ನಾಮವು ಮಾಸನಿಯಾಮಕ ಭಗವದ್ರೂಪಗಳಲ್ಲಿ ಮೊದಲನೆಯದು. ಮಾರ್ಗಶೀರ್ಷ ಮಾಸದ ಅಧಿದೇವತೆ; ಮತ್ತೊಂದು ಬಗೆಯಲ್ಲಿ ಕೇಶವರೂಪವು ಚತುರ್ವಿಂಶತಿರೂಪಗಳಲ್ಲಿ ಮೊದಲನೆಯದು. ನೈವೇದ್ಯಪದಾರ್ಥಗಳಲ್ಲಿ ಅನ್ನಕ್ಕೆ ನಿಯಾಮಕವಾದ ಭಗವದ್ರೂಪವೂ ಇದೇ ಆಗಿದೆ. ರಾಮಕುಂಜಪ್ರದೇಶದಲ್ಲಿ ಬರಪೀಡಿತವಾಗಿದ್ದ ಜನತೆಗೆ ವೃಷ್ಟಿಯಮೂಲಕ ಅನ್ನ ನೀಡಿ ಕೇಶವ ಮೂರ್ತಿಯನ್ನು ಆರಾಧನೆಗೆಂದು ಅನುಗ್ರಹಿಸಿಬಂದಿದ್ದ ಆಚಾರ್ಯರು ಕೊಕ್ಕಡ ಕ್ಷೇತ್ರವಲ್ಲಿ ಅದನ್ನು ಈ ರೀತಿಯಲ್ಲಿ ಸ್ತುತಿಸಿರುವರು ಎಂಬುದು ವಿಶೇಷ.

೧೧. ಪಂಚರಾತ್ರದಲ್ಲಿ ನಿರೂಪಿತವಾಗಿರುವಂತೆ [೧] ಅನ್ನಕ್ಕೆ ನಿಯಾಮಕವಾದ ಭಗವದ್ರೂಪ ಕೇಶವ. ಹೀಗೆ ಕೇಶವಮೂರ್ತಿಯನ್ನು ಆರಾಧನೆಗೆ ಅನುಗ್ರಹಿಸುವ ಮೂಲಕ

೧. ಅನ್ನಾಭಿಮಾನೀ ಚಂದ್ರಸ್ತು ಕೇಶವಸ್ತತ್ರ ದೇವತಾ। (ಪಂಚರಾತ್ರ)

ಕೇಶವರೂಪದ ಸ್ಮರಣೆಯು ಅನ್ನದಾಯಕ ಎಂಬ ವಿಶೇಷ ಪ್ರಮೇಯವನ್ನು ಶ್ರೀಮದಾಚಾರ್ಯರು ಸೂಚಿಸಿದರು ಎಂದು ತಿಳಿಯಬಹುದು.

೧೨. ಅಮೃತತ್ವ ಎಂದರೆ ಸಾವಿಲ್ಲದ ತಾಣ; ಮೋಕ್ಷ ಎಂದರ್ಥ. ಮೋಕ್ಷ ನೀಡುವವನು ಸಾಕ್ಷಾತ್ ಶ್ರೀಹರಿಯೇ ಎಂಬ ತತ್ತ್ವವನ್ನು ಈ ಮೂಲಕ ಸೂಚಿಸಿರುವರು. ಬ್ರಹ್ಮದೇವರೇ ಮೊದಲಾದ ಇತರ ಎಲ್ಲ ದೇವತೆಗಳ ಲೋಕಗಳೂ ಸಹ ಅನಿತ್ಯ; ವಿಷ್ಣುಲೋಕವಾದ ವೈಕುಂಠ ಮಾತ್ರವೇ ನಿತ್ಯ. ಆದ್ದರಿಂದ ಅಮೃತತ್ವವಿರುವ ಲೋಕ ಎಂದರೆ ವೈಕುಂಠ ಎಂದು ಭಾವ.

೧೩. ಯಃ ಎಂಬುದಕ್ಕೆ ಪ್ರಕಾಶರೂಪ ಎಂಬ ಅರ್ಥವು ವಿವಕ್ಷಿತ. ಈ ಅರ್ಥ-ವಿಶೇಷವನ್ನು ಶ್ರೀಮದಾಚಾರ್ಯರು ಶ್ರೀಮದ್ಭಾಗವತತಾತ್ಪರ್ಯದಲ್ಲಿ ತಿಳಿಸಿರುವರು : ಯಃ ಪ್ರಕಾಶರೂಪಃ।(ಭಾ.ತಾ.೧೧/೬/೮)

★★

## ಗ್ರಂಥರಚನೆಯ ಉದ್ದೇಶ

**ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್[1] ॥ ೨ ॥**

**ಅ:** ಸಕಲಜಗತ್ತು ಮೂರು ಬಗೆಯ ತಾಪಗಳಿಂದ ಬಹಳವಾಗಿ ಬೆಂದಿದೆ; ಅದರ ಪರಿಹಾರಕ್ಕೆಂದು ಕೃಷ್ಣಾಮೃತಮಹಾರ್ಣವವನ್ನು ತಿಳಿಸುತ್ತಿರುವೆನು[2].

**ವಿ:** ೧. ಕೃಷ್ಣಾಮೃತಮಹಾರ್ಣವ ರಚನೆಯ ಉದ್ದೇಶವನ್ನು ಈ ಶ್ಲೋಕದಲ್ಲಿ ತಿಳಿಸಿರುವರು.

೨. ಸಕಲಜಗತ್ತು ತಾಪತ್ರಯದಿಂದ ಪೀಡಿತ ಎನ್ನುವ ಮೂಲಕ ಸಂಸಾರದ ಸ್ವರೂಪವನ್ನೇ ವಿವರಿಸಿರುವರು ಎಂದು ತಿಳಿಯಬೇಕು.

೩. 'ತಾಪತ್ರಯ' ಎಂದರೆ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ಮೂರು-ಬಗೆಯ ತಾಪಗಳು. ಆಧ್ಯಾತ್ಮಿಕ ಎಂದರೆ ಮನಸ್ಸಿಗೆ ಒದಗುವ ಪರಿತಾಪ; ಆಧಿದೈವಿಕ

---

೧. ಕೃಷ್ಣ ಏವ ಅಮೃತಮಹಾರ್ಣವಃ ಸ ಏವಾಸ್ಮಿನ್‌ಗ್ರಂಥೇ ಪ್ರತಿಪಾದ್ಯತೇ । ತಾದೃಶಂ ಗ್ರಂಥಂ ವಕ್ಷ್ಯಾಮೀತ್ಯನ್ವಯಃ। ....... ಕೃಷ್ಣಸ್ಯಾರ್ಣವತ್ವೋಕ್ತ್ಯಾ ಪರಿಚ್ಛಿನ್ನತ್ವಭ್ರಾಂತಿನಿವಾರಣಾಯ ಮಹೇತಿ ವಿಶೇಷಣಮ್ । ಅಪರಿಮಿತಾರ್ಣವಮಿತ್ಯರ್ಥಃ। (ತಾ)

೨. ಕೃಷ್ಣಾಮೃತಮಹಾರ್ಣವಂ ಕೃಷ್ಣಾಖ್ಯಾಮೃತಮಹಾಗುಣಾರ್ಣವಪ್ರತಿಪಾದಕಂ ಗ್ರಂಥಮ್ । ಕೃಷ್ಣೇನ ಭಕ್ತೇಭ್ಯ ಉದ್ದಿಶ್ಯಮಾನಸ್ವರೂಪಸುಖಾತ್ಮಕಾಮೃತಮಹಾಸಮುದ್ರಸಾಧನಮಿತಿ ವಾ । ಕೃಷ್ಣಾಮೃತಾಖ್ಯ-ಗ್ರಂಥಸಂದರ್ಭಂ ವದಾಮೀತ್ಯರ್ಥಃ॥ (ಸ್ವ.ಕೃ)
ಕೃಷ್ಣಾಮೃತಮಹಾರ್ಣವಂ ಕೃಷ್ಣಸ್ಯಾಮೃತಮಹಾಗುಣತ್ವಪ್ರತಿಪಾದಕಂ ಕೃಷ್ಣಾಮೃತಮಹಾರ್ಣವಾಖ್ಯಂ ಗ್ರಂಥಂ ವಾಕ್ಯಸಂದರ್ಭಂ ವಕ್ಷ್ಯಾಮೀತ್ಯರ್ಥಃ॥ (ಕೃ)

ಎಂದರೆ ಭೂಕಂಪ, ಪ್ರವಾಹ, ಅತಿವೃಷ್ಟಿ, ಅನಾವೃಷ್ಟಿ ಮೊದಲಾದ ತಾಪಗಳು; ಆಧಿಭೌತಿಕ ಎಂದರೆ ದೇಹಕ್ಕೆ ಒದಗುವ ರೋಗ ರುಜಿನಗಳು. ಇವೆಲ್ಲವುಗಳ ಪರಿಹಾರಕ್ಕೆ ಕೃಷ್ಣಾಮೃತಮಹಾರ್ಣವ ಕೃತಿಯೇ ಮುಖ್ಯಸಾಧನ ಎಂದರ್ಥ[೧].

೪. ಅಖಿಲಜಗತ್ತು ತಾಪತ್ರಯಗಳಿಂದ ಪೀಡಿತವಾದ್ದರಿಂದ ಈ ಕೃತಿ ಸಕಲಜಗತ್ತಿನ ಕಲ್ಯಾಣಕ್ಕೋಸ್ಕರ ರಚಿತವಾದ ಮಹತ್ತರವಾದ ಕೃತಿ ಎಂಬ ವಿಶೇಷಾಂಶ ಸೂಚಿತ.

೫. ಈ ಬಗೆಯ ತಾಪಗಳು ಭೌತಿಕ ಉಪಾಯಗಳಿಂದ ಸರ್ವಥಾ ಪರಿಹಾರವಾಗು-ವುದಿಲ್ಲ ಎಂಬುದು ಸರ್ವಾನುಭವಸಿದ್ಧವಾದ ವಿಚಾರ. ಅದರಿಂದಾಗಿಯೇ ಕೃಷ್ಣನನ್ನು ಮೊರೆಹೋಗುವ ಉಪಾಯದ ಹೊರತು ಬೇರೊಂದು ದಾರಿಯಿಲ್ಲ ಎಂದಾಗುವುದು.

೬. ಕೃಷ್ಣಾಮೃತಮಹಾರ್ಣವ ಎಂಬುದು ಎರಡು ಬಗೆಯಲ್ಲಿ ಸಾರ್ಥಕವಾಗಿರುವ ಪದ. ಮೊದಲನೆಯ ಅರ್ಥದಲ್ಲಿ ಇದು ಈ ಕೃತಿಗೆ ಅನ್ವಯಿಸುವ ಹೆಸರು. ಇದರಂತೆ ಕೃಷ್ಣನೆಂಬ ಅಮೃತಮಹಾರ್ಣವವನ್ನು ತೋರಿಕೊಡುವ ಕೃತಿ ಎಂದು ಅರ್ಥ. ಮತ್ತೊಂದು ಬಗೆಯಲ್ಲಿ ಕೃಷ್ಣನೇ ಅಮೃತಮಹಾರ್ಣವ; ಅಮೃತಮಹಾರ್ಣವನಾದ್ದರಿಂದಲೇ ಅವನು ಸರ್ವಥಾ ತಾಪತ್ರಯರಹಿತ; ಅದರಿಂದಾಗಿಯೇ ಅವನು ಇತರ ಎಲ್ಲರ ತಾಪತ್ರಯವನ್ನು ಪರಿಹರಿಸುವ ಮಹಾಮಹಿಮ. ಮೊದಲ ಶ್ಲೋಕದಲ್ಲಿ ಅವನು ಅಮೃತವನ್ನು ನೀಡುವವನು ಎಂದು ಹೇಳಿ ಈ ಶ್ಲೋಕದಲ್ಲಿ ಅವನು ಅಮೃತದ ಮಹಾಸಾಗರ ಎಂದು ತಿಳಿಸುವ ಮೂಲಕ ಅವನು ಅಮೃತನೀಡುವ ಮಹಾಸಮರ್ಥ ಎಂಬ ವಿಶೇಷಾಂಶವನ್ನು ನಿರೂಪಿಸಿರುವರು.

೭. ಸಮಸ್ತಜಗತ್ತಿಗೂ ತಾಪತ್ರಯಪರಿಹಾರಮಾಡುವ ಸಾಮರ್ಥ್ಯ ಕೂಪ, ಸರೋವರ ಮೊದಲಾದವುಗಳಿಗೆ ಎಂದೂ ಸಾಧ್ಯವಾಗದು. ಶ್ರೀಹರಿಯು ಮಹಾಸಾಗರನಾದ್ದರಿಂದ ಅವನಿಗೆ ಮಾತ್ರ ಈ ಸಾಮರ್ಥ್ಯ ಎಂಬ ಅಂಶವೂ ಇದರಿಂದ ಸೂಚಿತ. ಅವನು ಅಮೃತದ ಮಹಾರ್ಣವ ಎನ್ನುವ ಮೂಲಕ ಲೋಕವಿಲಕ್ಷಣವಾದ ಮಹಾಸಾಗರ ಎಂದಾಗುವುದು.

★★

## ವೈಷ್ಣವದೀಕ್ಷೆ ಇಲ್ಲದವರ ಬದುಕು ವ್ಯರ್ಥ

**ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಮ್[೨] ।**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥ ೩ ॥**

೧. ತಾಪತ್ರಯೇಣ ಆಧ್ಯಾತ್ಮಿಕಾಧಿದೈವಿಕಾಧಿಭೌತಿಕತಾಪತ್ರಯೇಣ ತಥಾ ಕಾಯಿಕವಾಚಿಕಮಾನಸಿಕ-ಪ್ರಾಪ್ತತಾಪತ್ರಯೇಣ, ಪುತ್ರೇಷಣವಿತ್ತೇಷಣದಾರೇಷಣಜನ್ಯ ತಾಪತ್ರಯೇಣ ವಾ, ಗರ್ಭವಾಸಜನ್ಮಮರಣಾದಿಜನ್ಯತಾಪತ್ರಯೇಣ ವಾ, ಸ್ವರ್ಗಮರ್ತ್ಯನರಕವಾಸಜನ್ಯ ತಾಪತ್ರಯೇಣ ವಾ, ಭಗ-ವದ್ವಿಸ್ಮರಣದುಷ್ಟಸಂಸರ್ಗಸತ್ಸಂಗರಾಹಿತ್ಯಜನ್ಯತಾಪತ್ರಯೇಣ ವಾ। (ಸ್ವ.ಕೃ)

೨. ಜೀವನೇ ಫಲಮ್ ( ಪಾ.)

ಅ: ಯಾರು ಶ್ರೀಹರಿಯ ದೀಕ್ಷೆ ಹೊಂದಿಲ್ಲವೋ, ಶ್ರೀಹರಿಯನ್ನು ಆರಾಧಿಸಿಲ್ಲವೋ ಅಂತಹ ಜನರು ಪಶುಗಳು ; ಅವರು ಲೋಕದಲ್ಲಿ ಬದುಕಿದ್ದು ಏನು ಫಲ?

ವಿ: ೧. ವೈಷ್ಣವದೀಕ್ಷೆ, ಹಾಗೂ ಶ್ರೀಹರಿಯ ಪೂಜೆ ಇವೆರಡೂ ಬಾಳಿನ ಮಹಾಫಲಗಳು ಎಂಬ ವಿಶೇಷತತ್ತ್ವ ಇಲ್ಲಿ ನಿರೂಪಿತವಾಗಿದೆ. ಇವೆರಡನ್ನೂ ಹೊಂದದ ನರರು ಪಶುಗಳೇ ಸರಿ ಎನ್ನುವ ಮೂಲಕ ಅವರ ಬಾಳು ಇತರ ಎಲ್ಲ ಭೋಗಭಾಗ್ಯಗಳನ್ನು ಹೊಂದಿದ್ದರೂ ಪಶುಜೀವನದಂತೆ ನಿರರ್ಥಕ ಎಂಬ ತತ್ವವು ಸೂಚಿತ.

೨. ಜನಾರ್ದನ ಎಂದರೆ ಸ್ವತಃ ಹುಟ್ಟಿಲ್ಲದವನು ಹಾಗೂ ಇತರರ ಸಂಸಾರವನ್ನು ಪರಿಹರಿಸುವವನು ಎಂದರ್ಥ. ಇಂತಹ ಮಹಾಮಹಿಮನನ್ನು ಪೂಜಿಸದವರಿಗೆ ಸಂಸಾರ-ಬಂಧನ ಪರಿಹಾರವಾಗುವುದಿಲ್ಲವಾದ್ದರಿಂದ ಅವರ ಜೀವನ ನಿರರ್ಥಕ ಎಂದು ಭಾವ.

★★

## ಶ್ರೀಹರಿಯ ಪೂಜೆ ಸಂಸಾರದ ಮಹಾಫಲ

**ಸಂಸಾರೇಽಸ್ಮಿನ್ ಮಹಾಘೋರೇ ಜನ್ಮರೋಗಭಯಾಕುಲೇ ।**
**ಅಯಮೇಕೋ ಮಹಾಭಾಗಃ ಪೂಜ್ಯತೇ ಯದಧೋಕ್ಷಜಃ ॥ ೪ ॥**

ಅ: ಹುಟ್ಟು, ರೋಗ ಭಯಗಳಿಂದ ಗೊಂದಲಗೊಂಡಿರುವ ಈ ಮಹಾ-ಭಯಂಕರವಾದ ಸಂಸಾರದಲ್ಲಿ ಶ್ರೀಹರಿಯನ್ನು ಪೂಜಿಸುವುದೊಂದೇ ಮಹಾಭಾಗ್ಯ.

ವಿ: ೧. ಸಂಸಾರವು ಭಯಂಕರ; ಆದರೆ ಅದರಲ್ಲಿರುವ ವಿಶೇಷಹಿರಿಮೆಯನ್ನೂ ಸಹ ಈ ಶ್ಲೋಕದಲ್ಲಿ ನಿರೂಪಿಸಿರುವರು :

**ಫಲವಾನ್ ಮೋಕ್ಷಹೇತುತ್ವಾತ್ ನಿತ್ಯಾನಂದಾದಪಾರ್ಥಕಃ ।**
**ಜೀವಾತ್ಮನಸ್ತು ಸಂಸಾರಃ ಸ್ವಪ್ನವಚ್ಚಂಚಲತ್ವತಃ ॥**
**- ತತ್ತ್ವವಿವೇಕ (ಭಾ.ತಾ ೧೧/೨೮/೧೩)**

**ಶುಕ್ಲಶೋಣಿತಸಂಭೂತೇ ಜ್ವರರೋಗಾದ್ಯುಪದ್ರುತೇ ।**
**ಮೇದೋಕ್ತಾಸ್ಥಿಮಾಂಸಾದಿಹೇಯದ್ರವ್ಯಸಮಾಕುಲೇ ॥**
**ಮಲಮೂತ್ರವಸಾಪಂಕೇ ಕಾರಾಗೃಹನಿಭೇಽಶುಭೇ ॥-ಹಾರೀತಸ್ಮೃತಿ(ಸ್ಮೃ.ಮು.)**

೨. ಸಂಸಾರದಲ್ಲಿ ಹುಟ್ಟು, ರೋಗ, ರುಜಿನಗಳು ಮೊದಲಾದವುಗಳ ಭಯ ಎಂದೂ ತಪ್ಪಿದ್ದಲ್ಲ. ಅದಕ್ಕೆಂದೇ ಇದು ಹೇಯ. ಆದರೆ, ಶ್ರೀಹರಿಯನ್ನು ಪೂಜಿಸುವ ಭಾಗ್ಯ ದೊರೆಯುವುದು ಇದರಲ್ಲಿಯೇ. ಅದಕ್ಕೆಂದೇ ಇದು ಸಾಧನೆಗೆ ಅಪೂರ್ವ ಅವಕಾಶ. ಶ್ರೀಹರಿ ಜೀವರಿಗೆ ಸಂಸಾರ ನೀಡಿರುವುದು ಅದಕ್ಕಾಗಿ. ಸಂಸಾರ ಹೇಯವಾಗಿದ್ದಲ್ಲಿ ಶ್ರೀಹರಿ ಅದನ್ನೇಕೆ ಸಾಧಕರಿಗೆ ನೀಡುವನು ಎಂಬ ಪ್ರಶ್ನೆಗೆ ಉತ್ತರವು ಇಲ್ಲಿದೆ. 'ಸಂಸಾರವೆಂಬಂಥ

ಎಂದರೆ ಭೂಕಂಪ, ಪ್ರವಾಹ, ಅತಿವೃಷ್ಟಿ, ಅನಾವೃಷ್ಟಿ ಮೊದಲಾದ ತಾಪಗಳು; ಆಧಿಭೌತಿಕ ಎಂದರೆ ದೇಹಕ್ಕೆ ಒದಗುವ ರೋಗ ರುಜಿನಗಳು. ಇವೆಲ್ಲವುಗಳ ಪರಿಹಾರಕ್ಕೆ ಕೃಷ್ಣಾಮೃತಮಹಾರ್ಣವ ಕೃತಿಯೇ ಮುಖ್ಯಸಾಧನ ಎಂದರ್ಥ[೧].

೪. ಅಖಿಲಜಗತ್ತು ತಾಪತ್ರಯಗಳಿಂದ ಪೀಡಿತವಾದ್ದರಿಂದ ಈ ಕೃತಿ ಸಕಲಜಗತ್ತಿನ ಕಲ್ಯಾಣಕ್ಕೋಸ್ಕರ ರಚಿತವಾದ ಮಹತ್ತರವಾದ ಕೃತಿ ಎಂಬ ವಿಶೇಷಾಂಶ ಸೂಚಿತ.

೫. ಈ ಬಗೆಯ ತಾಪಗಳು ಭೌತಿಕ ಉಪಾಯಗಳಿಂದ ಸರ್ವಥಾ ಪರಿಹಾರವಾಗು-ವುದಿಲ್ಲ ಎಂಬುದು ಸರ್ವಾನುಭವಸಿದ್ಧವಾದ ವಿಚಾರ. ಅದರಿಂದಾಗಿಯೇ ಕೃಷ್ಣನನ್ನು ಮೊರೆಹೋಗುವ ಉಪಾಯದ ಹೊರತು ಬೇರೊಂದು ದಾರಿಯಿಲ್ಲ ಎಂದಾಗುವುದು.

೬. ಕೃಷ್ಣಾಮೃತಮಹಾರ್ಣವ ಎಂಬುದು ಎರಡು ಬಗೆಯಲ್ಲಿ ಸಾರ್ಥಕವಾಗಿರುವ ಪದ. ಮೊದಲನೆಯ ಅರ್ಥದಲ್ಲಿ ಇದು ಈ ಕೃತಿಗೆ ಅನ್ವಯಿಸುವ ಹೆಸರು. ಇದರಂತೆ ಕೃಷ್ಣನೆಂಬ ಅಮೃತಮಹಾರ್ಣವವನ್ನು ತೋರಿಕೊಡುವ ಕೃತಿ ಎಂದು ಅರ್ಥ. ಮತ್ತೊಂದು ಬಗೆಯಲ್ಲಿ ಕೃಷ್ಣನೇ ಅಮೃತಮಹಾರ್ಣವ; ಅಮೃತಮಹಾರ್ಣವನಾದ್ದರಿಂದಲೇ ಅವನು ಸರ್ವಥಾ ತಾಪತ್ರಯರಹಿತ; ಅದರಿಂದಾಗಿಯೇ ಅವನು ಇತರ ಎಲ್ಲರ ತಾಪತ್ರಯವನ್ನು ಪರಿಹರಿಸುವ ಮಹಾಮಹಿಮ. ಮೊದಲ ಶ್ಲೋಕದಲ್ಲಿ ಅವನು ಅಮೃತವನ್ನು ನೀಡುವನು ಎಂದು ಹೇಳಿ ಈ ಶ್ಲೋಕದಲ್ಲಿ ಅವನು ಅಮೃತದ ಮಹಾಸಾಗರ ಎಂದು ತಿಳಿಸುವ ಮೂಲಕ ಅವನು ಅಮೃತನೀಡುವ ಮಹಾಸಮರ್ಥ ಎಂಬ ವಿಶೇಷಾಂಶವನ್ನು ನಿರೂಪಿಸಿರುವರು.

೭. ಸಮಸ್ತಜಗತ್ತಿಗೂ ತಾಪತ್ರಯಪರಿಹಾರಮಾಡುವ ಸಾಮರ್ಥ್ಯ ಕೂಪ, ಸರೋವರ ಮೊದಲಾದವುಗಳಿಗೆ ಎಂದೂ ಸಾಧ್ಯವಾಗದು. ಶ್ರೀಹರಿಯು ಮಹಾಸಾಗರನಾದ್ದರಿಂದ ಅವನಿಗೆ ಮಾತ್ರ ಈ ಸಾಮರ್ಥ್ಯ ಎಂಬ ಅಂಶವೂ ಇದರಿಂದ ಸೂಚಿತ. ಅವನು ಅಮೃತದ ಮಹಾರ್ಣವ ಎನ್ನುವ ಮೂಲಕ ಲೋಕವಿಲಕ್ಷಣವಾದ ಮಹಾಸಾಗರ ಎಂದಾಗುವುದು.

★★

## ವೈಷ್ಣವದೀಕ್ಷೆ ಇಲ್ಲದವರ ಬದುಕು ವ್ಯರ್ಥ

**ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಮ್[೨] ।**
**ಯೈರ್ನ ಲಬ್ಧಾ ಹರೇರ್ದೀಕ್ಷಾ ನಾರ್ಚಿತೋ ವಾ ಜನಾರ್ದನಃ ॥ ೩ ॥**

---

೧. ತಾಪತ್ರಯೇಣ ಆಧ್ಯಾತ್ಮಿಕಾಧಿದೈವಿಕಾಧಿಭೌತಿಕತಾಪತ್ರಯೇಣ ತಥಾ ಕಾಯಿಕವಾಚಿಕಮಾನಸಿಕ-ಪ್ರಾಪ್ತತಾಪತ್ರಯೇಣ, ಪುತ್ರೇಷಣವಿತ್ತೇಷಣದಾರೇಷಣಜನ್ಯ ತಾಪತ್ರಯೇಣ ವಾ, ಗರ್ಭವಾಸಜನ್ಮಮರಣಾದಿಜನ್ಯತಾಪತ್ರಯೇಣ ವಾ, ಸ್ವರ್ಗಮರ್ತ್ಯನರಕವಾಸಜನ್ಯ ತಾಪತ್ರಯೇಣ ವಾ, ಭಗ-ವದ್ವಿಸ್ಮರಣದುಷ್ಟಸಂಸರ್ಗಸತ್ಸಂಗರಾಹಿತ್ಯಜನ್ಯತಾಪತ್ರಯೇಣ ವಾ । (ಸ್ವ.ಕೃ)

೨. ಜೀವನೇ ಫಲಮ್ ( ಪಾ.)

ಅ: ಯಾರು ಶ್ರೀಹರಿಯ ದೀಕ್ಷೆ ಹೊಂದಿಲ್ಲವೋ, ಶ್ರೀಹರಿಯನ್ನು ಆರಾಧಿಸಿಲ್ಲವೋ ಅಂತಹ ಜನರು ಪಶುಗಳು ; ಅವರು ಲೋಕದಲ್ಲಿ ಬದುಕಿದ್ದು ಏನು ಫಲ?

ವಿ: ೧. ವೈಷ್ಣವದೀಕ್ಷೆ, ಹಾಗೂ ಶ್ರೀಹರಿಯ ಪೂಜೆ ಇವೆರಡೂ ಬಾಳಿನ ಮಹಾಫಲಗಳು ಎಂಬ ವಿಶೇಷತತ್ತ್ವ ಇಲ್ಲಿ ನಿರೂಪಿತವಾಗಿದೆ. ಇವೆರಡನ್ನೂ ಹೊಂದದ ನರರು ಪಶುಗಳೇ ಸರಿ ಎನ್ನುವ ಮೂಲಕ ಅವರ ಬಾಳು ಇತರ ಎಲ್ಲ ಭೋಗಭಾಗ್ಯಗಳನ್ನು ಹೊಂದಿದ್ದರೂ ಪಶುಜೀವನದಂತೆ ನಿರರ್ಥಕ ಎಂಬ ತತ್ವವು ಸೂಚಿತ.

೨. ಜನಾರ್ದನ ಎಂದರೆ ಸ್ವತಃ ಹುಟ್ಟಿಲ್ಲದವನು ಹಾಗೂ ಇತರರ ಸಂಸಾರವನ್ನು ಪರಿಹರಿಸುವವನು ಎಂದರ್ಥ. ಇಂತಹ ಮಹಾಮಹಿಮನನ್ನು ಪೂಜಿಸದವರಿಗೆ ಸಂಸಾರ-ಬಂಧನ ಪರಿಹಾರವಾಗುವುದಿಲ್ಲವಾದ್ದರಿಂದ ಅವರ ಜೀವನ ನಿರರ್ಥಕ ಎಂದು ಭಾವ.

★★

## ಶ್ರೀಹರಿಯ ಪೂಜೆ ಸಂಸಾರದ ಮಹಾಫಲ

**ಸಂಸಾರೇಽಸ್ಮಿನ್ ಮಹಾಘೋರೇ ಜನ್ಮರೋಗಭಯಾಕುಲೇ ।**
**ಅಯಮೇಕೋ ಮಹಾಭಾಗಃ ಪೂಜ್ಯತೇ ಯದಧೋಕ್ಷಜಃ ॥ ೪ ॥**

ಅ: ಹುಟ್ಟು, ರೋಗ ಭಯಗಳಿಂದ ಗೊಂದಲಗೊಂಡಿರುವ ಈ ಮಹಾ-ಭಯಂಕರವಾದ ಸಂಸಾರದಲ್ಲಿ ಶ್ರೀಹರಿಯನ್ನು ಪೂಜಿಸುವುದೊಂದೇ ಮಹಾಭಾಗ್ಯ.

ವಿ: ೧. ಸಂಸಾರವು ಭಯಂಕರ; ಆದರೆ ಅದರಲ್ಲಿರುವ ವಿಶೇಷಹಿರಿಮೆಯನ್ನೂ ಸಹ ಈ ಶ್ಲೋಕದಲ್ಲಿ ನಿರೂಪಿಸಿರುವರು :

**ಫಲವಾನ್ ಮೋಕ್ಷಹೇತುತ್ವಾತ್ ನಿತ್ಯಾನಂದಾದಪಾರ್ಥಕಃ ।**
**ಜೀವಾತ್ಮನಸ್ತು ಸಂಸಾರಃ ಸ್ವಪ್ನವಚ್ಚಂಚಲತ್ವತಃ ॥**
**- ತತ್ತ್ವವಿವೇಕ (ಭಾ.ತಾ ೧೧/೨೮/೧೩)**

**ಶುಕ್ಲಶೋಣಿತಸಂಭೂತೇ ಜ್ವರರೋಗಾದ್ಯುಪದ್ರುತೇ ।**
**ಮೇದೋಕ್ತಾಸ್ಥಿಮಾಂಸಾದಿಹೇಯದ್ರವ್ಯಸಮಾಕುಲೇ ॥**
**ಮಲಮೂತ್ರವಸಾಪಂಕೇ ಕಾರಾಗೃಹನಿಭೇಽಶುಭೇ ॥-ಹಾರೀತಸ್ಮೃತಿ(ಸ್ಮೃ.ಮು.)**

೨. ಸಂಸಾರದಲ್ಲಿ ಹುಟ್ಟು ರೋಗ, ರುಜಿನಗಳು ಮೊದಲಾದವುಗಳ ಭಯ ಎಂದೂ ತಪ್ಪಿದ್ದಲ್ಲ. ಅದಕ್ಕೆಂದೇ ಇದು ಹೇಯ. ಆದರೆ, ಶ್ರೀಹರಿಯನ್ನು ಪೂಜಿಸುವ ಭಾಗ್ಯ ದೊರೆಯುವುದು ಇದರಲ್ಲಿಯೇ. ಅದಕ್ಕೆಂದೇ ಇದು ಸಾಧನೆಗೆ ಅಪೂರ್ವ ಅವಕಾಶ. ಶ್ರೀಹರಿ ಜೀವರಿಗೆ ಸಂಸಾರ ನೀಡಿರುವುದು ಅದಕ್ಕಾಗಿ. ಸಂಸಾರ ಹೇಯವಾಗಿದ್ದಲ್ಲಿ ಶ್ರೀಹರಿ ಅದನ್ನೇಕೆ ಸಾಧಕರಿಗೆ ನೀಡುವನು ಎಂಬ ಪ್ರಶ್ನೆಗೆ ಉತ್ತರವು ಇಲ್ಲಿದೆ. 'ಸಂಸಾರವೆಂಬಂಥ

ಭಾಗ್ಯವಿರಲಿ, ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ' ಎಂಬ ಶ್ರೀಪುರಂದರದಾಸರ ಮಾತಿಗೆ ಪ್ರೇರಣೆಯಂತೆ ಈ ಶ್ಲೋಕ ಇರುವುದು ಗಮನಾರ್ಹ. ಸಂಸಾರದ ಹೇಯತ್ವ ಭಾಗವತದ ಕಪಿಲಗೀತೆಯಲ್ಲಿ ವಿವರವಾಗಿ ನಿರೂಪಿತವಾಗಿದೆ :

**ಅಜ್ಞೋಽರ್ಚಯೇದೇವಾರ್ಚಾಯಾಮನ್ಯಥಾ ದೋಷವಾನ್ ಭವೇತ್ ।**
**ಜ್ಞಸ್ತ್ವರ್ಚಯನ್ ಸ ಗುಣವಾನ್ ಯಥಾ ದೋಷವಾನ್ನತು ॥**
**- ಕಾಪಿಲೇಯ (ಭಾ.ತಾ. ೩/೩೦/೧೦)**

**ಜನ್ಮನೋಽರ್ಚಾದಿಹೀನಸ್ಯ ಪುಂಸೋ ವಿಷ್ಣೋಃ ಪರಾತ್ಮನಃ ।**
**ಶ್ವಪಚೋಽಪಿ ಮಹಾರಾಜ ವಿಷ್ಣುಭಕ್ತೋ ದ್ವಿಜಾಧಿಕಃ । - ವಿಷ್ಣುತೀರ್ಥೀಯ**
**ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತು ತದ್ದರ್ಶನಾತ್ ।**
**- ಬ್ರಹ್ಮಸೂತ್ರ (೪/೧/೧೬)**

★★

## ವಿಷ್ಣುಭಕ್ತನೇ ಕುಲಕ್ಕೆ ಭೂಷಣ

**ಸ ನಾಮ ಸುಕೃತೀ ಲೋಕೇ ಕುಲಂ [1]ತೇನ ಹ್ಯಲಂಕೃತಮ್ ।**
**ಆಧಾರಃ ಸರ್ವಭೂತಾನಾಂ ಯೇನ ವಿಷ್ಣುಃ ಪ್ರಸಾದಿತಃ ॥ ೫ ॥**

**ಅ:** ಸಕಲಜೀವಿಗಳಿಗೂ ಆಶ್ರಯನಾದ ಶ್ರೀಹರಿಯನ್ನು ಯಾವನು ಪ್ರಸನ್ನಗೊಳಿಸುವನೋ ಅವನೇ ಲೋಕದಲ್ಲಿ ಪುಣ್ಯಶಾಲಿ; ಅವನಿಂದಲೇ ಕುಲಕ್ಕೆ ಅಲಂಕಾರ.

**ವಿ:** ೧. ವಿಷ್ಣುವನ್ನು ಆರಾಧಿಸುವವನ ಹಿರಿಮೆಯನ್ನು ಇಲ್ಲಿ ವರ್ಣಿಸಿರುವರು. ಧನಕನಕಾದಿಗಳನ್ನು ಹೊಂದುವವನು ಪುಣ್ಯವಂತ ಎಂಬುದು ಲೋಕದ ಪರಿಕಲ್ಪನೆ. ಆದರೆ ಮುಖ್ಯವಾದ ಸುಕೃತ ಶ್ರೀಹರಿಯ ಆರಾಧನೆ. ಅದರಂತೆ ಕುಲಭೂಷಣನೆನಿಸುವನು ಸಹ ಶ್ರೀಹರಿಯನ್ನು ಒಲಿಸುವವನೇ ಹೊರತು ಕೇವಲ ಧನಕನಕಾದಿಗಳನ್ನು ಸಂಪಾದಿಸುವವನಲ್ಲ ಎಂದು ಭಾವ.

೨. ವಿಷ್ಣುವನ್ನು ಪ್ರಸನ್ನಗೊಳಿಸುವವನು ಎಂಬ ಪದದಿಂದ ಯಾಂತ್ರಿಕವಾಗಿ ಕರ್ಮಾಚರಣೆಯನ್ನು ಮಾಡದೇ ವಿಷ್ಣುಪ್ರೀತ್ಯರ್ಥವಾಗಿ ಆಚರಿಸುವವನೇ ನಿಜವಾದ ಸಾಧಕ ಎಂಬ ಭಾವ ಸೂಚಿತ.

★★

---

೧. ತೇನಾಭ್ಯಲಂಕೃತಮ್ । (ಪಾ.)

## ಯಜ್ಞಾದಿ ಸಕಲಸತ್ಕರ್ಮಗಳ ಮುಖ್ಯಫಲ ಶ್ರೀಹರಿಯ ಆರಾಧನೆ

**ಯಜ್ಞಾನಾಂ ತಪಸಾಂ ಚೈವ ಶುಭಾನಾಂ ಚೈವ ಕರ್ಮಣಾಮ್ ।**
**ತದ್ವಿಶಿಷ್ಟಫಲಂ ನೃಣಾಂ ಸದೈವಾರಾಧನಂ ಹರೇಃ ॥ ೬ ॥**

**ಅ:** ಮಾನವರಿಗೆ ಯಜ್ಞಗಳ, ತಪಸ್ಸುಗಳ ಹಾಗೂ ಶುಭಕರ್ಮಗಳ ವಿಶಿಷ್ಟವಾದ ಫಲ ಸದಾ ಶ್ರೀಹರಿಯ ಆರಾಧನೆಯೇ ಆಗಿದೆ.

ವಿ: ೧. ಯಾವುದೇ ಕರ್ಮಕ್ಕೂ ಅನುಗುಣವಾದ ಫಲನಿರೀಕ್ಷೆ ಸಹಜವಾದುದು. ಆದರೆ ಶ್ರೀಹರಿಯ ಆರಾಧನೆಯೇ ಸಕಲಶುಭಕರ್ಮಗಳ ಮಹತ್ಫಲವಾದ್ದರಿಂದ ಅದಕ್ಕೆ ಮತ್ತೊಂದು ಫಲದ ಅಗತ್ಯವಿಲ್ಲ ಎಂದರ್ಥ. ಎಂದರೆ, ಸಕಲಕರ್ಮಗಳು ನಿಜಕ್ಕೂ ಸಫಲವೆನ್ನಿಸುವುದು ಅವು ಶ್ರೀಹರಿಯ ಆರಾಧನೆಗೆ ಸಾಧನವಾದಾಗಲೇ ಎಂದರ್ಥ. ಶ್ರೀಹರಿಗಿಂತ ಮಿಗಿಲಾದ ಮತ್ತೊಂದು ಪದಾರ್ಥವಿಲ್ಲವಾದ್ದರಿಂದ ಬೇರೊಂದು ಶುಭಫಲದ ಯೋಚನೆಯೂ ಸಹ ಅಸಂಗತವೆಂಬ ವಿಶೇಷಾಂಶ ಇಲ್ಲಿದೆ.

೨. ಶ್ರೀಹರಿಯ ಆರಾಧನೆಯ ಸುಯೋಗ ಲಭಿಸಲೆಂದೇ ಯಜ್ಞಯಾಗಾದಿ ಸತ್ಕರ್ಮಗಳನ್ನು ಆಚರಿಸಬೇಕು ಎಂಬ ಪ್ರಮೇಯವೂ ಇಲ್ಲಿ ಸೂಚಿತ.

★★

## ಹರಿಭಕ್ತರು ಸಹ ಪೂಜ್ಯರು

**ಕಲೌ ಕಲಿಮಲಧ್ವಂಸಿಸರ್ವಪಾಪಹರಂ ಹರಿಮ್ ।**
**ಯೇಽರ್ಚಯಂತಿ ಸದಾ ನಿತ್ಯಂ[೧] ತೇ ಚ ವಂದ್ಯಾ ಯಥಾ ಹರಿಃ[೨] ॥ ೭ ॥**

**ಅ:** ಕಲಿಯುಗದಲ್ಲಿ ಕಲಿಯ ದೋಷವನ್ನು ಪರಿಹರಿಸುವ, ಸಕಲಪಾಪಗಳನ್ನು ನಾಶಮಾಡುವ ಶ್ರೀಹರಿಯನ್ನು ಸದಾ ಯಾರು ಪೂಜಿಸುವರೋ, ಅವರೂ ಸಹ ಶ್ರೀಹರಿಯಂತೆ ಯಥಾಯೋಗ್ಯವಾಗಿ ಪೂಜ್ಯರೇ ಆಗಿರುವರು.

ವಿ: ೧. ಶ್ರೀಹರಿಯು ಪೂಜ್ಯನಾಗಿರುವಂತೆ ಶ್ರೀಹರಿಭಕ್ತರೂ ಸಹ ಪೂಜ್ಯರು ಎಂದರ್ಥ. ಹರಿಯಂತೆ ಹರಿಭಕ್ತರನ್ನೂ ಸಹ ಪೂಜಿಸುವುದು ಶ್ರೀಹರಿಗೆ ಪ್ರಿಯ ಎಂಬ ಅರ್ಥ ಇದರಿಂದ ಸೂಚಿತ.

---

೧. ತೇಽಪಿ .... ನೃಭಿಃ (ಪಾ.)
೨. ಯಥಾ ಹರಿರಿತಿ ವಂದ್ಯತ್ವಮಾತ್ರೇ ದೃಷ್ಟಾಂತೋ ಜ್ಞೇಯಃ। ಅಥವಾ ಕಲಿಯುಗೇ ಭಗವದರ್ಚಕಾಃ ಹರೇರ್ನಿತ್ಯಂ ಪ್ರಿಯತ್ವೇನಾರ್ಚ್ಯಾ ಇತಿ ಯಥಾ ಹರಿರಿತ್ಯುಕ್ತಮಿತಿ ಜ್ಞೇಯಮ್॥ (ಸ್ಟ.ಕೃ); ಸರ್ವದೇವಾ ಯಥಾ ವಂದ್ಯಾಃ ತಥಾ ಭವಂತೀತ್ಯರ್ಥಃ॥ (ಕೃ.)

೨. ಕಲಿಮಲವನ್ನು ಪರಿಹರಿಸುವವನು, ಸಕಲಪಾಪಗಳನ್ನು ಪರಿಹರಿಸುವವನು ಆದ್ದರಿಂದಲೇ ಭಗವಂತನಿಗೆ ಶ್ರೀಹರಿ ಎಂಬ ನಾಮ ಉಕ್ತವಾಗಿದೆ ಎಂಬುದನ್ನು **ಸರ್ವಪಾಪಹರಂ** ಎಂಬ ಪದದಿಂದ ಸೂಚಿಸಿರುವರು.

೩. ಇಲ್ಲಿ ಹರಿಪೂಜಕರು ಹರಿಯಂತೆ ವಂದ್ಯರು ಎಂದರೆ, ಹರಿಗೆ ಸಮರಾಗಿ ಪೂಜ್ಯರು ಎಂದರ್ಥವಲ್ಲ. ಅವರವರ ಯೋಗ್ಯತಾತಾರತಮ್ಯಕ್ಕೆ ಅನುಗುಣವಾಗಿ ಪೂಜ್ಯರು ಎಂದರ್ಥ ಎಂಬುದನ್ನು 'ಯಥಾ' ಎಂಬ ಪದದಿಂದ ಸೂಚಿಸಿರುವರು. ರಮಾಬ್ರಹ್ಮಾದಿ ಹರಿಭಕ್ತರು ಹಾಗೆ ಪೂಜ್ಯರು ಎಂದು ಬೇರೆಡೆ ತಿಳಿಸಿರುವರು: **'ರಮಾಬ್ರಹ್ಮಾದಯಸ್ತಸ್ಯ ಪರಿವಾರತಯೈವ ತು'** (ಸದಾಚಾರ ಸ್ಮೃತಿ); **'ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾ ಪ್ರಧಾನತಃ'** (ಅನುವ್ಯಾಖ್ಯಾನ).

೪. ಹರಿಭಕ್ತರನ್ನು ಗೌರವಿಸದಿದ್ದಲ್ಲಿ ಅದು ನವವಿಧದ್ವೇಷಗಳಲ್ಲಿ ಒಂದಾಗುವುದು ಎಂಬ ವಿಶೇಷಾಂಶ ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ: **'ತದ್ಭಕ್ತದ್ವೇಷ ಏವ ಚ'** (೧/೧೧೧).

★★

## ಹರಿಪೂಜೆಗಿಂತ ಮಿಗಿಲಾದ ಶ್ರೇಯಸ್ಕರ ಕಾರ್ಯ ಮತ್ತೊಂದಿಲ್ಲ

**ನಾಸ್ತಿ ಶ್ರೇಯಸ್ತಮಂ ನೃಣಾಂ ವಿಷ್ಣೋರಾರಾಧನಾನ್ಮುನೇ ।**
**ಯುಗೇऽಸ್ಮಿಂಸ್ತಾಮಸೇ ಲೋಕೇ ಸತತಂ ಪೂಜ್ಯತೇ ಹರಿಃ ॥ ೮ ॥**

**ಅ:** ವಿಷ್ಣುವಿನ ಆರಾಧನೆಗಿಂತ ಮಿಗಿಲಾದ ಅತ್ಯಂತ ಶ್ರೇಯಸ್ಕರವಾದ ಕಾರ್ಯ ಬೇರೊಂದಿಲ್ಲ ; ಈ ತಾಮಸಯುಗದಲ್ಲಿ ಲೋಕದಲ್ಲಿ ಶ್ರೀಹರಿಯು ಸತತ ಪೂಜ್ಯನಾಗಿರುವನು.

**ವಿ:** ೧. ಇಲ್ಲಿ ಶ್ರೇಯಸ್ಸು ಎಂದರೆ ಕಠೋಪನಿಷತ್ತಿನಲ್ಲಿ ಬಂದಿರುವಂತೆ ಶ್ರೇಯಸ್ಸಾಧನವೆಂದರ್ಥ. ಅತ್ಯಂತ ಶ್ರೇಷ್ಠವಾದ ಶ್ರೇಯಸ್ಸಾಧನವೆಂದರೆ ಶ್ರೀಹರಿಯ ಆರಾಧನೆಯೇ ಆಗಿದೆ.

೨. ತಾಮಸಯುಗ ಎಂದರೆ ಕಲಿಯುಗ ಎಂದರ್ಥ. ಕಲಿಯುಗವು ಅಜ್ಞಾನ ಮಿಥ್ಯಾಜ್ಞಾನಗಳಿಂದ ತುಂಬಿದ ಯುಗ. ಇಂತಹ ತಾಮಸಯುಗದಲ್ಲೂ ಶ್ರೀಹರಿಯು ಯೋಗ್ಯರಿಂದ ಸತತ ಪೂಜಿತ ಎಂಬುದು ಅವನ ಹಿರಿಮೆಗೆ ಗಮಕ ಎಂದರ್ಥ. ಅವನ ಆರಾಧಕರಿಗೆ ಕಲಿಯುಗದ ಬಾಧೆ ತಟ್ಟದು ಎಂಬ ಸೂಚನೆಯೂ ಇಲ್ಲಿದೆ.

★★

## ಹರಿಪೂಜೆಯಿಂದ ಸಕಲದೇವತೆಗಳ ಪೂಜೆಯು ಆಗುವುದು

**ಅರ್ಚಿತೇ ದೇವದೇವೇಶೇ ಶಂಖಚಕ್ರಗದಾಧರೇ ।**
**ಅರ್ಚಿತಾಃ ಸರ್ವದೇವಾಃ ಸ್ಯುರ್ಯತಃ ಸರ್ವಗತೋ ಹರಿಃ ॥ ೯ ॥**

**ಅ:** ಶಂಖಚಕ್ರಗದಾಧರನಾದ ದೇವದೇವತೆಗಳಿಗೂ ಒಡೆಯನಾದ ಶ್ರೀಹರಿಯನ್ನು ಆರಾಧಿಸಿದರೆ ಸಕಲದೇವತೆಗಳೂ ಆರಾಧಿತರಾದಂತೆಯೇ ; ಶ್ರೀಹರಿಯು ಸರ್ವಾಂತರ್ಯಾಮಿಯಲ್ಲವೇ !

**ವಿ:** ೧. ಶ್ರೀಹರಿಪೂಜೆ ಸಕಲದೇವತೆಗಳ ಪೂಜಾಫಲವನ್ನೂ ಸಹ ನೀಡುವುದು ಎಂಬ ತತ್ತ್ವ ಇಲ್ಲಿ ಸೂಚಿತವಾಗಿದೆ. ಇತರ ಯಾವ ದೇವತೆಗಳನ್ನು ಪೂಜಿಸಿದರೂ ಇತರ ಎಲ್ಲ ದೇವತೆಗಳನ್ನು ಪೂಜಿಸಿದ ಫಲ ಲಭಿಸದು. ಆದರೆ ಶ್ರೀಹರಿಯನ್ನು ಪೂಜಿಸಿದರೆ ಮಾತ್ರ ಅವನ ಪೂಜೆಯೊಂದಿಗೆ ಇತರ ದೇವತೆಗಳ ಪೂಜೆಯೂ ಆಗುವುದು ವಿಶೇಷ. ಇದಕ್ಕೆ ಎಲ್ಲ ದೇವತೆಗಳ ಅಂತರ್ಯಾಮಿಯಾಗಿ ಶ್ರೀಹರಿಯು ನೆಲೆಸಿರುವುದೇ ಕಾರಣ. ಇತರ ದೇವತೆಗಳಿಗೆ ಇಂತಹ ಮಹತ್ತ್ವವಿಲ್ಲವಾದ್ದರಿಂದ ಅವರ ಪೂಜೆ ಇಷ್ಟು ವಿಶಿಷ್ಟವಾದ ಫಲವನ್ನು ನೀಡಲಾರದು ಎಂದರ್ಥ:

**ಯಥಾ ತರೋರ್ಮೂಲನಿಷೇಚನೇನ ತೃಪ್ಯಂತಿ ತತ್ಸ್ಕಂಧಭುಜೋಪಶಾಖಾಃ।**
**ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ ತಥೈವ ಸರ್ವಾರ್ಹಣಮಚ್ಯುತೇಜ್ಯಾ॥**
**-ಭಾಗವತ (೪/೩೧/೧೪)**

**ಸರ್ವದೇವೇಷ್ವಪಿ ಹರಿಃ ಸರ್ವದೇವನಿಯಾಮಕಃ।**
**ನಾಮವಾನ್ ಸರ್ವದೇವಾನಾಂ ಸರ್ವಪೂಜಾಂ ತಥಾಽತ್ರ್ಯಸೌ ॥**
**- ಭಾಗವತತಾತ್ಪರ್ಯನಿರ್ಣಯ (೧೦/೩೮/೬)**

೨. ಶ್ರೀಹರಿಯ ಪೂಜೆ ಸಕಲದೇವತೆಗಳ ಪೂಜೆಯೂ ಆಗಲು, ಅವನಿಗೆ ಸಕಲದೇವತೆಗಳ ನಾಮಗಳು ಹಾಗೂ ಆ ನಾಮಗಳಿಂದ ಸೂಚಿತವಾಗುವ ಗುಣಗಳು ಇರುವುದು ಇನ್ನೊಂದು ಕಾರಣ ಎಂದು ತಿಳಿಯಬಹುದು: **ಯೋ ದೇವಾನಾಂ ನಾಮಧಾ ಏಕ ಏವ ।; ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ.**

೨. ಶ್ರೀಹರಿಯನ್ನು **ದೇವದೇವೇಶ, ಶಂಖಚಕ್ರಗದಾಧರ** ಎನ್ನುವ ಮೂಲಕ ಅವನು ಸರ್ವೋತ್ತಮ ಎಂಬ ಹಿರಿಮೆಯನ್ನು ತಿಳಿಸಿರುವರು. ಶಂಖ ಚಕ್ರ ಮತ್ತು ಗದೆಗಳಿಗೆ ಕ್ರಮವಾಗಿ ಶ್ರೀದೇವಿ, ದುರ್ಗಾದೇವಿ ಮತ್ತು ವಾಯುದೇವರು ಅಭಿಮಾನಿದೇವತೆಗಳು. ಶಂಖಚಕ್ರಗಳನ್ನು ಹಿಡಿಯುವ ಮೂಲಕ ಶ್ರೀಹರಿ ತಾನು ರಮಾಬ್ರಹ್ಮಾದಿಸಕಲರನ್ನೂ ಧರಿಸಿರುವ ಸರ್ವಸ್ವಾಮಿ ಎಂಬ ತತ್ತ್ವವನ್ನು ಸೂಚಿಸಿರುವನು ಎಂದು ತಿಳಿಯಬೇಕು.

★★

## ಹರಿಪೂಜೆಯಿಂದ ನರಕದ ಪರಿಹಾರ

**ಸ್ವರ್ಚಿತೇ ಸರ್ವಲೋಕೇಶೇ ಸುರಾಸುರನಮಸ್ಕೃತೇ ।**
**ಕೇಶವೇ ಕಂಸಕೇಶಿಘ್ನೇ ನ ಯಾತಿ ನರಕಂ ನರಃ ॥ ೧೦ ॥**

**ಅ:** ಸರ್ವಲೋಕಗಳಿಗೆ ಒಡೆಯನಾದ ಸುರಾಸುರರಿಂದ ನಮಸ್ಕೃತನಾದ, ಕಂಸಕೇಶಿ ಮೊದಲಾದವರನ್ನು ಸಂಹರಿಸಿದ, ಬ್ರಹ್ಮರುದ್ರರಿಗೆ ನಿಯಾಮಕನಾದ ಶ್ರೀಹರಿಯನ್ನು ಚೆನ್ನಾಗಿ ಆರಾಧಿಸುವ ನರನು ನರಕವನ್ನು ಹೊಂದಲಾರ.

ವಿ: ೧. ಸರ್ವಲೋಕಗಳಿಗೂ ಒಡೆಯ, ಸುರಾಸುರರಿಂದ ವಂದಿತ ಎಂಬ ಇಲ್ಲಿಯ ಪದಗಳು ಪುನಃ ಶ್ರೀಹರಿಯ ಸರ್ವೋತ್ತಮತ್ವವನ್ನು ನಿರೂಪಿಸುವವು.

೨. ಕಂಸ ಕಾಲನೇಮಿಯ ಅವತಾರನಾಗಿದ್ದ ಮಹಾರಾಕ್ಷಸ. ಕೇಶಿ ಎಂಬುವನು ಅಶ್ವದ ರೂಪದಲ್ಲಿ ಶ್ರೀಕೃಷ್ಣನನ್ನು ಕೆಣಕಿ ಹತನಾದ ಮಹಾಪಾಪಿ. ಬ್ರಹ್ಮಾದಿಗಳ ವರದಿಂದ ಕೂಡಿದ್ದ ಅವರನ್ನು ಸಂಹರಿಸುವ ಮೂಲಕ ಶ್ರೀಕೃಷ್ಣ ತಾನು ಬ್ರಹ್ಮಾದಿಗಳಿಂದ ಪೂಜಿತ ಎಂಬ ಅಂಶವನ್ನು ಸೂಚಿಸಿರುವನು.

೩. **ಸುರಾಸುರನಮಸ್ಕೃತೇ** ಎಂಬ ಪದ ಮಹಾಭಾರತದ ಮೊದಲ ಶ್ಲೋಕದಲ್ಲಿನ **ಅಮರಾಸುರಸಿದ್ಧವಂದ್ಯಂ** ಎಂಬ ಪದಕ್ಕೆ ವಿವರಣೆಯಂತಿರುವುದು ಗಮನಾರ್ಹ. ಸುರರು ಭಕ್ತಿಯಿಂದ ಶ್ರೀಹರಿಯನ್ನು ನಮಸ್ಕರಿಸಿದರೆ ಅಸುರರು ಭಯದಿಂದ ಶ್ರೀಹರಿಯನ್ನು ನಮಸ್ಕರಿಸುವುದು ವಿಶೇಷ. ಯೋಗ್ಯರು ರಾಜಮಹಾರಾಜರುಗಳನ್ನು ಆದರದಿಂದ ಗೌರವಿಸಿದರೆ ಕಳ್ಳಕಾಕರು ಭಯದಿಂದ ಗೌರವಿಸುವಂತೆ ಎಂದು ತಿಳಿಯಬೇಕು. ಮಹಾಭಾರತದ ಅಶ್ವಮೇಧಪರ್ವದಲ್ಲಿ ಕಲಿಯಂತಹ ಮಹಾದೈತ್ಯನೂ ಸಹ ಶ್ರೀಕೃಷ್ಣನಿಗೆ ವಂದಿಸಿದ ವಿವರ ಬಂದಿದೆ (೩೦/೨೫). ಅದರಂತೆ ಭೀಷ್ಮಪರ್ವದಲ್ಲಿ ಭೀಷ್ಮರಿಂದ ಶ್ರೀಕೃಷ್ಣನ ಮಹಿಮೆಯನ್ನು ಕೇಳಿದ ದುರ್ಯೋಧನ ಅವನಿಗೆ ಡಂಭಬುದ್ಧಿಯಿಂದ ವಂದಿಸಿದ ವಿವರ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿದೆ (ಅಧ್ಯಾಯ ೨೫).

೪. ಹರಿಯನ್ನು ಆರಾಧಿಸುವ ನರರು ನರಕವನ್ನು ಹೊಂದಲಾರರು ಎಂಬಲ್ಲಿನ ಸ್ವಾರಸ್ಯ ಗಮನಾರ್ಹ.

೫. ನರಕಾಸುರನಂತಹ ಬ್ರಹ್ಮವರದಿಂದ ಅವಧ್ಯನಾಗಿದ್ದ ಮಹಾರಾಕ್ಷಸನನ್ನು ಸಂಹರಿಸಿದ ಹರಿಯನ್ನು ಆರಾಧಿಸುವವನಿಗೆ ನರಕದ ಭಯವೆಲ್ಲಿಯದು ಎಂಬ ಯುಕ್ತಿ ಇದರಿಂದ ಸೂಚಿತ ಎಂದೂ ತಿಳಿಯಬಹುದು.

★★

## ಬಿಲ್ವಪತ್ರದಿಂದಲೂ ವಿಷ್ಣುಪೂಜೆ ವಿಹಿತ

**ಸಕೃದಭ್ಯರ್ಚ್ಯ ಗೋವಿಂದಂ ಬಿಲ್ವಪತ್ರೇಣ ಮಾನವಃ ।**
**ಮುಕ್ತಿಭಾಗೀ ನಿರಾತಂಕೀ ವಿಷ್ಣುಲೋಕೇ ಮಹೀಯತೇ[೧] ॥ ೧೧ ॥**

**ಅ:** ಮಾನವನು ಗೋವಿಂದನಾದ ಶ್ರೀಹರಿಯನ್ನು ಬಿಲ್ವಪತ್ರದಿಂದ ಒಮ್ಮೆ ಚೆನ್ನಾಗಿ ಪೂಜಿಸಿದರೂ ಯಾವುದೇ ವಿಘ್ನವಿಲ್ಲದೆ ಮುಕ್ತಿ ಹೊಂದುವನು; ವಿಷ್ಣುಲೋಕದಲ್ಲಿ ಆದರಿಸಲ್ಪಡುವನು.

**ವಿ:** ೧. ಶ್ರೀಹರಿಯ ಪೂಜೆಗೆ ಬಿಲ್ವಪತ್ರವು ವಿಹಿತ ಎನ್ನುವ ವಿಶೇಷಾಂಶ ಇದರಲ್ಲಿದೆ. ತುಳಸಿಯು ಶ್ರೀಹರಿಗೆ ಪರಮಪ್ರಿಯವಾದ ಪೂಜಾದ್ರವ್ಯ. ಅದರಂತೆ ನಿಷಿದ್ಧವಲ್ಲದ ಇತರ ಪತ್ರಗಳ ಪೂಜೆಯೂ ಶ್ರೀಹರಿಗೆ ವಿಹಿತ. ಇತರ ಪತ್ರಗಳಿಂದ ಆರಾಧಿಸುವಾಗ ತುಳಸಿಯ ಸಮೇತವಾಗಿ ಆರಾಧಿಸಬೇಕು ಎನ್ನುವುದು ವಿಶೇಷ. ಹರನಿಗಷ್ಟೇ ಬಿಲ್ವಪತ್ರದ ಪೂಜೆಯೆಂಬ ತಪ್ಪು ಕಲ್ಪನೆಯನ್ನು ಇಲ್ಲಿ ನಿರಾಕರಿಸಲಾಗಿದೆ :

೨. ಬಿಲ್ವಪತ್ರ ಎಂಬ ಪದದಿಂದ ತುಳಸಿಯೂ ಗ್ರಾಹ್ಯ :

**ಬಿಲ್ವಪತ್ರಾಚ್ಛಮೀಪತ್ರಾಜ್ಜಾಜೀಪುಷ್ಪಾತ್ ಸರೋರುಹಾತ್ ।**
**ವಲ್ಲಭಂ ತುಲಸೀಪತ್ರಂ ಕೌಸ್ತುಭಾದಧಿಕಂ ಮಮ ॥ ಇತಿ ಸ್ಕಾಂದೋಕ್ತೇಃ ।**

೩. ತುಳಸಿ ಇಲ್ಲದ ಪೂಜೆ ನಿಷಿದ್ಧ :

**ತುಲಸೀಂ ತು ವಿನಾ ಸ್ವರ್ಣಕೋಟಿಭಿಃ ಪೂಜನಂ ನರಃ ।**
**ಕರೋತಿ ಯದಿ ಮೂಢಾತ್ಮಾ ನರಕಾನೇವ ವಿಂದತಿ ॥**
**ತಥಾ ಮಮಾಪರಾಧೀ ಸ್ಯಾತ್ ತಥೈವ ಪೂಜಯೇದ್ಧರಿಮ್ ॥ (ಉ.)**

**೪. ಮಾನವಃ** ಎನ್ನುವ ಮೂಲಕ ವಾಯುದೇವರ ಅನುಯಾಯಿಯಾದವನು ಎಂಬರ್ಥ ಸೂಚಿತ. 'ಮನು' ಎಂದರೆ ವಾಯು ಎಂಬ ಅರ್ಥ ಶ್ರುತಿಗಳಲ್ಲಿ ಬಂದಿದೆ : **ಮನವೇ ವಾಯವೇ ಅಬಾಧಿತಾಯ.**

೫. **ಅಭ್ಯರ್ಚ್ಯ** ಎಂಬ ಪದದಿಂದ ಶಾಸ್ತ್ರೋಕ್ತವಾಗಿ ಪೂಜಿಸುವ ಮೂಲಕ ಎಂಬ ಅರ್ಥವು ಸೂಚಿತ. ಮುಖ್ಯವಾಗಿ ಇಲ್ಲಿ ವಿಹಿತವಾಗಿರುವುದು ಶ್ರೀಹರಿಯ ಪೂಜೆ ಎಂಬುದನ್ನು ಗಮನಿಸಬೇಕು.

---

೧. ಅಸ್ಯ ಶ್ಲೋಕಸ್ಯ ಆಕರಃ ವಿಷ್ಣುರಹಸ್ಯಮಿತಿ ಸ್ಮೃತಿಚಂದ್ರಿಕಾಯಾಮುದಾಹೃತಃ ॥
ಸಕೃದಭ್ಯರ್ಚಿತೋ ಯೇನ ದೇವದೇವೋ ಜನಾರ್ದನಃ ।
ಯತ್ಕೃತಂ ತತ್ಕೃತಂ ತೇನ ಸಂಪ್ರಾಪ್ತಂ ಪರಮಂ ಪದಮ್ ॥ – ಇತಿ ಅಧಿಕಂ ಕ್ವಚಿತ್ ।
ಚಿರಂ ವಸೇತ್ ( ಪಾ.) ಅತ್ರಾದೌ ಶಂಕರಃ ಇತಿ ಕ್ವಚಿತ್ ।

## ನೆಪದಿಂದ ಮಾಡಿದ ಹರಿಪೂಜೆಯು ಶ್ಲಾಘ್ಯ

**ಸಕೃದಭ್ಯರ್ಚಿತೋ ಯೇನ ಹೇಲಯಾಽಪಿ ನಮಸ್ಕೃತಃ ।**
**ಸ ಯಾತಿ ಪರಮಂ ಸ್ಥಾನಂ ಯತ್ ಸುರೈರಪಿ ದುರ್ಲಭಮ್ ॥ ೧೨ ॥**

**ಅ**: ತನ್ನನ್ನು ಒಮ್ಮೆ ಪೂಜಿಸಿದರೂ, ಅವಜ್ಞೆಯಿಂದಾದರೂ ನಮಸ್ಕರಿಸಿದರೂ ಶ್ರೀಹರಿಯು ಸುರರಿಗೂ ದುರ್ಲಭವಾದ ಶ್ರೇಷ್ಠಸ್ಥಾನವನ್ನು ನೀಡಿ ಅನುಗ್ರಹಿಸುವನು.

ವಿ: ೧. ಶ್ರೀಹರಿಪೂಜೆಯಂತೆ ಶ್ರೀಹರಿಯ ನಮಸ್ಕಾರವೂ ಸಹ ಸದ್ಗತಿಯ ಪರಮ-ಸಾಧನ ಎಂದು ಭಾವ.

೨. ಇಲ್ಲಿ 'ಹೇಲಯಾಽಪಿ ನಮಸ್ಕೃತಃ' ಎಂಬುದಕ್ಕೆ ಅವಜ್ಞೆಯಿಂದ ನಮಸ್ಕರಿಸಿದರೆ ಎಂದು ಮೇಲ್ನೋಟದ ಅರ್ಥ. ಇದು ಶ್ರೀಮದ್ಭಾಗವತದಲ್ಲಿನ **'ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ । ವೈಕುಂಠನಾಮಗ್ರಹಣಂ ಅಶೇಷಾಘಹರಂ ವಿದುಃ ॥'** ಎಂಬ ಶ್ಲೋಕದಂತಿದೆ. ಅಲ್ಲಿ ಬರೆದಿರುವ ತಾತ್ಪರ್ಯವನ್ನೇ ಈ ಶ್ಲೋಕಕ್ಕೂ ಗ್ರಹಿಸಬೇಕು. ಎಂದರೆ ಸಾಂಕೇತ್ಯ ಹೇಲನ, ಮೊದಲಾದ ನೆಪದಿಂದ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸಿದಾಗ ಮಾತ್ರವೇ ಅದು ಫಲಪ್ರದ; ಕೇವಲ ಹೇಲನಾದಿಗಳಿಂದ ಆರಾಧಿಸುವುದು ತಾರಕವಲ್ಲ ಎಂದು ಭಾವ : **ನಾರಾಯಣೋಽಯಮಿತ್ಯನ್ಯಹೇಲನವಿಷಯತ್ವೇನೋಕ್ತಮಘಹರಮ್ ।**

**'ಸರ್ವಘಾಽಘಹರಂ ವಿಷ್ಣೋರ್ನಾಮ ತದ್ಭಕ್ತಿಪೂರ್ವಕಮ್ ।**
**ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ ।**
**ನಾಮಸ್ವಾಮಿತಯಾ ತಸ್ಯ ಸ್ಮರಣಂ ಜಾಯತೇ ಯತಃ ।**
**ಭಕ್ತಸ್ಯಾತೋ ನಾಮಕೀರ್ತಿಃ ಸಂಕೇತಾದಾವಪೀರಿತಾ ।**
**ಅಜಾಮಿಲೋಽಪಿ ಸ್ಮರಣಾದ್ಭಕ್ತ್ಯಾ ಮೃತ್ಯೋರಮುಚ್ಯತ ॥'**
**- ನಾರದೀಯ (ಭಾ.ತಾ. ೬/೨/೧೪)**

★★

## ಶ್ರೀಹರಿಯ ಪೂಜೆ ಜನ್ಮದ ಸಾಫಲ್ಯ

### ಶ್ರೀನಾರದಃ[೧]

**ಸಮಸ್ತಲೋಕನಾಥಸ್ಯ ದೇವದೇವಸ್ಯ ಶಾರ್ಙ್ಗಿಣಃ ।**
**ಸಾಕ್ಷಾದ್ಭಗವತೋ ವಿಷ್ಣೋಃ ಪೂಜನಂ ಜನ್ಮನಃ ಫಲಮ್ ॥ ೧೩ ॥**

**ಅ**: ಸಮಸ್ತಲೋಕಗಳಿಗೆ ಒಡೆಯನಾದ, ದೇವತೆಗಳಿಗೂ ದೇವನಾದ, ಶಾರ್ಙ್ಗಪಾಣಿ-ಯಾದ, ಭಗವಂತನಾದ ವಿಷ್ಣುವನ್ನು ಸಾಕ್ಷಾತ್ತಾಗಿ ಪೂಜಿಸುವುದು ಜನ್ಮದ ಮುಖ್ಯಫಲ.

೧. ನಾರದಃ (ಪಾ) ; ಪುಲಹಃ ಇತಿ ಕ್ವಚಿತ್ ।

ವಿ: ೧. ಹಿಂದೆ ಹೇಳಿದಂತೆ ಶ್ರೀಹರಿಯಪೂಜೆಗೆ ಮತ್ತೊಂದು ಫಲವನ್ನು ಅಪೇಕ್ಷಿಸ-ಬೇಕಿಲ್ಲ. ಸಕಲ ಸತ್ಕರ್ಮಗಳ ಫಲವೂ ಅದೇ ಆಗಿರುವುದರಿಂದ ಹಾಗೆ ಶ್ರೀಹರಿಯನ್ನು ಪೂಜಿಸುವುದು ಜನ್ಮದ ಸಫಲತೆಗೆ ಕಾರಣ ಎಂದರ್ಥ. ಅದಕ್ಕೆ ಕಾರಣವಾಗಿ 'ಸಮಸ್ತ-ಲೋಕನಾಥ', 'ದೇವದೇವ', 'ಶಾರ್ಙ್ಗಪಾಣಿ', 'ಭಗವಂತ' ಎಂಬ ವಿಶೇಷಣಗಳನ್ನು ವಿಷ್ಣುವಿಗೆ ತಿಳಿಸಿರುವರು.

೨. ಸಾಕ್ಷಾತ್ ಪೂಜಿಸುವುದು ಮಹಾಫಲ ಎನ್ನುವ ಮೂಲಕ ಬೇರೊಬ್ಬರಿಂದ ಪೂಜೆ ಮಾಡಿಸುವುದಕ್ಕಿಂತ ತಾನೇ ಸ್ವತಃ ದೇವಪೂಜೆ ಮಾಡುವುದು ವಿಹಿತ ಎಂಬ ವಿಶೇಷಾಂಶ ಸೂಚಿತ ಎಂದೂ ತಿಳಿಯಬೇಕು.

೩. ಇತರರಿಂದ ಮನೆಯಲ್ಲಿ ದೇವಪೂಜೆ ಮಾಡಿಸುವುದು ಆಶೌಚಾದಿ ವಿಶೇಷ-ಪ್ರಸಂಗಗಳಲ್ಲಿ ಮಾತ್ರ ವಿಹಿತ.

★★

## ಸಾಮಾನ್ಯಪೂಜೆಗೂ ಅಸಾಮಾನ್ಯಫಲ ನೀಡುವ ಶ್ರೀಹರಿ

### ಪುಲಸ್ತ್ಯಃ

**ಭಕ್ತ್ಯಾ ದೂರ್ವಾಂಕುರೈಃ ಪುಂಭಿಃ ಪೂಜಿತಃ ಪುರುಷೋತ್ತಮಃ ।**
**ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಮ್[೧] ॥ ೧೪ ॥**

ಅ: ಭಕ್ತರು ಗರಿಕೆಯ ಎಸಳುಗಳಿಂದ ಪೂಜಿಸಿದರೂ ಪುರುಷೋತ್ತಮನಾದ ಶ್ರೀಹರಿಯು ಸಕಲಯಜ್ಞಗಳಿಂದಲೂ ಪಡೆಯಲಾಗದ ಫಲವನ್ನು ನೀಡುವನು.

ವಿ: ೧. ಶ್ರೀಹರಿಯ ಪೂಜೆಗೆ ಇತರ ವೈಭವಗಳು ಇಲ್ಲದಿದ್ದರೂ ಚಿಂತಿಸಬೇಕಿಲ್ಲ. ಹೂವು ಹಣ್ಣುಗಳು ದೊರೆಯದಿದ್ದರೂ ಯೋಚಿಸಬೇಕಿಲ್ಲ. ಗರಿಕೆಯ ಕುಡಿಗಳು ಸಹ ಅವನಿಗೆ ಪ್ರಿಯ ಎಂಬ ವಿಶೇಷಾಂಶ ಇಲ್ಲಿ ಸೂಚಿತ.

೨. ಅದರಂತೆ ಇಂತಹ ಸಾಮಾನ್ಯಪೂಜೆಗೂ ಅವನು ನೀಡುವ ಫಲಮಾತ್ರ ಸರ್ವಯಜ್ಞಗಳಿಂದಲೂ ದೊರೆಯಲಾಗದ ಶ್ರೇಷ್ಠಫಲ. ತುಂಬಾ ಶ್ರಮದಾಯಕವಾದ ಯಜ್ಞಗಳನ್ನು ಮಾಡಿ ಬಳಲುವುದಕ್ಕಿಂತ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸುವುದೇ ಹೆಚ್ಚು ಶ್ರೇಷ್ಠ ಎಂದರ್ಥ.

೩. ಪುರುಷೋತ್ತಮ ಎನ್ನುವ ಪದದ ಮೂಲಕ ಅವನು ಸರ್ವೋತ್ತಮನಾಗಿರು-ವುದರಿಂದ, ಪರಿಪೂರ್ಣನಾಗಿರುವುದರಿಂದ ಅವನಿಗೆ ಬೇರಾವವಸ್ತುಗಳ ಅಗತ್ಯವೂ

---

೧. ಅಸ್ಯ ಶ್ಲೋಕಸ್ಯ ಆಕರಃ ವಿಷ್ಣುಧರ್ಮೋತ್ತರಃ ಇತಿ ಸ್ಮೃತಿಚಂದ್ರಿಕಾಯಾಂ ಉದಾಹೃತಃ ॥

ಇರದು ಎಂಬ ತತ್ತ್ವ ಸೂಚಿತ. ಇಲ್ಲಿ ದ್ರವ್ಯಗಳ ಸಾಧನಕ್ಕಿಂತ ಹೆಚ್ಚು ಮುಖ್ಯವಾದದ್ದು ಭಕ್ತಿ ಎಂಬ ಮುಖ್ಯವಿಷಯ ನಿರೂಪಿತವಾಗಿದೆ. ಇದು ಶ್ರೀಮದ್ಭಗವದ್ಗೀತೆಯಲ್ಲಿನ –

**'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥'**

– ಎಂಬ ಶ್ಲೋಕದ ವಿವರಣೆಯಂತಿರುವುದು ಗಮನಾರ್ಹ.

೪. ಶ್ರೀಜಯತೀರ್ಥರು ತತ್ತ್ವಪ್ರಕಾಶಿಕೆಯ ಕೊನೆಯಲ್ಲಿ **'ನಹೀಂದಿರಾರಾಧ್ಯಪದೋ ಮುಕುಂದಃ ದೂರ್ವಾಂಕುರೈರ್ಮಂದಧನೈರಪೂಜ್ಯಃ'** ಎಂದು ನುಡಿದಿರುವುದು ಈ ಶ್ಲೋಕದ ಹಿನ್ನೆಲೆಯಲ್ಲಿ ಎಂದು ತಿಳಿಯಬೇಕು.

೫. ಇತರ ದೇವತೆಗಳಿಗೆ ಕೆಲವು ವಿಶಿಷ್ಟದ್ರವ್ಯಗಳಿಂದಲೇ ಪೂಜೆ ವಿಹಿತ. ಗಣೇಶನಿಗೆ ಮೋದಕ ಇತ್ಯಾದಿಯಾಗಿ. ಆದರೆ ಶ್ರೀಹರಿಗೆ ಮಾತ್ರ ಇಂತಹ ಯಾವುದೇ ನೇಮವಿಲ್ಲದೇ ಮುಖ್ಯವಾಗಿ ಭಕ್ತಿ ಮಾತ್ರವೇ ವಿಹಿತವಾಗಿದೆ ಎಂಬುದು ವಿಶೇಷ.

★★

## ಜಲದಿಂದ ಪೂಜೆಗೂ ಫಲ

**ವಿಧಿನಾ ದೇವದೇವೇಶಃ ಶಂಖಚಕ್ರಧರೋ ಹರಿಃ ।**
**ಫಲಂ ದದಾತಿ ಸುಲಭಂ ಸಲಿಲೇನಾಪಿ ಪೂಜಿತಃ ॥ ೧೫ ॥**

**ಅ:** ದೇವದೇವತೆಗಳಿಗೆ ಒಡೆಯನೂ, ಶಂಖಚಕ್ರಗಳನ್ನು ಧರಿಸಿದವನೂ ಆದ ಶ್ರೀಹರಿಯು ಕೇವಲ ನೀರಿನಿಂದ ವಿಧ್ಯುಕ್ತವಾಗಿ ಪೂಜಿಸಿದಾಗಲೂ ಸುಲಭವಾಗಿ ಫಲ ನೀಡುವನು.

ವಿ: ೧. ಇದು ಹಿಂದಿನ ಶ್ಲೋಕದ ಭಾವವನ್ನು ಸ್ಫುಟಪಡಿಸುವ ಶ್ಲೋಕ. ಇಲ್ಲಿ ದೂರ್ವಾಂಕುರಗಳು ಮೊದಲಾದ ಯಾವ ದ್ರವ್ಯಗಳು ಇಲ್ಲದಾಗಲೂ ಶ್ರೀಹರಿಯು ಕೇವಲ ಜಲದಿಂದಲೇ ಅನುಗ್ರಹಿಸುವನು ಎಂಬ ವಿಶೇಷಾಂಶ ಸೂಚಿತ. ದೂರ್ವಾಂಕುರಗಳು ಅರ್ಪಣೆಯ ದ್ರವ್ಯಗಳಾದರೆ ಜಲ, ನೈವೇದ್ಯಪದಾರ್ಥ ಎಂಬುದು ವಿಶೇಷ.

೨. ಅರ್ಪಣೆಗೆ ದೂರ್ವಾಂಕುರಗಳಾದರೂ ಸರಿ, ನೈವೇದ್ಯಕ್ಕೆ ಕೇವಲ ಜಲವಾದರೂ ಸರಿ; ವಿಧ್ಯುಕ್ತವಾದ ಪೂಜೆ ಮಾತ್ರ ಕಡ್ಡಾಯ ಎಂದು ತಾತ್ಪರ್ಯ.

೩. ಇಲ್ಲಿ **ವಿಧಿನಾ ಪೂಜಿತಃ** ಎನ್ನುವ ಮೂಲಕ ಪೂಜೆಯು ಶಾಸ್ತ್ರೋಕ್ತವಾದ ರೀತಿಯಲ್ಲೇ ನಡೆಯಬೇಕು ಎಂಬ ವಿಶೇಷಾಂಶವನ್ನು ತಿಳಿಸಿರುವರು. ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ **'ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ'** ಎಂದು ಹೇಳಿರುವುದು ಈ ಅರ್ಥದಲ್ಲಿ ಅತ್ಯಂತ

ಸಮುಚಿತವೆನಿಸುವುದು. ಶ್ರೀಜಯತೀರ್ಥರು ಪದ್ಯಮಾಲೆಯಲ್ಲಿ '**ಯಥಾಮತಿ ಹರೇಃ ಪೂಜಾವಿಧಿಂ ವೈಷ್ಣವಸಮ್ಮತಮ್**' ಎಂದಿರುವುದನ್ನು ಗಮನಿಸಬೇಕು.

**೪. ವಿಧಿನಾ** ಎಂಬುದಕ್ಕೆ ತಂತ್ರಸಾರ, ಪಂಚರಾತ್ರ ಮೊದಲಾದ ವೈದಿಕಗ್ರಂಥಗಳಲ್ಲಿ ಉಕ್ತವಾದ ವಿಧಿಯಿಂದ ಎಂದು ಅರ್ಥ; ಯಾವುದೋ ಬಗೆಯ ಪೂಜೆ ಶ್ರೀಹರಿಗೆ ಪ್ರಿಯವಾಗದು ಎಂದು ತಿಳಿಯಬೇಕು :

**ಚಕ್ರಾದಿಚಿಹ್ನಹೀನಸ್ತು ಯಃ ಪೂಜಯತಿ ಕೇಶವಮ್ ।**
**ತತ್ಸರ್ವಂ ವಿಫಲಂ ಯಾತಿ ಪೂಜಾಮಂತ್ರಜಪಾದಿಕಮ್ ॥** - (ಉ)

★★

## ಹರಿಪೂಜೆ ಮಾಡದವನಿಗೆ ನರಕ ಖಚಿತ

**ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ ।**
**ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ॥ ೧೬ ॥**

**ಅ:** ನರಕದಲ್ಲಿ ಬೇಯುವವನನ್ನು ಕುರಿತು ಯಮದೇವರು ಕೇಳುವರು; "ಕ್ಲೇಶಗಳನ್ನು ಪರಿಹರಿಸುವ ದೇವನಾದ ಕೇಶವನನ್ನು ನೀನೇಕೆ ಪೂಜಿಸಲಿಲ್ಲ?"

**ವಿ:** ೧. ನರಕದಲ್ಲಿ ಬೇಯುವಂತಹ ದುಃಸ್ಥಿತಿ ಬರುವುದು ಶ್ರೀಹರಿಪೂಜೆಯನ್ನು ಮಾಡದವರಿಗೆ ಮಾತ್ರ ಎಂಬ ತತ್ತ್ವ ಇಲ್ಲಿ ಸೂಚಿತ. ಅದಕ್ಕೆ ಕ್ಲೇಶನಾಶನಃ ಎಂಬ ವಿಶೇಷಣ ಬಂದಿದೆ.

೨. ಯಮ ಹೀಗೆ ಕೇಳುವ ಮೂಲಕ ನರಕ ತಪ್ಪಿಸಿಕೊಳ್ಳುವ ಉದ್ದೇಶದಿಂದಾದರೂ ಹರಿಪೂಜೆಯನ್ನು ತಪ್ಪದೆ ಮಾಡಬೇಕು ಎಂಬ ವಿಷಯವನ್ನು ತಿಳಿಸಿರುವರು.

೩. ನರಕಾಧಿಪತಿಯಾದ ಯಮನೇ ಹೀಗೆ ತಿಳಿಸಿರುವುದರಿಂದ ಹರಿಪೂಜೆಯಿಂದ ನರಕ ತಪ್ಪುವುದು ಖಚಿತ ಎಂಬುದು ದೃಢ ಪಡುವುದು.

೪. ಶ್ರೀಕೃಷ್ಣರೂಪದ ಶ್ರೀಹರಿಯ ಆದೇಶದಂತೆ ಗುರುಪುತ್ರ ಸಾಂದೀಪಿನ್ಯಾಚಾರ್ಯರ ಪುತ್ರನನ್ನು ಯಮನು ಮರಳಿ ಬದುಕಿಸಿಕೊಟ್ಟ ಶ್ರೀಮದ್ಭಾಗವತದ ವಿವರ ಯಮ ಶ್ರೀಹರಿಯ ವಿಶೇಷ ಆಜ್ಞಾಪಾಲಕ ಎಂಬುದನ್ನು ದೃಢಪಡಿಸುವ ಒಂದು ಪ್ರಸಂಗ.

೫. ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕವು ಇದಕ್ಕೆ ಸಂವಾದಿಯಾಗಿದೆ :

**ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ।**
**ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಽಪಿ**
**ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ॥** -(೪/೩/೨೯)

ಇರದು ಎಂಬ ತತ್ವ ಸೂಚಿತ. ಇಲ್ಲಿ ದ್ರವ್ಯಗಳ ಸಾಧನಕ್ಕಿಂತ ಹೆಚ್ಚು ಮುಖ್ಯವಾದದ್ದು ಭಕ್ತಿ ಎಂಬ ಮುಖ್ಯವಿಷಯ ನಿರೂಪಿತವಾಗಿದೆ. ಇದು ಶ್ರೀಮದ್ಭಗವದ್ಗೀತೆಯಲ್ಲಿನ –

**'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥'**

– ಎಂಬ ಶ್ಲೋಕದ ವಿವರಣೆಯಂತಿರುವುದು ಗಮನಾರ್ಹ.

೪. ಶ್ರೀಜಯತೀರ್ಥರು ತತ್ವಪ್ರಕಾಶಿಕೆಯ ಕೊನೆಯಲ್ಲಿ **'ನಹೀಂದಿರಾರಾಧ್ಯಪದೋ ಮುಕುಂದಃ ದೂರ್ವಾಂಕುರೈರ್ಮಂದಧನೈರಪೂಜ್ಯಃ'** ಎಂದು ನುಡಿದಿರುವುದು ಈ ಶ್ಲೋಕದ ಹಿನ್ನೆಲೆಯಲ್ಲಿ ಎಂದು ತಿಳಿಯಬೇಕು.

೫. ಇತರ ದೇವತೆಗಳಿಗೆ ಕೆಲವು ವಿಶಿಷ್ಟದ್ರವ್ಯಗಳಿಂದಲೇ ಪೂಜೆ ವಿಹಿತ. ಗಣೇಶನಿಗೆ ಮೋದಕ ಇತ್ಯಾದಿಯಾಗಿ. ಆದರೆ ಶ್ರೀಹರಿಗೆ ಮಾತ್ರ ಇಂತಹ ಯಾವುದೇ ನೇಮವಿಲ್ಲದೇ ಮುಖ್ಯವಾಗಿ ಭಕ್ತಿ ಮಾತ್ರವೇ ವಿಹಿತವಾಗಿದೆ ಎಂಬುದು ವಿಶೇಷ.

★★

## ಜಲದಿಂದ ಪೂಜೆಗೂ ಫಲ

**ವಿಧಿನಾ ದೇವದೇವೇಶಃ ಶಂಖಚಕ್ರಧರೋ ಹರಿಃ ।**
**ಫಲಂ ದದಾತಿ ಸುಲಭಂ ಸಲಿಲೇನಾಪಿ ಪೂಜಿತಃ ॥ ೧೫ ॥**

**ಅ**: ದೇವದೇವತೆಗಳಿಗೆ ಒಡೆಯನೂ, ಶಂಖಚಕ್ರಗಳನ್ನು ಧರಿಸಿದವನೂ ಆದ ಶ್ರೀಹರಿಯು ಕೇವಲ ನೀರಿನಿಂದ ವಿಧ್ಯುಕ್ತವಾಗಿ ಪೂಜಿಸಿದಾಗಲೂ ಸುಲಭವಾಗಿ ಫಲ ನೀಡುವನು.

ವಿ: ೧. ಇದು ಹಿಂದಿನ ಶ್ಲೋಕದ ಭಾವವನ್ನು ಸ್ಫುಟಪಡಿಸುವ ಶ್ಲೋಕ. ಇಲ್ಲಿ ದೂರ್ವಾಂಕುರಗಳು ಮೊದಲಾದ ಯಾವ ದ್ರವ್ಯಗಳು ಇಲ್ಲದಾಗಲೂ ಶ್ರೀಹರಿಯು ಕೇವಲ ಜಲದಿಂದಲೇ ಅನುಗ್ರಹಿಸುವನು ಎಂಬ ವಿಶೇಷಾಂಶ ಸೂಚಿತ. ದೂರ್ವಾಂಕುರ-ಗಳು ಅರ್ಪಣೆಯ ದ್ರವ್ಯಗಳಾದರೆ ಜಲ, ನೈವೇದ್ಯಪದಾರ್ಥ ಎಂಬುದು ವಿಶೇಷ.

೨. ಅರ್ಪಣೆಗೆ ದೂರ್ವಾಂಕುರಗಳಾದರೂ ಸರಿ, ನೈವೇದ್ಯಕ್ಕೆ ಕೇವಲ ಜಲವಾದರೂ ಸರಿ; ವಿಧ್ಯುಕ್ತವಾದ ಪೂಜೆ ಮಾತ್ರ ಕಡ್ಡಾಯ ಎಂದು ತಾತ್ಪರ್ಯ.

೩. ಇಲ್ಲಿ **ವಿಧಿನಾ ಪೂಜಿತಃ** ಎನ್ನುವ ಮೂಲಕ ಪೂಜೆಯು ಶಾಸ್ತ್ರೋಕ್ತವಾದ ರೀತಿಯಲ್ಲೇ ನಡೆಯಬೇಕು ಎಂಬ ವಿಶೇಷಾಂಶವನ್ನು ತಿಳಿಸಿರುವರು. ಶ್ರೀಮದಾಚಾರ್ಯರು ಸದಾಚಾರಸ್ಮೃತಿಯಲ್ಲಿ **'ಸ್ನಾತ್ವಾ ಸಂಪೂಜಯೇದ್ವಿಷ್ಣುಂ ವೇದತಂತ್ರೋಕ್ತಮಾರ್ಗತಃ'** ಎಂದು ಹೇಳಿರುವುದು ಈ ಅರ್ಥದಲ್ಲಿ ಅತ್ಯಂತ

ಸಮುಚಿತವೆನಿಸುವುದು. ಶ್ರೀಜಯತೀರ್ಥರು ಪದ್ಯಮಾಲೆಯಲ್ಲಿ '**ಯಥಾಮತಿ ಹರೇಃ ಪೂಜಾವಿಧಿಂ ವೈಷ್ಣವಸಮ್ಮತಮ್**' ಎಂದಿರುವುದನ್ನು ಗಮನಿಸಬೇಕು.

೪. ವಿಧಿನಾ ಎಂಬುದಕ್ಕೆ ತಂತ್ರಸಾರ, ಪಂಚರಾತ್ರ ಮೊದಲಾದ ವೈದಿಕಗ್ರಂಥಗಳಲ್ಲಿ ಉಕ್ತವಾದ ವಿಧಿಯಿಂದ ಎಂದು ಅರ್ಥ; ಯಾವುದೋ ಬಗೆಯ ಪೂಜೆ ಶ್ರೀಹರಿಗೆ ಪ್ರಿಯವಾಗದು ಎಂದು ತಿಳಿಯಬೇಕು :

**ಚಕ್ರಾದಿಚಿಹ್ನಹೀನಸ್ತು ಯಃ ಪೂಜಯತಿ ಕೇಶವಮ್ ।**
**ತತ್ಸರ್ವಂ ವಿಫಲಂ ಯಾತಿ ಪೂಜಾಮಂತ್ರಜಪಾದಿಕಮ್ ॥** - (ಉ)

★★

## ಹರಿಪೂಜೆ ಮಾಡದವನಿಗೆ ನರಕ ಖಚಿತ

**ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ ।**
**ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ॥ ೧೬ ॥**

**ಅ:** ನರಕದಲ್ಲಿ ಬೇಯುವವನನ್ನು ಕುರಿತು ಯಮದೇವರು ಕೇಳುವರು; "ಕ್ಲೇಶಗಳನ್ನು ಪರಿಹರಿಸುವ ದೇವನಾದ ಕೇಶವನನ್ನು ನೀನೇಕೆ ಪೂಜಿಸಲಿಲ್ಲ?"

ವಿ: ೧. ನರಕದಲ್ಲಿ ಬೇಯುವಂತಹ ದುಃಸ್ಥಿತಿ ಬರುವುದು ಶ್ರೀಹರಿಪೂಜೆಯನ್ನು ಮಾಡದವರಿಗೆ ಮಾತ್ರ ಎಂಬ ತತ್ವ ಇಲ್ಲಿ ಸೂಚಿತ. ಅದಕ್ಕೆ ಕ್ಲೇಶನಾಶನಃ ಎಂಬ ವಿಶೇಷಣ ಬಂದಿದೆ.

೨. ಯಮ ಹೀಗೆ ಕೇಳುವ ಮೂಲಕ ನರಕ ತಪ್ಪಿಸಿಕೊಳ್ಳುವ ಉದ್ದೇಶದಿಂದಾದರೂ ಹರಿಪೂಜೆಯನ್ನು ತಪ್ಪದೆ ಮಾಡಬೇಕು ಎಂಬ ವಿಷಯವನ್ನು ತಿಳಿಸಿರುವರು.

೩. ನರಕಾಧಿಪತಿಯಾದ ಯಮನೇ ಹೀಗೆ ತಿಳಿಸಿರುವುದರಿಂದ ಹರಿಪೂಜೆಯಿಂದ ನರಕ ತಪ್ಪುವುದು ಖಚಿತ ಎಂಬುದು ದೃಢ ಪಡುವುದು.

೪. ಶ್ರೀಕೃಷ್ಣರೂಪದ ಶ್ರೀಹರಿಯ ಆದೇಶದಂತೆ ಗುರುಪುತ್ರ ಸಾಂದೀಪಿನ್ಯಾಚಾರ್ಯರ ಪುತ್ರನನ್ನು ಯಮನು ಮರಳಿ ಬದುಕಿಸಿಕೊಟ್ಟ ಶ್ರೀಮದ್ಭಾಗವತದ ವಿವರ ಯಮ ಶ್ರೀಹರಿಯ ವಿಶೇಷ ಆಜ್ಞಾಪಾಲಕ ಎಂಬುದನ್ನು ದೃಢಪಡಿಸುವ ಒಂದು ಪ್ರಸಂಗ.

೫. ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕವು ಇದಕ್ಕೆ ಸಂವಾದಿಯಾಗಿದೆ :

**ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ।**
**ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಽಪಿ**
**ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ॥** -(೪/೩/೨೯)

## ಆಪತ್ಕಾಲದಲ್ಲಿ ಕೇವಲ ಜಲದಿಂದಲೂ ಪೂಜಿಸಬಹುದು

**ಶಂಕರಃ**

**ದ್ರವ್ಯಾಣಾಮಪ್ಯಭಾವೇ ತು ಸಲಿಲೇನಾಪಿ ಪೂಜಿತಃ ।**
**ಯೋ ದದಾತಿ ಸ್ವಕಂ ಸ್ಥಾನಂ ಸ ತ್ವಯಾ ಕಿಂ ನ ಪೂಜಿತಃ ॥ ೧೭ ॥**

ಅ: ಇತರದ್ರವ್ಯಗಳು ಇಲ್ಲವಾದಾಗ ಕೇವಲ ಜಲದಿಂದ ಪೂಜಿಸಿದರೂ ಶ್ರೀಹರಿಯು ತನ್ನ ಲೋಕವನ್ನೇ ನೀಡುವನು; ನೀನೇಕೆ ಅವನನ್ನು ಪೂಜಿಸಲಿಲ್ಲ?

ವಿ: ೧. ಇದು ಶಿವನ ಮಾತು. ಯಮ ಇತರರಿಗೆ ಮೃತ್ಯುವಾದರೆ ಶಿವ ಯಮನಿಗೂ ಮೃತ್ಯು; ಯಮನಂತೆ ಶಿವನೂ ಸಹ ಶ್ರೀಹರಿಪೂಜೆಯನ್ನು ಮುಖ್ಯಪುರುಷಾರ್ಥಸಾಧನ ಎಂದು ನಿರೂಪಿಸಿರುವುದು ಗಮನಾರ್ಹ.

೨. ಹಿಂದಿನ ಶ್ಲೋಕದಲ್ಲಿ ಅನಿಷ್ಟನಿವೃತ್ತಿಯನ್ನು ಶ್ರೀಹರಿಪೂಜೆಯ ಫಲವನ್ನಾಗಿ ತಿಳಿಸಿದ್ದರೆ, ಈ ಶ್ಲೋಕದಲ್ಲಿ ಇಷ್ಟಪ್ರಾಪ್ತಿಯನ್ನು ಅದರ ಫಲವಾಗಿ ತಿಳಿಸಿರುವರು ಎಂಬುದು ವಿಶೇಷ.

೩. ಕೇವಲ ನೀರಿನಿಂದ ಪೂಜೆ ಇತರ ದ್ರವ್ಯಗಳ ಅಭಾವವಿದ್ದಾಗ ಮಾತ್ರ ಎಂದು ತಿಳಿಸುವ ಮೂಲಕ ಇತರ ಪದಾರ್ಥಗಳು ಲಭ್ಯವಿದ್ದಾಗಲೂ ಕೇವಲ ನೀರಿನಿಂದ ಪೂಜಿಸುವುದು ವಿಹಿತವಲ್ಲ ಎಂಬ ಪ್ರಮೇಯವನ್ನು ತಿಳಿಸಿರುವರು. ದ್ರವ್ಯಗಳ ಅಭಾವ ಪೂಜಾಲೋಪಕ್ಕೆ ಸರ್ವಥಾ ಕಾರಣವಾಗಬಾರದು ಎಂದು ತಾತ್ಪರ್ಯ.

೪. ಕೇವಲ ಜಲವನ್ನು ನೈವೇದ್ಯಮಾಡುವ ಪ್ರಸಂಗದಲ್ಲಿ ಅನಂತರ ಅದರಿಂದಲೇ ಇತರ-ದೇವತೆಗಳ ನೈವೇದ್ಯವನ್ನೂ ವೈಶ್ವದೇವಾದಿಗಳನ್ನೂ ಪೂರೈಸಿ ತಾನೂ ಸಹ ಕೇವಲ ಆ ಜಲವನ್ನಷ್ಟೇ ಪಾನ ಮಾಡಿ ಜೀವಿಸಬೇಕು. ದೇವರ ನೈವೇದ್ಯಕ್ಕೆ ಮಾತ್ರ ಜಲವನ್ನು ಸಮರ್ಪಿಸಿ ತಾನು ಇತರ ಪದಾರ್ಥಗಳನ್ನು ತಿನ್ನುವುದನ್ನು ಶಾಸ್ತ್ರ ಸರ್ವಥಾ ಒಪ್ಪುವುದಿಲ್ಲ ಎನ್ನುವುದನ್ನು ಗಮನಿಸಬೇಕು. ದ್ರವ್ಯಾಣಾಪ್ಯಭಾವೇ ಎಂಬ ಪದದಿಂದ ಈ ವಿಷಯ ಸೂಚಿತ.

೫. ಪುಷ್ಪಗಳಿಲ್ಲದಾಗ ಪತ್ರಗಳಿಂದ, ಪತ್ರಗಳಿಲ್ಲದಾಗ ನೀರಿನಿಂದ ಶ್ರೀಹರಿಯನ್ನು ಪೂಜಿಸಬೇಕು :

**ಪುಷ್ಪಾಲಾಭೇಽಪಿ ದೇಯಾನಿ ಪತ್ರಾಣ್ಯಪಿ ಜನಾರ್ದನೇ ।**
**ಪತ್ರಾಲಾಭೇ ಜಲಂ ದದ್ಯಾತ್ ತೇನ ಪುಣ್ಯಮುಪಾಶ್ನುತೇ ॥**
**ಪತ್ರಂ ಪುಷ್ಪಂ ಫಲಂ ತೋಯಂ ಭಕ್ತ್ಯಾ ದೇಯಾನಿ ಜನಾರ್ದನೇ ।**
**ತೇನ ಲೋಕಾನವಾಪ್ನೋತಿ ಭಕ್ತಿರೇವಾತ್ರ ಕಾರಣಮ್ ॥** – ವಿಷ್ಣುಧರ್ಮೋತ್ತರ

೬. ಅಜ್ಞಾನಿಗಳು, ಅಶಕ್ತರು ಸಹಾ ಯಥಾಶಕ್ತಿ ದೇವಪೂಜೆಯನ್ನು ಮಾಡಲೇಬೇಕು:

ಅವಿದ್ವಾಂಸೋऽಪ್ಯಶಕ್ತಾಶ್ಚೇಜ್ಜಲೈಃ ಕುರ್ಯುಃ ಪರಾರ್ಚನಮ್ ।-ಯೋಗದೀಪಿಕಾ

★★

## ಹರಿಪೂಜೆ ಮಾಡದಿರುವುದು ಮಹಾಪಾತಕ

[೧]ಧರ್ಮ ಉವಾಚ

**ನರಸಿಂಹೋ ಹೃಷೀಕೇಶಃ ಪುಂಡರೀಕನಿಭೇಕ್ಷಣಃ ।**
**ಸ್ಮರಣಾನ್ಮುಕ್ತಿದೋ ನೃಣಾಂ ಸ ತ್ವಯಾ ಕಿಂ ನ ಪೂಜಿತಃ ॥ ೧೮ ॥**

**ಅ:** ಶ್ರೀಹರಿಯು ನರಸಿಂಹ; ಸಕಲರ ಇಂದ್ರಿಯಗಳಿಗೂ ಪ್ರೇರಕ ; ಕಮಲದಂತಹ ಕಣ್ಣುಗಳುಳ್ಳವನು; ಸ್ಮರಣೆ ಮಾತ್ರದಿಂದಲೇ ಮುಕ್ತಿ ನೀಡುವವನು; ಅವನನ್ನು ನೀನೇಕೆ ಪೂಜಿಸಲಿಲ್ಲ ?

ವಿ: ೧. ಇದೂ ಸಹ ಯಮಧರ್ಮನ ಮಾತು. ಇಲ್ಲಿ ಶ್ರೀಹರಿಯನ್ನು ನರಸಿಂಹ, ಹೃಷಿಕೇಶ, ಪುಂಡರೀಕಾಕ್ಷ ಎಂದು ಕರೆಯುವ ಮೂಲಕ ಅವನ ರೂಪರೂಪಗಳಲ್ಲಿ ಅಭೇದವನ್ನು ಸೂಚಿಸಿರುವರು. 'ನರಸಿಂಹ' ಎನ್ನುವುದು ದಶಾವತಾರಗಳಲ್ಲಿನ ನರಸಿಂಹರೂಪಕ್ಕೆ ಅನ್ವಯಿಸುವಂತೆ ಪುರುಷೋತ್ತಮ ಎಂಬ ಅರ್ಥವನ್ನು ಕೊಡುವುದು. ಅದರಂತೆ 'ಹೃಷಿಕೇಶ' ಎಂಬ ಪದ ಕೇಶವಾದಿಚತುರ್ವಿಂಶತಿ ರೂಪಗಳಲ್ಲಿನ ಹೃಷೀಕೇಶ-ರೂಪವನ್ನು ಹೇಳುವಂತೆ ಶ್ರೀಹರಿಯು ಸಕಲರ ಇಂದ್ರಿಯಗಳಿಗೂ ಒಡೆಯನಾದವನು ಎಂಬ ವಿಶೇಷಾರ್ಥವನ್ನು ತಿಳಿಸುವುದು. 'ಪುಂಡರೀಕಾಕ್ಷ' ಎಂಬ ಪದವೂ ಸಹ ಅವನ ರೂಪದಂತೆ ಅವನ ಕಣ್ಣುಗಳ ವೈಭವವನ್ನೂ ಸಹ ಸೂಚಿಸುವುದು. ಅದು ಅವನ ಸಕಲ ಅವಯವಗಳು ಸಂಪೂರ್ಣ ಸಲ್ಲಕ್ಷಣೋಪೇತ ಎಂಬುದಕ್ಕೆ ಉಪಲಕ್ಷಕ.

೨. ಹಿಂದಿನ ಶ್ಲೋಕಗಳಲ್ಲಿ ಪೂಜೆಯ ಹಿರಿಮೆಯನ್ನು ಹೇಳಿದ್ದಂತೆ ಈ ಶ್ಲೋಕದಲ್ಲಿ ಸ್ಮರಣೆಯ ಮಹಿಮೆಯನ್ನು ತಿಳಿಸಿರುವರು. ಇದು ಮೊದಲ ಶ್ಲೋಕದಲ್ಲಿ ಬಂದಿರುವ ಸಂಸ್ಕೃತಃ ಎಂಬ ಪದಕ್ಕೂ ವಿವರಣೆ.

★★

## ವೈಷ್ಣವದೀಕ್ಷೆ ಜೀವನದುದ್ದಕ್ಕೂ ವಿಹಿತ

ಬ್ರಹ್ಮೋವಾಚ

**ಗರ್ಭಸ್ಥಿತಾ ಮೃತಾ ವಾऽಪಿ ಮುಷಿತಾಸ್ತೇ ಸುದೂಷಿತಾಃ ।**
**ನ ಪ್ರಾಪ್ತಾ ಯೈರ್ಹರೇರ್ದೀಕ್ಷಾ ಸರ್ವದುಃಖವಿಮೋಚನೀ ॥ ೧೯ ॥**

---

೧. ಯಮ ಇತಿ ಕ್ವಚಿತ್ ।

**ಅ:** ಗರ್ಭದಲ್ಲಿ ನೆಲೆಸಿದಾಗ, ಮರಣಹೊಂದಿದಾಗ ಯಾರು ಸರ್ವದುಃಖಗಳನ್ನು ಪರಿಹರಿಸುವ ವೈಷ್ಣವದೀಕ್ಷೆಯನ್ನು ಹೊಂದಿರುವುದಿಲ್ಲವೋ ಅವರೆಲ್ಲ ಸುವರ್ಣಾವಕಾಶ ಕಳೆದುಕೊಂಡವರು ಹಾಗೂ ಮಹಾಪಾಪಿಗಳು.

ವಿ : ೧. ವೈಷ್ಣವದೀಕ್ಷೆಯ ಹಿರಿಮೆಯನ್ನು ಇಲ್ಲಿ ನಿರೂಪಿಸಿರುವರು. ವೈಷ್ಣವದೀಕ್ಷೆ ಜನ್ಮದ ಅನಂತರ ಸಾಯುವವರೆಗೆ ಮಾತ್ರವೇ ಅಲ್ಲ; ಹುಟ್ಟುವ ಮುನ್ನವೂ ಸತ್ತ ಅನಂತರವೂ ಸಹ ಅಗತ್ಯ ಎಂಬ ವಿಶೇಷಾಂಶ ಇದರಲ್ಲಿದೆ. ಹುಟ್ಟುವ ಮುನ್ನ ವೈಷ್ಣವದೀಕ್ಷೆ ಎಂದರೆ ವೈಷ್ಣವದಂಪತಿಗಳ ಪುತ್ರತ್ವೇನ ಜನಿಸುವುದು, ಗರ್ಭದಲ್ಲಿದ್ದಾಗ ತಪ್ತಮುದ್ರಾಧಾರಣಾದಿಗಳ ಮೂಲಕವೂ, ವೈಷ್ಣವಕ್ರಮದಲ್ಲಿ ಗರ್ಭಾದಾನ ಸೀಮಂತಾದಿ ಸಂಸ್ಕಾರಗಳನ್ನು ಹೊಂದುವ ಮೂಲಕವೂ ದೀಕ್ಷೆ ಹೊಂದುವುದು ಎಂದರ್ಥ. ಅದರಂತೆ ಮರಣಾನಂತರ ವೈಷ್ಣವದೀಕ್ಷೆ ಎಂದರೆ ವೈಷ್ಣವಪದ್ಧತಿಯಲ್ಲಿ ಶವಸಂಸ್ಕಾರವಾಗುವುದು ಶವಕ್ಕೆ ಗೋಪೀಚಂದನಾದಿಗಳನ್ನು ಧಾರಣಮಾಡಿಸುವುದು ಶ್ರಾದ್ಧಕರ್ಮಾದಿಗಳಲ್ಲಿ ವೈಷ್ಣವರಿಗೆ ಭೋಜನಾದಿಗಳನ್ನು ಮಾಡಿಸುವುದು ಮೊದಲಾದವುಗಳು ವಿವಕ್ಷಿತ.

೨. ಹೀಗೆ ವೈಷ್ಣವದೀಕ್ಷೆಯ ಹಿರಿಮೆಯನ್ನು ತುಂಬಾ ವಿಶಾಲವಾದ ಅರ್ಥದಲ್ಲಿ ವರ್ಣಿಸಿರುವುದು ಈ ಶ್ಲೋಕದ ಹಿರಿಮೆ. ಸರ್ವದುಃಖಗಳ ಪರಿಹಾರ ವೈಷ್ಣವದೀಕ್ಷೆಯ ಫಲ ಎಂಬುದು ಅದರ ಫಲಶ್ರುತಿ. ಇಂತಹ ದೀಕ್ಷೆಯನ್ನು ಪಡೆಯದಿರುವುದು ಅತ್ಯಂತ ಹೆಚ್ಚಿನ ದೌರ್ಭಾಗ್ಯ.

೩. [೧]ಮೂಷಿತರು ಎಂದರೆ ಅಪಸ್ಮಾರ ಮೊದಲಾದವುಗಳಿಂದಾಗಿ ಪ್ರಜ್ಞಾಹೀನರಾದವರು, ಕಳ್ಳತನ ಮಾಡಿದವರು ಎಂದು ಅರ್ಥ.

★★

## ಒಮ್ಮೆ ಮಾಡಿದ ಹರಿಪೂಜೆಗೂ ಮಹತ್ಫಲ

### ಮಾರ್ಕಂಡೇಯಃ

**ಸಕೃದಭ್ಯರ್ಚಿತೋ ಯೇನ ದೇವದೇವೋ ಜನಾರ್ದನಃ ।**
**ಯತ್ ಕೃತಂ ತತ್ ಕೃತಂ ತೇನ ಸಂಪ್ರಾಪ್ತಂ ಪರಮಂ ಪದಮ್ ॥ ೨೦ ॥**

**ಅ:** ದೇವದೇವನಾದ ಜನಾರ್ದನನನ್ನು ಯಾವನು ಒಮ್ಮೆಯಾದರೂ ಚೆನ್ನಾಗಿ ಪೂಜಿಸುವನೋ ಅವನು ಕೃತಕೃತ್ಯನೇ ಸರಿ; ಅವನು ಪರಮಪದವಿಯನ್ನು ಪಡೆಯುವುದು ನಿಶ್ಚಿತ.

---

೧. ಮೂಷಿತಾಃ ಅಪಸ್ಮಾರಾದಿನಾ ಪ್ರಜ್ಞಾಪ್ರಮೋಷಂ ಪ್ರಾಪ್ತಾಃ ॥ (ತಾ.) ;
ಮೂಷಿತಾಃ 'ಮುಷ ಸ್ತೇಯ' ಇತಿ ಧಾತೋಃ ಕರ್ತರಿ ಕ್ತಪ್ರತ್ಯಯಃ । ತಸ್ಕರಾ ಭವಂತೀತಿ ಶೇಷ (ಉ.)

ವಿ: ೧. ಶ್ರೀಹರಿಯ ಪೂಜೆ ಒಂದುಬಾರಿ ಶಾಸ್ತ್ರೋಕ್ತವಾಗಿ ನಡೆಯುವುದೂ ಸಹ ಮಹಾಪುರುಷಾರ್ಥಸಾಧಕ ಎಂಬ ವಿಶೇಷಾಂಶ ಇಲ್ಲಿದೆ. ಒಂದು ಬಾರಿ ಅಂತಹ ಉತ್ತಮಪೂಜೆಯನ್ನು ಸಲ್ಲಿಸುವ ಹಿರಿಮೆ ಶ್ರೇಷ್ಠಜ್ಞಾನಿಗಳಿಗೆ ಸಾಧ್ಯ. ಆದ್ದರಿಂದ ಜ್ಞಾನಪೂರ್ವಕ ಪೂಜೆಗೆ ಸರ್ವಾತ್ಮನಾ ಸದಾ ಪ್ರಯತ್ನಿಸಬೇಕು ಎಂದರ್ಥ.

೨. ಒಂದು ಬಾರಿಯ ಇಂತಹ ಪೂಜೆಗೆ ಅಂತಹ ಉತ್ತಮ ಫಲವಿರುವಾಗ ಅನೇಕ ಬಾರಿಯ ಪೂಜೆಗೆ, ಸತತಪೂಜೆಗೆ ಇರುವ ಫಲ ಇನ್ನೂ ವಿಶೇಷವಾದುದು ಎಂಬುದು ಕೈಮುತ್ಯಸಿದ್ಧ ಎಂಬುದು ಇದರಿಂದ ಸೂಚಿತ.

೩. ವಾಲ್ಮೀಕಿರಾಮಾಯಣದ ಈ ಕೆಳಗಿನ ಶ್ಲೋಕವು ಇದಕ್ಕೆ ಸಂವಾದಿಯಾಗಿದೆ:

**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಮ್ ॥ (೬/೮/೩೩)**

★★

## ಸಕಲಪುರುಷಾರ್ಥಗಳಿಗೂ ಶ್ರೀಹರಿಯ ಪೂಜೆಯೇ ಸಾಧನ

**ಧರ್ಮಾರ್ಥಕಾಮಮೋಕ್ಷಾಣಾಂ ನಾನ್ಯೋಽಪಾಯಸ್ತು ವಿದ್ಯತೇ ।**
**ಸತ್ಯಂ ಬ್ರವೀಮಿ ದೇವೇಶ ಹೃಷೀಕೇಶಾರ್ಚನಾದೃತೇ ॥ ೨೧ ॥**

**ಅ:** ಸತ್ಯವನ್ನೇ ಹೇಳುತ್ತಿರುವೆ, ದೇವೇಶನಾದ ಹೃಷೀಕೇಶನ ಪೂಜೆಗಿಂತ ಮಿಗಿಲಾದ ಮತ್ತೊಂದು ಉಪಾಯವು ಧರ್ಮ ಅರ್ಥ ಕಾಮ ಮತ್ತು ಮೋಕ್ಷಗಳ ಪ್ರಾಪ್ತಿಗೆ ಇಲ್ಲವೇ ಇಲ್ಲ.

**ವಿ:** ೧. ಶ್ರೀಹರಿಯ ಪೂಜೆ ಮೋಕ್ಷಸಾಧಕಮಾತ್ರವಲ್ಲದೇ ಧರ್ಮಾದಿ ಇತರ ಮೂರು ಪುರುಷಾರ್ಥಗಳ ಪ್ರಾಪ್ತಿಗೂ ಶ್ರೇಷ್ಠವಾದ ಖಚಿತಸಾಧನ ಎಂಬ ತತ್ವ ಇಲ್ಲಿದೆ. ಇದರಿಂದ ಹರಿಯ ಆರಾಧಕರಿಗೆ ಶ್ರೇಯಸ್ಸು ಮಾತ್ರವಲ್ಲದೇ ಪ್ರೇಯಸ್ಸು ಸಹ ದೊರೆಯುವುದು ಎಂಬ ಫಲಶ್ರುತಿ ನಿರೂಪಿತ.

೨. ಶ್ರೀಹರಿಯ ಆರಾಧನೆಯಿಂದ ಸಕಲಪುರುಷಾರ್ಥಪ್ರಾಪ್ತಿ ಎನ್ನುವ ಮೂಲಕ ಸಕಲಪುರುಷಾರ್ಥ ಪ್ರಾಪ್ತಿಗೆ ಇಂತಹ ಮತ್ತೊಂದು ಶ್ರೇಷ್ಠಸಾಧನ ಇಲ್ಲವೇ ಇಲ್ಲ ಎಂಬ ವಿಶೇಷವು ಸೂಚಿತ. 'ಸತ್ಯಂ ಬ್ರವೀಮಿ' ಎನ್ನುವ ಮೂಲಕ ಇದು ಬ್ರಹ್ಮಮೀಮಾಂಸಾಶಾಸ್ತ್ರೋಕ್ತವಾದ ಮಹಾಪ್ರಮೇಯ ಎಂಬ ವಿಶೇಷಾರ್ಥ ನಿರೂಪಿತ. **ಪುರುಷಾರ್ಥೋಽತಃ ಶಬ್ದಾತ್** ಎಂಬ ಬ್ರಹ್ಮಸೂತ್ರ ಹಾಗೂ **ಸರ್ವೇಽಪಿ ಪುರುಷಾರ್ಥಾಃ ಸ್ಯುರ್ಜ್ಞಾನಾದೇವ ನ ಸಂಶಯಃ** ಎಂಬ ಅಣುಭಾಷ್ಯಗಳ ಮಾತುಗಳು ಇಲ್ಲಿ ಗಮನಾರ್ಹ.

೩. ಇಲ್ಲಿ '**ದೇವೇಶಹೃಷೀಕೇಶಾರ್ಚನಾತ್**' ಎಂಬುದಾಗಿಯೂ '**ದೇವೇಶ ಹೃಷೀಕೇಶಾರ್ಚನಾತ್**' ಎಂಬುದಾಗಿಯೂ ವಿಭಾಗ ಮಾಡಿ ಅರ್ಥಮಾಡಿಕೊಳ್ಳಬಹುದು.

'ದೇವೇಶಹೃಷಿಕೇಶ' ಎಂದಾಗ 'ದೇವತೆಗಳಿಗೆ ಒಡೆಯನಾದವನು ಹೃಷೀಕೇಶ' ಎಂಬ ಅರ್ಥ ಬರುವುದು; 'ದೇವೇಶ' ಎಂಬುದನ್ನು ಪ್ರತ್ಯೇಕಪದವನ್ನಾಗಿ ಓದಿಕೊಂಡಾಗ ಇದು ದೇವಶ್ರೇಷ್ಠನೊಬ್ಬನಿಗೆ ಮಾಡಿದ ಸಂಬೋಧನೆ ಎಂದಾಗುವುದು.

★★

### ಶ್ರೀಹರಿಗೆ ನಮಸ್ಕರಿಸುವವರು ಸಹ ಪೂಜ್ಯರು

**[೧]ತಸ್ಯ ಯಜ್ಞವರಾಹಸ್ಯ ವಿಷ್ಣೋರಮಿತತೇಜಸಃ ।**
**ಪ್ರಣಾಮಂ ಯೇ ಪ್ರಕುರ್ವಂತಿ ತೇಷಾಮಪಿ ನಮೋ ನಮಃ ॥ ೨೨ ॥**

**ಅ:** ಅಪರಿಮಿತತೇಜಸ್ವಿಯಾದ ಯಜ್ಞವರಾಹನಾದ ವಿಷ್ಣುವಿಗೆ ಯಾರು ಭಕ್ತಿಪೂರ್ವಕವಾಗಿ ನಮಸ್ಕರಿಸುವರೋ, ಅವರಿಗೂ ಸಹ ನಮಸ್ಕಾರ, ನಮಸ್ಕಾರ.

ವಿ: ೧. ಹಿಂದೆ ಶ್ರೀಹರಿಯನ್ನು ಪೂಜಿಸುವವನೂ ಸಹ ಪೂಜಿತನಾಗುವನು ಎಂದು ತಿಳಿಸಿದಂತೆ ಇಲ್ಲಿ ಶ್ರೀಹರಿಗೆ ವಂದಿಸುವವನೂ ಸಹ ವಂದ್ಯನಾಗುವನು ಎಂದು ತಿಳಿಸಿರುವರು. ಶ್ರೀಹರಿಯಂತೆ ಶ್ರೀಹರಿಭಕ್ತರೂ ವಂದ್ಯರು ಎಂದು ಭಾವ.

೨. ಈ ಶ್ಲೋಕವನ್ನು ಶ್ರೀಮುಷ್ಣಕ್ಷೇತ್ರದಲ್ಲಿ ಉತ್ಸವಮೂರ್ತಿಯಾದ ಯಜ್ಞವರಾಹ-ರೂಪಿ ಹರಿಯ ಪ್ರಾರ್ಥನಾಶ್ಲೋಕವನ್ನಾಗಿ ಇಂದಿಗೂ ಪ್ರತಿನಿತ್ಯ ಪಠಿಸುವ ಸಂಪ್ರದಾಯ-ವಿರುವುದು ಗಮನಾರ್ಹ.

೩. ಪ್ರಣಾಮ ಎಂದರೆ ಭಕ್ತಿಪೂರ್ವಕವಾದ ನಮಸ್ಕಾರ. ಸಾಷ್ಟಾಂಗನಮಸ್ಕಾರ ಎಂದು ಅರ್ಥ. ಅದರ ವಿವರ ಮುಂದೆ ಬಂದಿದೆ(ಶ್ಲೋ. ೯೦).

೪. ಇದು ಒಂದುರೀತಿಯಲ್ಲಿ ಶ್ರೀಮದಾಚಾರ್ಯರ ಶ್ರೀಮುಷ್ಣಕ್ಷೇತ್ರದ ಸಂದರ್ಶನಕ್ಕೆ ಸ್ಮಾರಕವೂ ಆಗಿದೆ.

★★

### ಶ್ರೀಹರಿಯನ್ನು ಪೂಜಿಸದವನಿಗೆ ಉತ್ತಮಗತಿ ಲಭಿಸದು

[೨]ಮರೀಚಿಃ

**ಅನಾರಾಧಿತಗೋವಿಂದೈರ್ನರೈಃ ಸ್ಥಾನಂ ನೃಪಾತ್ಮಜ ।**
**ನ ಹಿ ಸಂಪ್ರಾಪ್ಯತೇ ಶ್ರೇಷ್ಠಂ ತಸ್ಮಾದಾರಾಧಯಾಚ್ಯುತಮ್ ॥ ೨೩ ॥**

---

೧. ವರಾಹಪುರಾಣ ೨೧೧-೮೬

೨. ವಿಷ್ಣುಪುರಾಣ ೧-೧೧-೪೨ ; ಪುಲಹಃ ( ಪಾ.) ; ೨. ವಿಷ್ಣುಪುರಾಣ (೧/೧೧/೪೩)

**ಅ:** ರಾಜಪುತ್ರನಾದ ಧ್ರುವನೇ ! ಗೋವಿಂದನನ್ನು ಆರಾಧಿಸದ ಜನರಿಗೆ ಶ್ರೇಷ್ಠಸ್ಥಾನ ಸರ್ವಥಾ ಲಭಿಸದು; ಆದ್ದರಿಂದ ಅಚ್ಯುತನಾದ ಅವನನ್ನು ಆರಾಧಿಸು.

ವಿ: ೧. ಇದು ವಿಷ್ಣುಪುರಾಣದಲ್ಲಿ ಮರೀಚಿಮುನಿಯಿಂದ ಧ್ರುವನಿಗೆ ಉಪದಿಷ್ಟವಾದ ಮಾತು; ಶ್ರೀಮದ್ಭಾಗವತದಲ್ಲಿ ವನಕ್ಕೆ ತೆರಳಿದ ಧ್ರುವನಿಗೆ ನಾರದರು ಶ್ರೀಹರಿ-ಮಹಿಮೆಯನ್ನು ಉಪದೇಶಿಸಿದ ವಿವರ ಬಂದಿದ್ದರೆ ವಿಷ್ಣುಪುರಾಣದಲ್ಲಿ ಧ್ರುವನಿಗೆ ಹಾಗೆ ಹರಿಮಹಿಮೆ ತಿಳಿಸಿದ್ದು ಮರೀಚಿಮೊದಲಾದ ಸಪ್ತರ್ಷಿಗಳು ಎಂಬ ವಿವರ ಬಂದಿದೆ. ಈ ವ್ಯತ್ಯಾಸ ಕಲ್ಪಭೇದದ ಹಿನ್ನೆಲೆಯಲ್ಲಿ ಬಂದಿರುವುದು ಎಂದು ತಿಳಿಯಬೇಕು.

೨. ಉತ್ತಮ ಸಿದ್ಧಿಯನ್ನು ಸಂಪಾದಿಸಹೊರಟ ಧ್ರುವನಿಗೆ ಮರೀಚಿಮುನಿಯು ಅದಕ್ಕೆ ಸಾಧನೆಯನ್ನಾಗಿ ಶ್ರೀಹರಿಪೂಜೆಯನ್ನು ವಿಧಿಸಿದ್ದು ಇದರ ಸಾರಾಂಶ. ಶ್ರೀಹರಿಯನ್ನು ಆರಾಧಿಸಿದ್ದರಿಂದ ಉತ್ತಮಸ್ಥಾನಲಭಿಸುವಂತೆ, ಆರಾಧಿಸದಿದ್ದಾಗ ಅಂತಹ ಸ್ಥಾನ ಸರ್ವಥಾ ಲಭಿಸದು ಎಂಬ ಅರ್ಥವು ಇದರಲ್ಲಿ ಸೂಚಿತ.

೩. **ಅಚ್ಯುತಂ ಆರಾಧಯ** ಎನ್ನುವ ಮೂಲಕ ಶ್ರೀಹರಿಯು ಅಚ್ಯುತ ಎಂದರೆ ಚತುರ್ವಿಧನಾಶರಹಿತ ಸಕಲಗುಣಪೂರ್ಣ ಎಂಬ ಅರ್ಥ ಸೂಚಿತ :

**ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ - ದ್ವಾದಶಸ್ತೋತ್ರ**

**ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ।**
**ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥**

★★

## ಶ್ರೀಹರಿಯು ಒಲಿದವರಿಗೆ ಮುಕ್ತಿ ಖಚಿತ

### ಅತ್ರಿಃ[೨]

**ಪರಃ ಪರಾಣಾಂ ಪುರುಷಸ್ತುಷ್ಟೋ ಯಸ್ಯ ಜನಾರ್ದನಃ ।**
**ಸ ಚಾಪ್ನೋತ್ಯಕ್ಷಯಂ ಸ್ಥಾನಮೇತತ್ ಸತ್ಯಂ ಮಯೋದಿತಮ್ ॥ ೨೪ ॥**

**ಅ:** ಜನಾರ್ದನನಾದ ಶ್ರೀಹರಿಯು ಶ್ರೇಷ್ಠರಿಗಿಂತಲೂ ಶ್ರೇಷ್ಠನಾದ ಮಹಾಪುರುಷ; ಅವನು ಯಾರಿಗೆ ಒಲಿಯುವನೋ ಅವನು ನಾಶರಹಿತವಾದ ಸ್ಥಾನವನ್ನು ಹೊಂದುವನು; ನಾನು ಹೇಳಿದ ಈ ಮಾತು ಸತ್ಯವಾದುದು.

ವಿ: ೧. ಇದು ಧ್ರುವನಿಗೆ ಅತ್ರಿಮುನಿ ಹೇಳಿದ ಮಾತು. ಶ್ರೀಹರಿಯು ಪರಮಪುರುಷ ಸಂಸಾರಪರಿಹಾರಕ, ಷಡ್ಗುಣಸಂಪನ್ನ ಎಂಬ ಅರ್ಥ ಇದರಿಂದ ಸೂಚಿತ. ಅಕ್ಷಯಸ್ಥಾನವಾದ ಮೋಕ್ಷವನ್ನು ನೀಡುವವನು ಶ್ರೀಹರಿಯು ಮಾತ್ರ ಎಂಬ ವಿಶೇಷಾರ್ಥವು ಇಲ್ಲಿದೆ.

೨. ಇಲ್ಲೂ ಸಹ ಸತ್ಯಂ ಎನ್ನುವ ಮೂಲಕ (ಸತ್ಯಂ ಮೀಮಾಂಸಾ - ತಲವಕಾರ ಭಾಷ್ಯ) ಇದು ಬ್ರಹ್ಮಸೂತ್ರಗಳಿಗೆ ಅನುಗುಣವಾದ ವಿಚಾರ ಎಂಬುದು ನಿರೂಪಿತ.

★★

## ಶ್ರೀಹರಿಯ ಪೂಜೆ ಉತ್ತಮಸ್ಥಾನಪ್ರಾಪ್ತಿಗೆ ಉಪಾಯ

### ಅಂಗಿರಾಃ

**ಯಸ್ಯಾಂತಃ ಸರ್ವಮೇವೇದಮಚ್ಯುತಸ್ಯಾವ್ಯಯಾತ್ಮನಃ ।**
**ತಮಾರಾಧಯ ಗೋವಿಂದಂ ಸ್ಥಾನಮಗ್ರ್ಯಂ ಯದಿಚ್ಛಸಿ[೧] ॥ ೨೫ ॥**

ಅ: ನೀನು ಶ್ರೇಷ್ಠಸ್ಥಾನ ಬಯಸುವೆಯಾದಲ್ಲಿ, ಯಾವ ಶ್ರೀಹರಿಯ ಒಳಗೆ ಇದೆಲ್ಲವೂ ಅಡಗಿದೆಯೋ, ಅಂತಹ ಅಚ್ಯುತನೂ, ಅವ್ಯಯದೇಹನೂ ಆದ ಆ ಗೋವಿಂದನನ್ನು ಆರಾಧಿಸು.

ವಿ: ೧. ಇದು ವಿಷ್ಣುಪುರಾಣದಲ್ಲಿ ಧ್ರುವನಿಗೆ ಅಂಗಿರಸಮುನಿಗಳು ಹೇಳಿದ ಮಾತು. ಶ್ರೇಷ್ಠಸ್ಥಾನ ಬಯಸುವವರಿಗೆ ಶ್ರೀಹರಿಯ ಪೂಜೆಯೊಂದೇ ಸಾಧನ ಎಂಬ ತತ್ತ್ವ ಇಲ್ಲಿದೆ.

೨. ಇಲ್ಲಿ **ಅವ್ಯಯಾತ್ಮಾ** ಎಂಬುದಕ್ಕೆ ಗೀತಾಭಾಷ್ಯದಲ್ಲಿ ಬಂದಿರುವಂತೆ ಸ್ವರೂಪತಃ ಮಾತ್ರವಲ್ಲದೇ ದೇಹದ ದೃಷ್ಟಿಯಲ್ಲೂ ಸರ್ವಥಾ ನಾಶರಹಿತನಾದವನು ಎಂಬ ವಿಶೇಷಾರ್ಥವನ್ನು ತಿಳಿಯಬೇಕು: **ಅವ್ಯಯಃ ಆತ್ಮಾ ದೇಹೋಽಪಿ ಇತ್ಯವ್ಯಯಾತ್ಮಾ (೪/೬).**

★★

## ಶ್ರೀಹರಿಯ ಆರಾಧನೆಯಿಂದ ಮುಕ್ತಿ ಲಭಿಸುವುದು

### ಪುಲಸ್ತ್ಯಃ

**ಪರಂ ಬ್ರಹ್ಮ ಪರಂ ಧಾಮ ಯೋಽಸೌ ಬ್ರಹ್ಮ ಸನಾತನಮ್ ।**
**ತಮಾರಾಧ್ಯ ಹರಿಂ ಯಾತಿ ಮುಕ್ತಿಮಪ್ಯತಿದುರ್ಲಭಾಮ್[೨] ॥ ೨೬ ॥**

ಅ: ಶ್ರೀಹರಿಯು ಪರಬ್ರಹ್ಮ; ಅವನೇ ಪರಮನೆಲೆ; ಅವನು ಸರ್ವಗುಣ-ಸಂಪನ್ನ; ಸನಾತನನಾದವನು; ಅಂತಹ ಶ್ರೀಹರಿಯನ್ನು ಆರಾಧಿಸಿದವನು ಅತ್ಯಂತ ದುರ್ಲಭವಾದ ಮುಕ್ತಿಯನ್ನು ಹೊಂದುವನು.

---

೧. ವಿಷ್ಣುಪುರಾಣ (೧/೧೧/೪೩)
೨. ಪುಲಹಃ (ಪಾ) । ಯಾಂತಿ (ಪಾ) । ಮುಕ್ತಿಮಪ್ಯಥ ದುರ್ಲಭಾಂ (ಪಾ) ;ವಿಷ್ಣುಪುರಾಣ(೧/೧೧/೪೬)

ವಿ: ೧. ಇದು ವಿಷ್ಣುಪುರಾಣದಲ್ಲಿ ಧ್ರುವನಿಗೆ ಪುಲಸ್ತ್ಯಮುನಿ ನುಡಿದ ವಚನ. ಶ್ರೀಹರಿಯು ಸರ್ವೋತ್ತಮ ಎಂಬುದು ಇಲ್ಲಿ ವಿಶೇಷವಾಗಿ ನಿರೂಪಿತವಾಗಿದೆ. ಇದರ ಆರಂಭ **'ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್'** ಎಂಬ ಗೀತೆಯ ಶ್ಲೋಕದಂತಿರುವುದು ಗಮನಾರ್ಹ.

೨. ಇತರರ ಆರಾಧನೆಯಿಂದ ಅತಿದುರ್ಲಭವೆನ್ನಿಸುವ ಮುಕ್ತಿ ಶ್ರೀಹರಿಯ ಆರಾ-ಧನೆಯಿಂದ ಅತಿಸುಲಭವಾಗಿ ಲಭಿಸುವುದು ಎಂಬುದು ಇಲ್ಲಿಯ ಮುಖ್ಯಪ್ರಮೇಯ.

೩. **ಸನಾತನ** ಎಂದರೆ ನಾದಶಬ್ದವಾಚ್ಯವಾದ ವೇದಾದಿ ಶಾಸ್ತ್ರಪ್ರತಿಪಾದ್ಯ ಎಂದರ್ಥ : **ನಾದೇನ ಶಬ್ದೇನ ಸಹ ವರ್ತತೇ ಇತಿ ಸನಾದನ ಏವ ಸನಾತನಃ' - ಗೀತಾತಾತ್ಪರ್ಯ (೨/೨೪)**

## ಇಂದ್ರ ತನ್ನ ಪದವಿ ಪಡೆದದ್ದು ಶ್ರೀಹರಿಯನ್ನು ಆರಾಧಿಸಿಯೇ

**[೧]ಐಂದ್ರಮಿಂದ್ರಃ ಪರಂ ಸ್ಥಾನಂ ಯಮಾರಾಧ್ಯ ಜಗತ್ಪತಿಮ್ ।**
**ಪ್ರಾಪ ಯಜ್ಞಪತಿಂ ವಿಷ್ಣುಂ ತಮಾರಾಧಯ ಸುವ್ರತ[೨] ॥ ೨೭ ॥**

**ಅ:** ಜಗತ್ಪತಿಯಾದ ಯಾವ ಶ್ರೀಹರಿಯನ್ನು ಆರಾಧಿಸಿ ಇಂದ್ರನು ಶ್ರೇಷ್ಠವಾದ ಇಂದ್ರಪದವಿಯನ್ನು ಪಡೆದನೋ, ಅಂತಹ ಯಜ್ಞಪತಿಯಾದ ವಿಷ್ಣುವನ್ನು, ಎಲೈ ಉತ್ತಮವ್ರತಸಂಪನ್ನನಾದ ಧ್ರುವನೇ ! ನೀನು ಆರಾಧಿಸು.

ವಿ: ೧. ಇದೂ ಸಹ ವಿಷ್ಣುಪುರಾಣದ ಪುಲಸ್ತ್ಯವಚನ. ಹರಿಯನ್ನು ಆರಾಧಿಸಿ ಶ್ರೇಷ್ಠ-ಸ್ಥಾನವನ್ನು ಪಡೆಯಲು ಸಾಧ್ಯ ಎಂಬ ಮಾತಿಗೆ ನಿದರ್ಶನವನ್ನಾಗಿ ಇಲ್ಲಿ ಇಂದ್ರನು ಶ್ರೀಹರಿಯ ಅನುಗ್ರಹದಿಂದಲೇ ಇಂದ್ರಪದವಿಯನ್ನು ಪಡೆದ ವಿವರವನ್ನು ನೀಡಿರು-ವರು. ಇದರಿಂದ ಉಪಲಕ್ಷಣಯಾ ಬ್ರಹ್ಮರುದ್ರಾದಿ ಸಕಲಪದವಿಗಳೂ ಶ್ರೀಹರಿಯ ಅನುಗ್ರಹದಿಂದಲೇ ಆಯಾ ಪದವಿಗೆ ಅರ್ಹರಾದ ಚೇತನರಿಗೆ ಲಭಿಸುವವು ಎಂಬ ವಿಶೇಷಾರ್ಥ ಸೂಚಿತ. ಆ ವಿವರಗಳು ದ್ವಾದಶಸ್ತೋತ್ರದಲ್ಲಿ ಬಂದಿವೆ(ಅಧ್ಯಾಯ ೭).

೨. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಉಲ್ಲೇಖಿತವಾಗಿರುವ **'ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ'** ಎಂಬ ಶ್ರುತಿವಾಕ್ಯಕ್ಕೆ ಇದು ವಿವರಣರೂಪವಾಗಿರುವುದು ಗಮನಾರ್ಹ.

---

೧. ಅಜೋಽಧ್ಯತಿಷ್ಠತ್ ಖಲು ಪಾರಮೇಷ್ಠ್ಯಂ ಪದಂ ಜಿತಾತ್ಮಾ ಶ್ವಸನಾಭಿವಂದ್ಯಮ್ ।
ತಥಾ ಮನುರ್ವೋ ಭಗವಾನ್ ಪಿತಾಮಹೋ ಯಮೇಕಭಕ್ತ್ಯಾಃ ಪುರುದಕ್ಷಿಣೈರ್ಮಖೈಃ ।
ಇಷ್ಟ್ವಾಽಭಿಪೇದೇ ದುರವಾಪಮನ್ಯತೋ ಭೌಮಂ ಸುಖಂ ದಿವ್ಯಮಥಾಪವರ್ಗ್ಯಮ್ ॥
-ಭಾಗವತ (೪/೯/೨೧,೨೨)

೨. ವಿಷ್ಣುಪುರಾಣ (೧/೧೧/೪೭)

೩. ಹೀಗೆ ಇತರರಿಗೆ ಇಂದ್ರಾದಿಪದವಿಗಳು ವಿಷ್ಣುವಿನಿಂದ ದೊರೆಯುವಂತೆ ವಿಷ್ಣುವಿಗೆ ಮಾತ್ರ ಆ ವಿಷ್ಣುತ್ವ ಯಾರಿಂದಲೂ ಲಭಿಸಿದುದಲ್ಲ; ಅದು ಅವನ ಸ್ವರೂಪ. ವಿಷ್ಣುತ್ವ ಎಂಬುದು ಇಂದ್ರಾದಿ ಪದವಿಗಳಂತೆ ಒಂದು ಪದವಿಯು ಅಲ್ಲ ಎಂಬುದು ಗಮನಾರ್ಹ.

★★

## ಶ್ರೀಹರಿಯ ಪೂಜೆಯಿಂದ ಸಕಲಬಯಕೆಗಳ ಸಿದ್ಧಿ

**ಪ್ರಾಪ್ನೋತ್ಯಾರಾಧಿತೇ ವಿಷ್ಣೌ ಮನಸಾ ಯದ್ಯದಿಚ್ಛತಿ ।**
**ತ್ರೈಲೋಕ್ಯಾಂತರ್ಗತಂ ಸ್ಥಾನಂ ಕಿಮು ಲೋಕೋತ್ತರೋತ್ತರಮ್**[೧] ೨೮

**ಅ:** ವಿಷ್ಣುವನ್ನು ಆರಾಧಿಸಿದಾಗ ಮನಸ್ಸಿನಲ್ಲಿ ಬಯಸುವ ಮೂರು ಲೋಕದೊಳಗಿನ ಯಾವ ಸ್ಥಾನವಾದರೂ ಲಭಿಸುವುದು; ಇನ್ನು ಉತ್ತಮಲೋಕಗಳು ಲಭಿಸುವವು ಎಂದು ಪ್ರತ್ಯೇಕ ಹೇಳಬೇಕೇ !!

ವಿ: ಇದು ವಿಷ್ಣುಪುರಾಣದಲ್ಲಿನ ಪುಲಸ್ತ್ಯರ ವಚನ. ವಿಷ್ಣುವಿನ ಆರಾಧನೆಯಿಂದ ವಿಶ್ವದಲ್ಲಿನ ಯಾವ ಸ್ಥಾನವೂ ಸಹ ಅರ್ಹರಿಗೆ ತಪ್ಪದೇ ಲಭಿಸುವುದು ಎಂದು ಭಾವ. ಮನಸ್ಸಿನಲ್ಲಿ ಬಯಸುವ ಎಂತಹ ಅಭಿಲಾಷೆಯೂ ವಿಷ್ಣುವಿನ ಅನುಗ್ರಹದಿಂದ ಲಭಿಸುವುದು ಎನ್ನುವ ಮೂಲಕ ವಿಷ್ಣುವಿನ ಆರಾಧನೆಗೆ ಲಭಿಸದ ಫಲವೇ ಇಲ್ಲ ಎಂಬ ವಿಶೇಷಾಂಶವು ನಿರೂಪಿತ.

★★

## ಶ್ರೀಹರಿಯ ಸ್ಮರಣೆಯು ಮುಕ್ತಿಗೆ ಸಾಧಕ

**ಯೇ ಸ್ಮರಂತಿ**[೨] **ಸದಾ ವಿಷ್ಣುಂ ಶಂಖಚಕ್ರಗದಾಧರಮ್ ।**
**ಸರ್ವಪಾಪವಿನಿರ್ಮುಕ್ತಾಃ ಪರಂ ಬ್ರಹ್ಮ** [೩] **ವಿಶಂತಿ ತೇ ॥ ೨೯ ॥**

**ಅ:** ಶಂಖಚಕ್ರಗದಾಧರನಾದ ವಿಷ್ಣುವನ್ನು ಯಾರು ಸದಾ ಸ್ಮರಿಸುವರೋ, ಅವರು ಸಕಲಪಾಪಗಳಿಂದ ಬಿಡುಗಡೆ ಹೊಂದಿ ಪರಬ್ರಹ್ಮನಾದ ಅವನನ್ನು ಹೊಂದುವರು.

ವಿ: ಇದೂ ಸಹ ವಿಷ್ಣುಪುರಾಣದಲ್ಲಿನ ಪುಲಸ್ತ್ಯರ ವಚನ. ವಿಷ್ಣುವಿನ ಸರ್ವದಾ ಸ್ಮರಣೆ ಸಕಲಪಾಪಹರ ಹಾಗೂ ಮೋಕ್ಷಪ್ರಾಪಕ ಎಂದರ್ಥ. ಹೀಗೆ ಸಕಲಪಾಪಗಳನ್ನು ಪರಿಹರಿಸುವ ಮತ್ತೊಂದು ಉಪಾಯ ಇಲ್ಲವೆಂಬುದು ಗಮನಾರ್ಹ.

★★

---

೧. ಲೋಕೋತ್ತರೋತ್ತರಾನ್ (ಪಾ.) ;ವಿಷ್ಣುಪುರಾಣ (೧/೧೧/೪೯)
೨. ಯೇಽರ್ಚಯಂತಿ (ಪಾ.) ; ೩. ವ್ರಜಂತಿ ತೇ (ಪಾ.)

## ಹರಿಸ್ಮರಣೆಯಿಂದ ಮುಕ್ತಿ ಲಭಿಸುವ ರೀತಿ

**ತತೋಽನಿರುದ್ಧಂ ದೇವೇಶಂ ಪ್ರದ್ಯುಮ್ನಂ ಚ ತತಃ ಪರಮ್ ।**
**ತತಃ ಸಂಕರ್ಷಣಂ ದೇವಂ ವಾಸುದೇವಂ ಪರಾತ್ ಪರಮ್ ॥ ೩೦ ॥**

**ವಾಸುದೇವಾತ್ ಪರಂ ನಾಸ್ತಿ ಇತಿ ವೇದಾಂತನಿಶ್ಚಯಃ ।**
**ವಾಸುದೇವಂ ಪ್ರವಿಷ್ಟಾನಾಂ ಪುನರಾವರ್ತನಂ ಕುತಃ ॥ ೩೧ ॥**

**ಅ:** ಬಳಿಕ ದೇವೇಶನಾದ ಅನಿರುದ್ಧನನ್ನು, ಆ ಬಳಿಕ ಪ್ರದ್ಯುಮ್ನನನ್ನು, ಅನಂತರ ದೇವನಾದ ಸಂಕರ್ಷಣನನ್ನು, ಪರಾತ್ಪರನಾದ ವಾಸುದೇವನನ್ನು ಹೊಂದುವರು; ವಾಸುದೇವನಿಗಿಂತ ಮಿಗಿಲಾದ ಮತ್ತೊಬ್ಬನಿಲ್ಲ ಎಂಬುದು ವೇದಾಂತಗಳ ಸಿದ್ಧಾಂತ; ವಾಸುದೇವನನ್ನು ಪ್ರವೇಶಿಸಿದವರಿಗೆ ಪುನರಾವರ್ತನೆ ಎಲ್ಲಿಯದು ?

ವಿ: ೧. ಇವೂ ಸಹ ವಿಷ್ಣುಪುರಾಣದಲ್ಲಿಯ ಪುಲಸ್ತ್ಯರ ವಚನಗಳು. ಶ್ರೀಹರಿಯನ್ನು ಆರಾಧಿಸುವವನು ಮೋಕ್ಷಪಡೆಯುವ ಬಗೆಯನ್ನು ಇಲ್ಲಿ ತಿಳಿಸಿರುವರು. ಅನಿರುದ್ಧ ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸುದೇವ ಎಂಬ ಕ್ರಮದಲ್ಲಿ ಶ್ರೀಹರಿಯ ರೂಪಗಳನ್ನು ಹೊಂದುವನು ಎಂದರ್ಥ. ವಾಸುದೇವ ರೂಪದ ಶ್ರೀಹರಿಯನ್ನು ಸಮೀಪಿಸಿದಾಗ ಮುಕ್ತಿ ಖಚಿತ. ವಾಸುದೇವರೂಪವೇ ಮೋಕ್ಷದಾಯಕವಾದ ಭಗವದ್ರೂಪವಿಶೇಷ ಎಂಬುದು ಪ್ರಸಿದ್ಧವಾದುದು : ಇತ್ಥಂ ವಿಚಿಂತ್ಯ ಪರಮಃ ಸ ತು ವಾಸುದೇವನಾಮಾ ಬಭೂವ ನಿಜಮುಕ್ತಿಪದಪ್ರದಾತಾ (ಮಹಾಭಾರತತಾತ್ಪರ್ಯನಿರ್ಣಯ). ಮಹಾವಿಷ್ಣುವು ತನ್ನ ನಾರಾಯಣರೂಪದಿಂದ ಮೊದಲು ಪ್ರಕಟಿಸಿದ ರೂಪ ವಾಸುದೇವರೂಪ ಎಂಬ ವಿವರವು ಅಲ್ಲಿದೆ.

೨. ವಾಸುದೇವರೂಪವನ್ನು ಹೊಂದಿ ಮೋಕ್ಷ ಪಡೆದವನಿಗೆ ಪುನರಾವರ್ತನೆ ಇಲ್ಲ ಎಂಬ ಮಾತು ಶಾಸ್ತ್ರಪ್ರಸಿದ್ಧವಾದುದು : **ನ ಚ ಪುನರಾವರ್ತತೇ ನ ಚ ಪುನರಾವರ್ತತೇ**[೧]**; ಅನಾವೃತ್ತಿಃ ಶಬ್ದಾತ್ ಅನಾವೃತ್ತಿಃ ಶಬ್ದಾತ್**[೨].

೩. ಈ ಎರಡು ಶ್ಲೋಕಗಳಲ್ಲಿ ನಿರೂಪಿತವಾಗಿರುವ ವಿವರ ತೈತ್ತಿರೀಯೋಪನಿಷತ್ತಿನಲ್ಲಿ ಬಂದಿರುವ ಅನ್ನಮಯಾದಿ ರೂಪಗಳ ಪ್ರಾಪ್ತಿಯ ವಿವರಣರೂಪದಂತಿರುವುದು ಗಮನಾರ್ಹ.

★★

---

೧. ಛಾಂದೋಗ್ಯೋಪನಿಷತ್
೨. ಬ್ರಹ್ಮಸೂತ್ರ

## ಸ್ತ್ರೀಪುರುಷರೆಲ್ಲರಿಗೂ ಶ್ರೀಹರಿಯ ಆರಾಧನೆಯೇ ವಿಹಿತ

**ಅತ್ರಿಃ**

**ಯೋ ಯಾನಿಚ್ಛೇನ್ನರಃ ಕಾಮಾನ್ ನಾರೀ ವಾ ವರವರ್ಣಿನೀ ।**
**ತಾನ್ ಸಮಾಪ್ನೋತಿ ವಿಪುಲಾನ್ ಸಮಾರಾಧ್ಯ ಜನಾರ್ದನಮ್[೧] ॥ ೩೨ ॥**

**ಅ:** ಪುರುಷನೇ ಆಗಲಿ, ಸ್ತ್ರೀಯೇ ಆಗಲಿ ತಾವು ಬಯಸುವ ಸಕಲಕಾಮನೆಗಳನ್ನು ಜನಾರ್ದನನಾದ ಶ್ರೀಹರಿಯನ್ನು ಆರಾಧಿಸಿದರೆ ಸಂಪೂರ್ಣವಾಗಿ ಪಡೆದು-ಕೊಳ್ಳುವರು.

**ವಿ:** ೧. ಇದು ವಿಷ್ಣುಪುರಾಣದಲ್ಲಿನ ಅತ್ರಿಮುನಿಗಳ ವಚನ. ಪುರುಷರಂತೆ ಸ್ತ್ರೀಯರೂ ಸಹ ಶ್ರೀಹರಿಯನ್ನೇ ಆರಾಧಿಸಬೇಕು ಎನ್ನುವ ವಿಶೇಷಾಂಶ ಇಲ್ಲಿದೆ. ಶ್ರೀಹರಿಯ ಆರಾಧನೆ ಸಕಲರಿಗೂ ಸರ್ವಕಾಮನೆಗಳ ಪರಿಪೂರ್ಣಪ್ರಾಪ್ತಿಗೆ ಅತ್ಯಂತ ಖಚಿತವಾದ ಏಕಮಾತ್ರ ಸಾಧನ ಎಂಬ ಸ್ಫುಟ ನಿರೂಪಣೆ ಇಲ್ಲಿದೆ.

೨. ಇಲ್ಲಿ **ನರಃ, ನಾರೀ** ಎಂಬುದಾಗಿ ಏಕವಚನವನ್ನು ಪ್ರಯೋಗಿಸುವ ಮೂಲಕ ಶ್ರೀಹರಿಯನ್ನು ಆರಾಧಿಸುವ ಸ್ತ್ರೀಪುರುಷರ ಸಂಖ್ಯೆ ತುಂಬ ವಿರಳ ಎನ್ನುವ ವಿಶೇಷಾಂಶವೂ ಸೂಚಿತ ಎಂದು ತಿಳಿಯಬೇಕು:

**'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇತ್ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥' - ಗೀತಾ(೭/೩)**

೩. ವರವರ್ಣಿನೀ ಎಂದರೆ ಉತ್ತಮ ಸ್ತ್ರೀ. ಪತಿವ್ರತಾ ಸ್ತ್ರೀ ಎಂದರ್ಥ:

**'ಉತ್ತಮಾ ವರವರ್ಣಿನೀ' ಇತ್ಯಮರೋಕ್ತೇಃ ॥ -**
**'ಶೀತೇ ಸುಖೋಷ್ಣಸರ್ವಾಂಗೀ ಗ್ರೀಷ್ಮೇ ಯಾ ಸುಖಶೀತಲಾ ।**
**ಭರ್ತೃರಕ್ತಾ ಚ ಯಾ ನಾರೀ ಸಾ ನಾರೀ ವರವರ್ಣಿನೀ ॥' ಇತಿ ವಚನಾತ್ (ಉ)**

೪. ಸಕಲಕಾಮನೆಗಳು ಶ್ರೀಹರಿಯ ಆರಾಧನೆಯಿಂದ ಲಭ್ಯ ಎಂದು ತಿಳಿಸುವ ಶ್ರೀಮದ್ಭಾಗವತವಚನ ಹೀಗಿದೆ (೨/೩/೧೦):

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ॥**

**ಅಕಾಮೋ ಧರ್ಮಕಾಮೋ ವಾ ಮೋಕ್ಷಕಾಮೋಽಪಿ ವಾ ಭವೇತ್ ।**
**ಅಥವಾ ಸರ್ವಕಾಮೋ ಯಃ ಸ ವಿಷ್ಣುಂ ಪುರುಷಂ ಯಜೇತ್ ॥**
**- ಸ್ಕಾಂದವಚನ (ಭಾ.ತಾ. ೨/೩/೧೦)**

---

೧. ಆತ್ರೇಯಃ ( ಪಾ.) ;

## ಶ್ರೀಹರಿಯ ಹೊರತು ಸದ್ಗತಿ ಲಭಿಸದು

### ಬ್ರಹ್ಮಾ

**ಬಾಹುಭ್ಯಾಂ ಸಾಗರಂ ತರ್ತುಂ ಕ ಇಚ್ಛೇತ ಪುಮಾನ್ ಭುವಿ।**
**ವಾಸುದೇವಮನಾರಾಧ್ಯ ಕೋ ಮೋಕ್ಷಂ ಗಂತುಮಿಚ್ಛತಿ ॥ ೩೩ ॥**

**ಅ:** ತೋಳುಗಳಿಂದ ಈಜಿ ಸಾಗರವನ್ನು ದಾಟಲು ಯಾವ ಮನುಷ್ಯ ತಾನೆ ಬಯಸಿಯಾನು? ವಾಸುದೇವನನ್ನು ಆರಾಧಿಸದೇ ಯಾವನು ತಾನೇ ಮೋಕ್ಷಕ್ಕೆ ತೆರಳಲು ಇಚ್ಛಿಸಿಯಾನು ?

ವಿ: ೧. ತೋಳುಗಳಿಂದ ಈಜಿ ಸಮುದ್ರವನ್ನು ದಾಟಬಯಸುವುದು ಎಂತಹ ಮೂರ್ಖತನವೋ ಅಂತಹುದೇ ಮೂರ್ಖತನ ಶ್ರೀಹರಿಯನ್ನು ಆರಾಧಿಸದೇ ಮೋಕ್ಷಪಡೆಯುವ ಪ್ರಯತ್ನ ಎಂದರ್ಥ.

೨. ಶ್ರೀಹರಿಯ ಎಲ್ಲ ರೂಪಗಳೂ ಸಮವೇ ಆದರೂ ಮೋಕ್ಷ ನೀಡುವ ರೂಪ ಎಂಬ ಕಾರಣದಿಂದ **ವಾಸುದೇವ** ಎಂಬ ಪದವನ್ನು ಪ್ರಯೋಗಿಸಿರುವರು ಎಂದು ತಿಳಿಯಬೇಕು.

೩. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದ ಮಾತು ಇದರ ಭಾವದ ವಿವರಣೆ-ಯಂತಿರುವುದು ಗಮನಾರ್ಹ :

**ಸೂಸಿಬಹನದಿಯೊಳಗೆ ತನ್ನ ಸ-**
**ಹಾಸ ತೋರುವೆನೆಂದು ಜಲಕಿದಿ-**
**ರೀಸಿದರೆ ಕೈಸೋತು ಮುಳುಗುವ ಹರಿಯ ಬಿಟ್ಟವನು।**
**ಕ್ಲೇಶವೈದುವನಾದಿಯಲಿ ಸ-**
**ರ್ವೇಶ ಕ್ಲೃಪ್ತಿಯ ಮಾಡಿದುದ ಬಿ-**
**ಟ್ಟಾಸೆಯಿಂದಲಿ ಅನ್ಯರಾರಾಧಿಸುವ ಮಾನವನು ॥ -ಸರ್ವಪ್ರತೀಕಸಂಧಿ(೧೨)**

★★

### ಶ್ರೀಹರಿಯನ್ನು ಆರಾಧಿಸದವರು ಸದಾ ದುಃಖಿಗಳು

**ಅನಾರಾಧಿತಗೋವಿಂದಾ ಯೇ ನರಾ ದುಃಖಭಾಗಿನಃ।**
**ಆರಾಧ್ಯ ವಾಸುದೇವಂ ಸ್ಯುರ್ನಿತ್ಯಾನಂದೈಕಭಾಗಿನಃ ॥ ೩೪ ॥**

**ಅ:** ಗೋವಿಂದನನ್ನು ಆರಾಧಿಸದ ನರರು ದುಃಖಭಾಗಿಗಳು; ವಾಸುದೇವ-ನನ್ನು ಆರಾಧಿಸಿ ನಿತ್ಯಾನಂದಕ್ಕೆ ಮುಖ್ಯಪಾತ್ರರಾಗುವರು.

ವಿ: ೧. ಗೋವಿಂದನನ್ನು ಆರಾಧಿಸದಿರುವುದು ದುಃಖಕ್ಕೆ ಕಾರಣ; ಆರಾಧಿಸುವುದು ನಿತ್ಯಸುಖಕ್ಕೆ ಕಾರಣ ಎಂಬ ಇಲ್ಲಿಯ ಅನ್ವಯವ್ಯತಿರೇಕವು ಗಮನಾರ್ಹ. ಗೋವಿಂದನನ್ನು ಆರಾಧಿಸುವುದು ಆರಾಧಿಸದೇ ಇರುವುದು ಸುಖದುಃಖಗಳ ಪ್ರಾಪ್ತಿಗೆ ಮುಖ್ಯಸಾಧನ. ಆದ್ದರಿಂದ ಆರಾಧಿಸುವುದು ಅತ್ಯಂತ ಮುಖ್ಯವಾದ ಕರ್ತವ್ಯ ಎಂದರ್ಥ. ಮೋಕ್ಷಬಯಸುವವರಿಗೆ ಶ್ರೀಹರಿಯ ಆರಾಧನೆಯ ಹೊರತು ಮತ್ತೊಂದು ಉಪಾಯ ಸರ್ವಥಾ ಇಲ್ಲ ಎಂದು ಭಾವ.

೨. ನಿತ್ಯಾನಂದ ಎಂದರೆ ಮೋಕ್ಷ ಎಂದರ್ಥ. ಮೋಕ್ಷವನ್ನು ನಿತ್ಯಾನಂದ ಎಂದು ಕರೆಯುವ ಮೂಲಕ ಕೆಲವರು ತಿಳಿದಿರುವಂತೆ ಮೋಕ್ಷವೆಂದರೆ ಕೇವಲ ದುಃಖದಿಂದ ಬಿಡುಗಡೆ ಮಾತ್ರವೇ ಅಲ್ಲ. ಮುಖ್ಯವಾಗಿ ಅದು ಸಂಪೂರ್ಣಸುಖದ ಅನುಭವ ಎಂಬ ಮುಕ್ತಿಯ ಮುಖ್ಯಲಕ್ಷಣವೂ ಸಹ ಇದರಿಂದ ಸೂಚಿತ ಎಂದು ತಿಳಿಯಬೇಕು.

೩. ಈ ಶ್ಲೋಕ ಹಾಗೂ ಇದರ ಹಿಂದಿನ ಶ್ಲೋಕ ಎರಡೂ ಸಹ ಬ್ರಹ್ಮದೇವರ ವಚನಗಳು.

★★

## ಶ್ರೀಹರಿಯ ಸ್ಮರಣೆ ಸಕಲಪಾಪಗಳಿಗೂ ಪ್ರಾಯಶ್ಚಿತ್ತ

### ಶಂಕರಃ

**ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್[೧] ॥ ೩೫ ॥**

ಅ: ಪಾಪಮಾಡಿದ ಬಳಿಕ ಯಾವ ವ್ಯಕ್ತಿಗೆ ಪಶ್ಚಾತ್ತಾಪ ಹುಟ್ಟುವುದೋ, ಅವನಿಗೆ ಶ್ರೀಹರಿಯ ಸಂಸ್ಮರಣೆಯೇ ಶ್ರೇಷ್ಠವಾದ ಪ್ರಾಯಶ್ಚಿತ್ತ ಎಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ.

ವಿ: ೧. ಪಾಪಮಾಡಿದ ಬಳಿಕ ಅದನ್ನು ಪರಿಹರಿಸಿಕೊಳ್ಳುವುದು ವಿವೇಕಿಯ ಕರ್ತವ್ಯ. ಅಂತಹ ಪ್ರಾಯಶ್ಚಿತ್ತಕ್ಕೆ ಪ್ರಥಮ ಅರ್ಹತೆ ಪಶ್ಚಾತ್ತಾಪ; ಅನಂತರದ್ದು ಪ್ರಾಯಶ್ಚಿತ್ತ. ಅಂತಹ ಪ್ರಾಯಶ್ಚಿತ್ತ ಬಹು ಬಗೆಯಾದುದು; ಆದರೆ ಸಕಲ ಪ್ರಾಯಶ್ಚಿತ್ತಗಳಿಗೂ ಅತ್ಯಂತ ಪ್ರಧಾನವಾದ ಅಂಗ ಶ್ರೀಹರಿಯ ಸ್ಮರಣೆ ಎಂದರ್ಥ.

೨. ಪ್ರತಿಯೊಂದು ಪಾಪಕ್ಕೂ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತ ವಿಹಿತವಾಗಿವೆ; ಆದರೆ ಯಾಂತ್ರಿಕವಾದ ಪ್ರಾಯಶ್ಚಿತ್ತದಿಂದ ಮಾತ್ರವೇ ಪಾಪ ಪರಿಹಾರ ಆಗದು; ಮುಖ್ಯವಾಗಿ ಪಾಪಪರಿಹಾರದ ಸಾಧನ ಶ್ರೀಹರಿಸ್ಮರಣೆ ಎಂಬುದು ಇಲ್ಲಿಯ ವಿಶೇಷಾಂಶ.

---

೧. ಅಗ್ನಿಪುರಾಣ ೧೭೪-೮ । ವಿಷ್ಣುಪುರಾಣ ೨-೬-೩೮ ॥

೩. ಶ್ರೀಮದ್ಭಾಗವತಪುರಾಣದ ಅಜಾಮಿಳೋಪಾಖ್ಯಾನ ಇದಕ್ಕೆ ಅತ್ಯುತ್ತಮ ನಿದರ್ಶನ. ಅಂತ್ಯಕಾಲದಲ್ಲಿ ಭಕ್ತಿಪೂರ್ವಕವಾಗಿ ಮಾಡಿದ ಹರಿಸ್ಮರಣೆಯಿಂದಾಗಿ ಅಜಾಮಿಳ ತಾನು ಮಾಡಿದ ಸಕಲ ಘೋರಪಾತಕಗಳಿಂದ ಆ ಕ್ಷಣದಲ್ಲಿಯೇ ಬಿಡುಗಡೆ ಪಡೆದ ವಿವರ ಅಲ್ಲಿ ಬಂದಿದೆ.

★★

## ಅಯೋಗ್ಯರಿಗೆ ಶ್ರೀಹರಿಯ ಸ್ಮರಣೆ ಕೀರ್ತನೆಗಳು ದುರ್ಲಭ

**ನ ಹ್ಯಪುಣ್ಯವತಾಂ ಲೋಕೇ ಮೂಢಾನಾಂ ಕುಟಿಲಾತ್ಮನಾಮ್ ।**
**ಭಕ್ತಿರ್ಭವತಿ ಗೋವಿಂದೇ ಸ್ಮರಣಂ ಕೀರ್ತನಂ ತಥಾ ॥ ೩೬ ॥**

**ಅ**: ಮೂರ್ಖರೂ, ಕುಟಿಲಮನಸ್ಕರೂ, ಪುಣ್ಯಹೀನರೂ ಆದವರಿಗೆ ಲೋಕದಲ್ಲಿ ಶ್ರೀಗೋವಿಂದನಲ್ಲಿ ಭಕ್ತಿಯಾಗಲೀ, ಅವನ ಸ್ಮರಣೆಯಾಗಲೀ, ಅವನ ಕೀರ್ತನೆಯಾಗಲೀ ಸರ್ವಥಾ ಲಭಿಸವು.

ವಿ: ೧. ಶ್ರೀಹರಿಯಲ್ಲಿನ ಭಕ್ತಿ, ಸ್ಮರಣೆ, ಕೀರ್ತನೆಗಳು ಅತ್ಯಂತ ತಾರಕ. ಆದರೆ ಅವು ಲಭಿಸಲು ವಿಶೇಷ ಪುಣ್ಯ ಮಾಡಿರಬೇಕು. ಜ್ಞಾನ ಹುಟ್ಟಿರಬೇಕು. ಮನಸ್ಸು ಶುದ್ಧವಾಗಿರಬೇಕು. ಹಾಗಿಲ್ಲದವರಿಗೆ ಎಂದೂ ಶ್ರೀಹರಿಯಲ್ಲಿ ನಿಜವಾದ ಭಕ್ತಿ ಹುಟ್ಟದು ಎಂದರ್ಥ.

೨. ಪಾಪ ಮಾಡಿದವರೆಲ್ಲ ಹರಿಸ್ಮರಣೆಯಿಂದ ಸುಲಭವಾಗಿ ಪಾಪಪರಿಹಾರವನ್ನು ಹೊಂದಬಹುದಲ್ಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಪಾಪಗಳು ಹರಿಸ್ಮರಣೆಗೆ ಪ್ರತಿ-ಬಂಧಕವಾದ್ದರಿಂದ ಅವುಗಳನ್ನು ಮಾಡದಿರುವುದೇ ನಿಜವಾದ ವಿವೇಕ. ಅನಿವಾರ್ಯ ಕಾರಣಗಳಿಂದ ಅವು ಘಟಿಸಿದಲ್ಲಿ ಹರಿಸ್ಮರಣೆಯಿಂದ ಪರಿಹಾರವಾಗುವವು ಎಂದರ್ಥ.

★★

## ಶ್ರೀಹರಿಯ ಸ್ಮರಣೆಯಿಂದ ಸಕಲದುಃಖಗಳ ಪರಿಹಾರ

**ತದೈವ ಪುರುಷೋ ಮುಕ್ತೋ ಜನ್ಮಮೃತ್ಯುಜರಾದಿಭಿಃ[೧] ।**
**ಜಿತೇಂದ್ರಿಯೋ ವಿಶುದ್ಧಾತ್ಮಾ ಯದೈವ ಸ್ಮರತೇ ಹರಿಮ್ ॥ ೩೭ ॥**

**ಅ**: ಜಿತೇಂದ್ರಿಯನಾಗಿ ನಿರ್ಮಲಮನಸ್ಸಿನಿಂದ ಮನುಷ್ಯನಾದವನು ಯಾವಾಗ ಶ್ರೀಹರಿಯನ್ನು ಸ್ಮರಿಸುವನೋ, ಆಗಲೇ ಅವನು ಹುಟ್ಟು ಸಾವು ಮುಪ್ಪು ಮೊದಲಾದವುಗಳಿಂದ ಬಿಡುಗಡೆ ಹೊಂದುವನು.

---

೧. ಜನ್ಮದುಃಖಜರಾದಿಭಿಃ ( ಪಾ.) ; ೨. 'ವಿಷ್ಣುಂ' (ಪಾ.)

ವಿ: ೧. ಹುಟ್ಟುಸಾವು ಮುಪ್ಪು ಮೊದಲಾದವುಗಳು ಜೀವಿಯನ್ನು ಬಾಧಿಸುವ ಅತ್ಯಂತ ಪ್ರಧಾನದುಃಖಗಳು. ಅವುಗಳಿಂದ ಬಿಡುಗಡೆ ಹೊಂದಲು ಶ್ರೀಹರಿಸ್ಮರಣೆಯೊಂದೇ ಸಾಧನ. ಅಂತಹ ಸ್ಮರಣೆಗೆ ಜಿತೇಂದ್ರಿಯತ್ವ ಅಂತಃಕರಣಶುದ್ಧಿಗಳೇ ಮುಖ್ಯಸಾಧನ ಎಂದು ಭಾವ.

೨. ಇದರಲ್ಲೂ ಸಹ ಜನ್ಮ ಮೃತ್ಯು ಮೊದಲಾದವುಗಳಿಂದ ಬಿಡುಗಡೆ ಹೊಂದುವುದೇ ಮುಕ್ತಿ ಎಂಬ ಮುಕ್ತಿಯ ಲಕ್ಷಣ ನಿರೂಪಿತವಾಗಿದೆ. ಆನಂದಪ್ರಾಪ್ತಿ ಮುಕ್ತಿಯ ಒಂದು ಮುಖವಾದರೆ, ಸಕಲದುಃಖನಿವೃತ್ತಿ ಅದರ ಇನ್ನೊಂದು ಮುಖ ಎಂದು ತಾತ್ಪರ್ಯ.

★★

## ಶ್ರೀಹರಿಯ ಸ್ಮರಣೆ ಕಲಿಯುಗದಲ್ಲಿ ದುರ್ಲಭ

**ಪ್ರಾಪ್ತೇ ಕಲಿಯುಗೇ ಘೋರೇ ಧರ್ಮಜ್ಞಾನವಿವರ್ಜಿತೇ ।**
**ನ ಕಶ್ಚಿತ್ ಸ್ಮರತೇ ಲೋಕೇ ಕೃಷ್ಣಂ[೨] ಕಲಿಮಲಾಪಹಮ್ ॥ ೩೮ ॥**

**ಅ:** ಧರ್ಮಜ್ಞಾನಗಳಿಂದ ರಹಿತವಾದ ಘೋರವಾದ ಕಲಿಯುಗದಲ್ಲಿ ಕಲಿಯ ದೋಷವನ್ನು ಪರಿಹರಿಸುವ ಶ್ರೀಕೃಷ್ಣನನ್ನು ಯಾವನೂ ಸಹ ಸ್ಮರಿಸುವುದೇ ಇಲ್ಲ!

ವಿ: ೧. ಹರಿಸ್ಮರಣೆ ಹೀಗೆ ತಾರಕವಾದರೂ ಅದರ ಪ್ರಯೋಜನ ಪಡೆಯಲು ಕಲಿಯುಗದ ಜನಗಳಿಗೆ ಸಾಧ್ಯವಾಗುವುದಿಲ್ಲ; ಅದಕ್ಕೆ ಜನ ಧರ್ಮಜ್ಞಾನಗಳಿಂದ ರಹಿತ-ರಾಗಿರುವುದೇ ಕಾರಣ ಎಂದರ್ಥ.

೨. ಧರ್ಮಜ್ಞಾನಗಳ ಪರಿಜ್ಞಾನ ಶ್ರೀಹರಿಸ್ಮರಣೆಗೆ ಸಾಧನ ಎಂಬ ವಿಶೇಷಾಂಶ ಇಲ್ಲಿ ಸೂಚಿತ

೩. **'ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವು'** ಎಂಬ ಶ್ರೀಪುರಂದರದಾಸರ ವಚನ ಇದರ ವಿವರಣೆಯಂತಿದೆ.

೪. ಕಲಿಯುಗದಲ್ಲಿ ಸಜ್ಜನರ ಸಂಖ್ಯೆ ವಿರಳ ಎಂಬ ಹಿನ್ನಲೆಯಲ್ಲಿ ಶ್ರೀಮದಾ-ಚಾರ್ಯರು ತಾವು ಬ್ರಹ್ಮಸೂತ್ರಗಳಿಗೆ ಭಾಷ್ಯ ರಚಿಸುವುದು ನಾಯಿಗಳಿಗೆ ಹವಿಸ್ಸು ನೀಡಿದಂತಾಗುವುದು ಎಂದು ನುಡಿದ ಮಧ್ವವಿಜಯದ ವಿವರ ಅರ್ಥವತ್ತಾಗುತ್ತದೆ.

★★

## ಕಲಿಯುಗದಲ್ಲಿ ಶ್ರೀಹರಿಯ ಸ್ಮರಣೆ ಮಾಡುವವರು ವಿರಳ

**ನ ಕಲೌ ದೇವದೇವಸ್ಯ ಜನ್ಮದುಃಖಾಪಹಾರಿಣಃ[೧] ।**
**ಕರೋತಿ ಮರ್ತ್ಯೋ ಮೂಢಾತ್ಮಾ ಸ್ಮರಣಂ ಕೀರ್ತನಂ ಹರೇಃ ॥ ೩೯ ॥**

---

೧. 'ಸರ್ವದುಃಖಾಪಹಾರಿಣಃ' (ಪಾ.)

ಅ: ಕಲಿಯುಗದಲ್ಲಿ ಹುಟ್ಟು ಮೊದಲಾದ ದುಃಖಗಳನ್ನು ಪರಿಹರಿಸುವ ದೇವ-ದೇವನಾದ ಶ್ರೀಹರಿಯ ಸ್ಮರಣೆ ಕೀರ್ತನೆಗಳನ್ನು ಮೂರ್ಖಮಾನವನು ಮಾಡಲಾರ.

ವಿ: ಕಲಿಯುಗದಲ್ಲಿ ಮೂರ್ಖರ ಸಂಖ್ಯೆ ಹೆಚ್ಚು ಆದ್ದರಿಂದ ಹರಿಸ್ಮರಣೆ ಅಲ್ಲಿ ಹೆಚ್ಚಿನವರಿಗೆ ಸಾಧ್ಯವಾಗುವುದಿಲ್ಲ ಎಂದರ್ಥ.

★★

### ಶ್ರೀಹರಿಯ ಸ್ಮರಣೆಯನ್ನು ಮಾಡುವವರಿಗೆ ಸದ್ಗತಿ ಖಚಿತ

**ಯೇ ಸ್ಮರಂತಿ ಸದಾ ವಿಷ್ಣುಂ ವಿಶುದ್ಧೇನಾಂತರಾತ್ಮನಾ ।**
**ತೇ ಪ್ರಯಾಂತಿ ಭವಂ[1] ತ್ಯಕ್ತ್ವಾ ವಿಷ್ಣುಲೋಕಮನಾಮಯಮ್ ೪೦**

ಅ: ಯಾರು ಅತ್ಯಂತನಿರ್ಮಲವಾದ ಮನಸ್ಸಿನಿಂದ ಸದಾ ವಿಷ್ಣುವನ್ನು ಸ್ಮರಿಸುವರೋ ಅವರು ಸಂಸಾರದಿಂದ ಪಾರಾಗಿ ನಿರ್ದೋಷವಾದ ವಿಷ್ಣುಲೋಕಕ್ಕೆ ತೆರಳುವರು.

ವಿ: ೧. ನಿರ್ಮಲವಾದ ಮನಸ್ಸು ಹಾಗೂ ಸದಾ ವಿಷ್ಣುಸ್ಮರಣೆ ಇವು ಮುಕ್ತಿಯ ಸಾಧನಗಳು ಎಂದು ಭಾವ.

೨. ಸರ್ವದಾ ವಿಷ್ಣುಸ್ಮರಣೆ ಮೋಕ್ಷಸಾಧಕ ಎಂದರ್ಥ. ಭಗವದ್ಗೀತೆಯ ಎಂಟನೆಯ ಅಧ್ಯಾಯದ – **ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ** (೮/೭) ಶ್ಲೋಕದ ವಿವರಣೆಯಂತೆ ಈ ಶ್ಲೋಕ ಇರುವುದು ಗಮನಾರ್ಹ; ಅಲ್ಲಿಯ ಭಾಷ್ಯದ ವಿವರಗಳನ್ನೂ ಸಹ ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

★★

### ಶ್ರೀಹರಿಯ ಸ್ಮರಣೆ ಸಕಲ ಆಪತ್ತುಗಳಿಗೆ ಪರಿಹಾರ

**ಗರ್ಭದುಃಖಜರಾರೋಗಜನ್ಮಸಂಸಾರಬಂಧನೈಃ ।**
**ನ ಬಾಧ್ಯತೇ ನರೋ ನಿತ್ಯಂ ವಾಸುದೇವಮನುಸ್ಮರನ್[2] ॥ ೪೧ ॥**

ಅ: ನಿತ್ಯದಲ್ಲೂ ವಾಸುದೇವನನ್ನು ಸ್ಮರಿಸುವ ಮಾನವನು ಗರ್ಭವಾಸದ ದುಃಖ, ಮುಪ್ಪು, ರೋಗಗಳು, ಹುಟ್ಟು ಮೊದಲಾದ ಸಂಸಾರಬಂಧನಗಳಿಂದ ಪೀಡಿತನಾಗು-ವುದಿಲ್ಲ.

---

೧. 'ಭಯಂ' (ಪಾ)

೨. ಗರ್ಭಜನ್ಮಜರಾರೋಗದುಃಖಸಂಸಾರಬಂಧನೈಃ ।
ನರೋ ನ ಬಾಧ್ಯತೇ ನಿತ್ಯಂ ನಾರಾಯಣಮನುಸ್ಮರನ್ ॥ ( ಪಾ.)

ವಿ: ೧. ಇದರಲ್ಲಿ ಗರ್ಭವಾಸದ ದುಃಖ, ಮುಪ್ಪು, ರೋಗ, ಹುಟ್ಟು, ಸಾವು ಮೊದಲಾದವುಗಳು ಸಂಸಾರಬಂಧನದ ಸ್ವರೂಪ ಎಂಬ ಮುಖ್ಯವಿವರ ಬಂದಿದೆ; ಅದಕ್ಕೆ ಪರಿಹಾರವಾಗಿ ವಾಸುದೇವನ ಸದಾ ಸ್ಮರಣೆ ವಿಹಿತವಾಗಿದೆ.

೨. ಹಿಂದೆ ಹೇಳಿದಂತೆ ವಾಸುದೇವರೂಪವು ಮೋಕ್ಷಪ್ರದಾಯಕವಾದ ರೂಪ ಎಂಬ ಹಿನ್ನೆಲೆಯಲ್ಲಿ ಅದರ ಸ್ಮರಣೆಗೆ ವಿಶೇಷ ಮಹತ್ತ್ವ ಎಂದು ತಿಳಿಯಬೇಕು.

★★

## ಹರಿಸ್ಮರಣೆ ಮಾಡುವವರಿಗೆ ನರಕಾದಿಗಳ ಭಯವಿಲ್ಲ

**ಯಮಮಾರ್ಗಂ ಮಹಾಘೋರಂ ನರಕಾಣಿ ಯಮಂ ತಥಾ ।**
**ಸ್ವಪ್ನೇऽಪಿ ನೈವ ಪಶ್ಯೇತ್[1] ಯಃ ಸ್ಮರೇದ್ಗರುಡಧ್ವಜಮ್ ॥ ೪೨ ॥**

ಅ: ಯಾವನು ಗರುಡಧ್ವಜನಾದ ಶ್ರೀಹರಿಯನ್ನು ಸ್ಮರಿಸುವನೋ ಅವನು ಅತ್ಯಂತ ಭಯಂಕರವಾದ ಯಮಲೋಕದ ಮಾರ್ಗವನ್ನಾಗಲೀ, ನರಕಗಳ-ನ್ನಾಗಲೀ, ಯಮನನ್ನಾಗಲೀ ಸ್ವಪ್ನದಲ್ಲೂ ನೋಡಲಾರ.

ವಿ: ೧. ಹರಿಸ್ಮರಣೆಯ ಫಲವನ್ನಾಗಿ ನರಕಾದಿಗಳ ಪರಿಹಾರವನ್ನು ಇಲ್ಲಿ ತಿಳಿಸಿರುವರು. ಯಮಲೋಕದ ಹಾದಿಯಲ್ಲಿ ಸಾಗುವುದು ನರಕಗಳನ್ನು ಹೊಂದುವುದು ಯಮನನ್ನು ಕಾಣುವುದು ಅತ್ಯಂತ ಘೋರಪ್ರಸಂಗಗಳು. ಅವುಗಳ ಪರಿಹಾರಕ್ಕಾಗಿ ಶ್ರೀಹರಿಯ ಸ್ಮರಣೆ ಕರ್ತವ್ಯ.

೨. ಶ್ರೀಹರಿಯ ಸ್ಮರಣೆ ನರಕದ ದರ್ಶನವನ್ನು ಸ್ವಪ್ನದಲ್ಲೂ ಸಹ ತಪ್ಪಿಸುವುದು ಎನ್ನುವ ಮೂಲಕ ದುಃಸ್ವಪ್ನಗಳೂ ಸಹ ಹರಿಯನ್ನು ಸ್ಮರಿಸುವವನಿಗೆ ಕಾಣಲಾರವು ಎಂಬ ವಿಶೇಷಾಂಶ ಸೂಚಿತ.

★★

## ಮೋಕ್ಷ ಪಡೆಯುವ ಉಪಾಯ

**[2]ಹೃದಿ ರೂಪಂ ಮುಖೇ ನಾಮ ನೈವೇದ್ಯಮುದರೇ ಹರೇಃ ।**
**ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋऽಚ್ಯುತಃ[3] ೪೩**

---

೧. ಸ್ವಪ್ನೇऽಪಿ ಚ ನ ಪಶ್ಯೇತ ( ಪಾ.)

೨. ಸ್ಕಾಂದ ಪುರಾಣ ೨-೩.-೫-೪೫ ॥ ಸ್ಕಾಂದಪುರಾಣ( ವೈಷ್ಣವಖಂಡ ೫/೪೬)

೩.. ಅಚ್ಯುತಶ್ಚ್ಯುತಿರಹಿತೋ ಮುಕ್ತೋ ಭವತಿ ॥ (ತಾ) । ಸಃ ಪುರುಷಃ ಅಚ್ಯುತಃ ಜ್ಞಾನಭಕ್ತ್ಯಾದಿನಾ ಚ್ಯುತಿರಹಿತಃ ಯೋಗ್ಯಪದಾದ್ವಾ । ಅಚ್ಯುತಸಾರೂಪ್ಯಾದಿಮಾನ್ ವಾ (ಉ) ॥ ಸಃ ಅಚ್ಯುತಃ ಅಚ್ಯುತಾಧೀನಸತ್ತಾಕಃ। "ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ" ಇತ್ಯಾಚಾರ್ಯೋಕ್ತೇಃ ॥

ಅ: ಹೃದಯದಲ್ಲಿ ಶ್ರೀಹರಿಯ ರೂಪ; ಬಾಯಲ್ಲಿ ಅವನ ನಾಮ; ಉದರದಲ್ಲಿ ಅವನ ನೈವೇದ್ಯ; ಶಿರಸ್ಸಿನಲ್ಲಿ ಅವನ ಪಾದೋದಕ ಹಾಗೂ ನಿರ್ಮಾಲ್ಯಗಳನ್ನು ಯಾವನು ಧರಿಸುವನೋ ಅವನಿಗೆ ಎಂದೂ ಕೇಡು ಒದಗದು.

ವಿ: ೧. ಶ್ರೀಹರಿಯ ಚಿಂತನೆಯ ಅನೇಕ ಬಗೆಯನ್ನು ಇಲ್ಲಿ ತಿಳಿಸಿರುವರು.

೨. ಹೃದಯದಲ್ಲಿ ಶ್ರೀಹರಿಯ ರೂಪದ ಚಿಂತನೆ, ಬಾಯಿಂದ ಅವನ ಮಂಗಳ ನಾಮಗಳ ಉಚ್ಚಾರಣೆ, ಉದರದಲ್ಲಿ ಅವನಿಗೆ ಸಮರ್ಪಿಸಿದ ನೈವೇದ್ಯದ ಭಕ್ಷಣ, ತಲೆಯ ಮೇಲೆ ಪಾದೋದಕ ಹಾಗೂ ನಿರ್ಮಾಲ್ಯಗಳ ಧಾರಣಗಳು ನಾಶ ತಪ್ಪಿಸುವ ಸಾಧನಗಳು ಎಂದರ್ಥ.

೩. ಮೇಲ್ನೋಟಕ್ಕೆ ಹೀಗೆ ಮಾಡುವವನು ಅಚ್ಯುತನಾಗುವನು ಎಂದರೆ ಬ್ರಹ್ಮೈಕ್ಯ ಹೊಂದುವನು ಅಥವಾ ಬ್ರಹ್ಮನೊಂದಿಗೆ ಆನಂದಸಾಮ್ಯಹೊಂದುವನು ಎಂಬ ಅರ್ಥ ಇಲ್ಲಿ ಕಾಣುವುದು; ಆದರೆ ಇಲ್ಲಿ **ಅಚ್ಯುತ** ಎಂಬ ಪದಕ್ಕೆ ಚ್ಯುತಿ ಇಲ್ಲದಿರುವಿಕೆ ಎಂದರ್ಥ. ಎಂದರೆ ಹರಿಸ್ಮರಣೆ ಮಾಡುವವನು ಅಚ್ಯುತನೇ ಆಗುವನು ಎಂದು ಅರ್ಥವಾಗದೇ, ಚ್ಯುತಿರಹಿತನಾಗುವನು, ಮುಕ್ತನಾಗುವನು ಎಂದರ್ಥ.

೪. ಇಲ್ಲಿ ಚ್ಯುತಿ ಎಂದರೆ ದೇಹನಾಶ, ದುಃಖಪ್ರಾಪ್ತಿ ಮೊದಲಾದವುಗಳು. ಇಂತಹ ಚ್ಯುತಿ ತಪ್ಪುವುದು ಶ್ರೀಹರಿಯನ್ನು ಸ್ಮರಿಸಿ ಮುಕ್ತಿಪಡೆದಾಗಲೇ ಎಂದರ್ಥ : **ಅಚ್ಯುತತಾಮ್ - ಚ್ಯುತಿವರ್ಜನಮ್ - ಭಾಗವತತಾತ್ಪರ್ಯ (೭/೭/೫೬)**

೫. ಇಲ್ಲಿ ಅಚ್ಯುತನಾಗುವನು ಎಂಬುದಕ್ಕೆ ಅಚ್ಯುತನಂತೆ ದುಃಖಾಭಾವ ಹೊಂದುವನು ಎಂಬ ಅರ್ಥವು ವಿವಕ್ಷಿತ. ಜೀವನು ಶ್ರೀಹರಿಯ ಪ್ರತಿಬಿಂಬನಾದ್ದರಿಂದ ಅವನಲ್ಲಿ ಅಂತಹ ಯತ್ಕಿಂಚಿತ್ ಸಾಮ್ಯ ಉಂಟು ಎಂದಾಗುವುದು. ತತ್ತ್ವಮಸಿ ಎಂಬ ಮಾತಿಗೆ ಶ್ರೀಮದಾಚಾರ್ಯರು ನೀಡಿರುವ ವಿವರಗಳನ್ನು ಇಲ್ಲಿ ಅನ್ವಯಿಸಿಕೊಳ್ಳಬೇಕು.

೬. ಶ್ರೀಜಗನ್ನಾಥದಾಸರ **ಫಲವಿದುಬಾಳ್ದುದಕೆ** ಎಂಬ ಕೃತಿಯಲ್ಲಿನ ಈ ಕೆಳಗಿನ ಪದ್ಯ ಈ ಶ್ಲೋಕದ ಭಾವಾನುವಾದದಂತಿರುವುದು ಗಮನಾರ್ಹ:

**ಹೃದಯದಿ ರೂಪವು ವದನದಿ ನಾಮವು**
**ಉದರದಿ ನೈವೇದ್ಯವು ಶಿರದಿ ।**
**ಪದಜಲ ನಿರ್ಮಾಲ್ಯ ಧರಿಸಿ ನಿರುತ ಕೋ-**
**ವಿದರ ಸದನ ಹೆಗ್ಗದವನು ಕಾಯ್ವುದೆ ॥ -ಫಲವಿದು ಬಾಳ್ದುದಕೆ**

---

ಯದ್ವಾ ಭಗವದ್ಭಕ್ತಿಜ್ಞಾನಾದಿಚ್ಯುತಿರಹಿತತ್ವಾದಚ್ಯುತ ಇತ್ಯುಚ್ಯತೇ ಇತಿ ॥ (ಕೋ) ಅಚ್ಯುತಃ ಜ್ಞಾನಭಕ್ತ್ಯಾದಿಭಿಃ ಚ್ಯುತಿರಹಿತಃ ಅತ ಏವ ಅಸ್ಮಾತ್ ಸಂಸಾರದುಃಖಾಚ್ಚ್ಯುತಃ ಸನ್ ಅಚ್ಯುತಸ್ಯ ಸಾರೂಪ್ಯಾದಿಮಾನ್ ಭವತಿ (ಸ್ಮೃ.ಕೃ) ॥

## ಶ್ರೀಹರಿಯ ಸ್ಮರಣೆಯಿಂದ ಸಕಲಪಾಪಗಳ ವಿನಾಶ

**ಗೋವಿಂದಸ್ಮರಣಂ ಪುಂಸಾಂ ಪಾಪರಾಶಿಮಹಾಚಲಮ್[೧] ।**
**ಅಸಂಶಯಂ ದಹತ್ಯಾಶು ತೂಲರಾಶಿಮಿವಾನಲಃ ॥ ೪೪ ॥**

**ಅ:** ಗೋವಿಂದನಾದ ಶ್ರೀಹರಿಯ ಸ್ಮರಣೆಯು ಮನುಷ್ಯನ ಪಾಪರಾಶಿಯೆಂಬ ಮಹಾಪರ್ವತವನ್ನು, ಬೆಂಕಿಯು ಹತ್ತಿಯ ರಾಶಿಯನ್ನು ಹೇಗೋ ಹಾಗೆ, ಕೂಡಲೇ ಸುಟ್ಟು ಹಾಕುವುದು ; ಇದು ನಿಶ್ಚಿತ.

**ವಿ :** ೧. ಶ್ರೀಹರಿಯ ಸ್ಮರಣೆ ಪಾಪರಾಶಿಗಳನ್ನು ಪರಿಹರಿಸುವ ಬಗೆಯನ್ನು ನಿದರ್ಶನ-ದೊಂದಿಗೆ ಇಲ್ಲಿ ವಿವರಿಸಲಾಗಿದೆ. ಹತ್ತಿಯ ರಾಶಿ ಎಷ್ಟೇ ದೊಡ್ಡದಾಗಿದ್ದರೂ ಅದನ್ನು ಬೆಂಕಿ ಧಗ್ಗನೆ ಸುಟ್ಟುಹಾಕುವಂತೆ ಪಾಪಗಳ ರಾಶಿ ಮಹಾಪರ್ವತಪ್ರಾಯವಾಗಿದ್ದರೂ ಶ್ರೀಹರಿಯ ಸ್ಮರಣೆ ಅದನ್ನು ಕೂಡಲೇ ಪರಿಹರಿಸುವುದು ಎಂದು ಭಾವ : **''ತದ್ಯಥೇಷಿಕಾ ತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ'' ಇತಿ ಶ್ರುತೇಃ (ಸ್ಕ.ಕೃ)॥**

೨. ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿನ **'ತೂಲರಾಶಿಯೊಳನಲ ಪೊಕ್ಕಂತೆ' (೧೩/೨)** – ಎಂಬ ಮಾತು ಇದರ ಅನುವಾದದಂತಿರುವುದು ಗಮನಾರ್ಹ.

೩. ಇತರ ಯಾವ ದೇವತೆಗಳ ಸ್ಮರಣೆಯೂ ಸಹ ಇಂತಹ ಅದ್ಭುತವಾದ ಪಾಪ-ಪರಿಹಾರ ಸಾಮರ್ಥ್ಯವನ್ನು ಹೊಂದಿಲ್ಲ; ಆದ್ದರಿಂದ ಶ್ರೀಹರಿಯೇ ಸರ್ವೋತ್ತಮ ಎಂಬ ತತ್ವ ಇಲ್ಲಿ ಸೂಚಿತ.

೪. ೩೫ನೆಯ ಶ್ಲೋಕದಿಂದ ಈ ಶ್ಲೋಕದವರೆಗಿನ ಒಟ್ಟು ಹತ್ತು ಶ್ಲೋಕಗಳು ರುದ್ರದೇವರ ಮಾತುಗಳು. ಇವುಗಳಲ್ಲಿ ಮೊದಲ ಶ್ಲೋಕದಲ್ಲಿ ಬಂದಿರುವ ಶ್ರೀಹರಿಯ ಸ್ಮರಣೆಯ ವೈಭವ ನಿರೂಪಿತವಾಗಿದೆ.

★★

## ಹರಿಸ್ಮರಣೆಯಿಂದ ಪಾತಕ ಪರಿಹಾರ

ಅಗಸ್ತ್ಯಃ

**ಸ್ಮರಣಾದೇವ ಕೃಷ್ಣಸ್ಯ ಪಾಪಸಂಘಾತಪಂಜರಃ[೨] ।**
**ಶತಧಾ ಭೇದಮಾಯಾತಿ ಗಿರಿರ್ವಜ್ರಹತೋ ಯಥಾ ॥ ೪೫ ॥**

---

೧. ಪಾಪರಾಶಿಂ ಮಹಾಚಲಂ ( ಪಾ.)
೨. 'ಪಾಪಸಂಘಾತಪಂಜರಮ್' (ಪಾ)

**ಅ:** ಅಗಸ್ತ್ಯರು ಹೇಳುವರು: 'ಶ್ರೀಕೃಷ್ಣನ ಸ್ಮರಣೆಯಿಂದಲೇ ಪಾಪಗಳ ಗುಂಪು ಎಂಬ ಪಂಜರವು ವಜ್ರಾಯುಧದಿಂದ ಹೊಡೆಯಲ್ಪಟ್ಟ ಪರ್ವತದಂತೆ, ನೂರಾರು ಹೋಳುಗಳಾಗಿ ಒಡೆದು ಹೋಗುವುದು'.

**ವಿ:** ೧. ಶ್ರೀಕೃಷ್ಣನ ಸ್ಮರಣೆಯಿಂದ ಪಾಪಗಳು ನಾಶವಾಗುವ ಬಗೆಯನ್ನು ಮತ್ತೊಂದು ನಿದರ್ಶನದಿಂದ ಇಲ್ಲಿ ವಿವರಿಸಿರುವರು.

೨. ವಜ್ರಾಯುಧದ ಪೆಟ್ಟಿಗೆ ಪರ್ವತವು ಪುಡಿಯಾಗುವಂತೆ ಕೃಷ್ಣನ ಸ್ಮರಣೆಯ ಪ್ರಭಾವದಿಂದ ಪಾಪಗಳ ಬಂಧನ ನಾಶ ಹೊಂದುವುದು ಎಂದರ್ಥ.

೩. ಇಂದ್ರನ ವಜ್ರಾಯುಧದ ಪೆಟ್ಟಿಗೆ ಪರ್ವತಗಳ ರೆಕ್ಕೆಗಳು ತುಂಡಾದ ವಿವರ ಋಗ್ವೇದದಲ್ಲಿ ನಿರೂಪಿತವಾಗಿದೆ: '**ಯಃ ಪರ್ವತಾನ್ ಪ್ರಕುಪಿತಾನರಮ್ಣಾತ್ ।**'. ಸುಮಧ್ವವಿಜಯದಲ್ಲೂ ಆ ಪ್ರಸಂಗ ಬಂದಿದೆ: '**ಇಂದ್ರಾಯುಧಂ ಹೀಂದ್ರಕರಾಭಿನುನ್ನಂ ಚಿಚ್ಛೇದ ಪಕ್ಷಾನ್ ಕ್ಷಿತಿಧಾರಿಣಾಂ ಪ್ರಾಕ್ ।**'; ಮಹಾಭಾರತತಾತ್ಪರ್ಯನಿರ್ಣಯ ಅಧ್ಯಾಯ ೭ ಶ್ಲೋಕ ೨ರಲ್ಲೂ ಈ ವಿವರವಿದೆ.

★★

## ಹರಿಸ್ಮರಣೆಯಿಂದ ಸದ್ಗತಿ ಪ್ರಾಪ್ತಿ

**ಕೃಷ್ಣೇ ರತಾಃ [೧]ಕೃಷ್ಣಮನುಸ್ಮರಂತ-**
**ಸ್ತದ್ಭಾವಿತಾಸ್ತದ್ಗತಮಾನಸಾಶ್ಚ ।**
**ಭಿನ್ನೇಽಪಿ ದೇಹೇ[೨] ಪ್ರವಿಶಂತಿ ಕೃಷ್ಣಂ**
**ಹವಿರ್ಯಥಾ ಮಂತ್ರಹುತಂ ಹುತಾಶೇ ॥ ೪೬ ॥**

**ಅ:** ಶ್ರೀಕೃಷ್ಣನಲ್ಲಿ ಮನಸ್ಸನ್ನು ತೊಡಗಿಸಿದವರು, ಕೃಷ್ಣನನ್ನು ಸದಾ ಮತ್ತೆ ಮತ್ತೆ ಸ್ಮರಿಸುವವರು, ಅವನಲ್ಲಿ ಭಕ್ತಿ ಹೊಂದಿದವರು, ಅವನಲ್ಲಿಯೇ ಮನಸ್ಸು ನೆಟ್ಟವರು, ದೇಹ ತೊರೆದಮೇಲೂ ಶ್ರೀಕೃಷ್ಣನನ್ನೇ ಪ್ರವೇಶಿಸುವರು; ಮಂತ್ರಪೂರ್ವಕ ಅಗ್ನಿಯಲ್ಲಿ ಹೋಮಿಸಿದ ಹವಿಸ್ಸು ಹೇಗೋ ಹಾಗೆ.

**ವಿ:** ೧. ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಸಮರ್ಪಿಸುವ ಹವಿಸ್ಸು ಶ್ರೀಹರಿಯನ್ನು ತಲುಪುವಂತೆ ಶ್ರೀಹರಿಯಲ್ಲಿ ಮನಸ್ಸು ತೊಡಗಿಸಿದವರು ದೇಹ ತೊರೆದ ಮೇಲೆ ಶ್ರೀಕೃಷ್ಣನನ್ನೇ ಹೊಂದುವರು ಎಂದರ್ಥ.

---

೧. 'ಕೃಷ್ಣಮನುಸ್ಮರಂತಿ' (ಪಾ.)
೨. 'ತೇ ಭಿನ್ನದೇಹಾಃ' (ಪಾ.)

೨. ಇಲ್ಲಿ ಕೃಷ್ಣನನ್ನು ಪ್ರವೇಶಿಸುವರು ಎಂದರೆ ಅವನ ಲೋಕವಾದ ವೈಕುಂಠವನ್ನು ಹೊಂದುವರು ಎಂದರ್ಥ : **ಯತ್ರ್ಯಯಂತ್ಯಭಿಸಂವಿಶಂತಿ(ಉಪನಿಷತ್); ಪ್ರವೇಷ್ಟುಂ ಚ ಪರಂತಪ (ಗೀತಾ-೧೧/೫೪).**

೩. ಸ್ವೇಚ್ಛೆಯಾಗಿ ಶ್ರೀಹರಿಯ ದೇಹವನ್ನು ಪ್ರವೇಶಿಸುವ ನಿರ್ಗಮಿಸುವ ವಿಶೇಷ ಅವಕಾಶವನ್ನು ಹೊಂದುವ ಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದವರು ಎಂಬ ವಿಶೇಷಾಂಶವನ್ನು ಗ್ರಹಿಸಬಹುದು.

೪. ಅಗ್ನಿಯಲ್ಲಿ ವಿಧ್ಯುಕ್ತವಾಗಿ ಮಾಡಿದ ಹೋಮ ದೇವತೆಗಳನ್ನು ತಪ್ಪದೇ ತಲುಪುವುದು ಎಂಬ ತತ್ವವೂ ಸಹ ಇಲ್ಲಿ ಸೂಚಿತವಾಗಿರುವುದನ್ನು ಗಮನಿಸಬೇಕು.

೫. ಇಲ್ಲಿ ಈ ಕೆಳಗಿನ ಉಪನಿಷದ್ ವಾಕ್ಯ ಗಮನಾರ್ಹ:

**ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥- ಆಥರ್ವಣೋಪನಿಷತ್**

★★

## ಹರಿಸ್ಮರಣೆ ಮಾಡದ ಕಾಲ ವ್ಯರ್ಥ

**ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಚಾಂಧಜಡಮೂಕತಾ ।**
**ಯನ್ಮುಹೂರ್ತಂ ಕ್ಷಣಂ ವಾಽಪಿ ವಾಸುದೇವೋ ನ ಚಿಂತ್ಯತೇ ॥ ೪೭ ॥**

**ಅ:** ಯಾವ ಮುಹೂರ್ತದಲ್ಲಿ, ಕ್ಷಣದಲ್ಲಿ, ವಾಸುದೇವನ ಚಿಂತನೆಯು ನಡೆಯುವುದಿಲ್ಲವೋ ಅದು ದೊಡ್ಡ ಹಾನಿ; ಮಹತ್ತರವಾದ ಲೋಪ; ಕುರುಡುತನ ಜಡತ್ವ ಮೂಕತ್ವಗಳೂ ಅವೇ.

**ವಿ:** ೧. ಶ್ರೀಹರಿಸ್ಮರಣೆಮಾಡದ ಕ್ಷಣ ನಷ್ಟ ಕ್ಷಣ; ನೋಡದ ಕಣ್ಣು ಕುರುಡು; ಮಾಡದ ಕಾರ್ಯ ಜಾಡ್ಯ; ಆಡದ ಮಾತು ಮೂಕತನ.

೨. ಹರಿಸ್ಮರಣೆಯಿಂದ ಸಾರ್ಥಕ್ಯ ಹೇಗೋ ಹಾಗೆ ಹರಿಯ ವಿಸ್ಮರಣೆಯಿಂದ ವಿಶೇಷ ಅನರ್ಥ ಎಂದರ್ಥ; ಹರಿಸ್ಮರಣೆಯನ್ನು ತೊರೆಯುವ ತಿಂಗಳು, ಪಕ್ಷ, ದಿನ, ಹಗಲು ರಾತ್ರಿಗಳಿರಲಿ ಪ್ರತಿಯೊಂದು ಕ್ಷಣ ಮುಹೂರ್ತಗಳೂ ಸಹ ಅತ್ಯಂತ ನಿರರ್ಥಕ ಎಂಬ ಸಂದೇಶ ಇಲ್ಲಿದೆ.

೩. ಈ ಮಾತು ಸದಾ ಸ್ಮರಣೆ ಎಂಬುದಕ್ಕೆ ವಿವರಣೆಯೂ ಆಗಿದೆ.

೪. ಹರಿಸ್ಮರಣೆಯಿಂದ ರಹಿತವಾದ ಕ್ಷಣಾದಿಗಳೂ ವ್ಯರ್ಥವೆನ್ನಿಸುವಾಗ ಇನ್ನು ಹರಿಯಿಂದ ವಿಮುಖನಾದವನ ಸಮಗ್ರಜೀವನವೇ ವ್ಯರ್ಥ ಎನ್ನುವುದು ಕೈಮುತ್ಯಸಿದ್ಧ ಎಂದು ಭಾವ.

೫. ಈ ಮಾತಿನ ಹಿನ್ನೆಲೆಯಲ್ಲಿ ಹನುಮಂತ ಪ್ರಾರ್ಥಿಸುವ '**ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ**' (ಮ.ಭಾ.ತಾ.ನಿ. ೮/೨೪೭) ಎಂಬ ಮಾತಿನ ಔಚಿತ್ಯ ವಿಶೇಷವಾಗಿ ತೆರೆದುಕೊಳ್ಳುವುದು ಎಂಬುದನ್ನು ಗಮನಿಸಬೇಕು.

★★

## ಶ್ರೀಹರಿಯು ಅಪೂರ್ವ ಚೋರ

**ನಾರಾಯಣೋ ನಾಮ ನರೋ ನರಾಣಾಂ**
**[೧]ಪ್ರಸಿದ್ಧಚೋರಃ ಕಥಿತಃ ಪೃಥಿವ್ಯಾಮ್ ।**
**ಅನೇಕಜನ್ಮಾರ್ಜಿತಪಾಪಸಂಚಯಂ**
**[೨]ಹರತ್ಯಶೇಷಂ ಸ್ಮೃತಮಾತ್ರ ಏವ ॥ ೪೮ ॥**

**ಅ:** ನಾರಾಯಣ ಎಂಬ ನರ ಪೃಥ್ವಿಯಲ್ಲಿ ಪ್ರಸಿದ್ಧ ಚೋರ ಎಂದು ಉಕ್ತವಾಗಿದೆ; ಅವನು ಅನೇಕ ಜನ್ಮಗಳಿಂದ ಮಾಡಿದ ಪಾಪಸಂಗ್ರಹವನ್ನು ಕೇವಲ ತನ್ನನ್ನು ಸ್ಮರಿಸಿದಾಗಲೇ ಸಂಪೂರ್ಣವಾಗಿ ಕದ್ದು ಬಿಡುವನು.

**ವಿ:** ೧. ಇದು ಶ್ರೀಹರಿಯ ನಿಂದಾಸ್ತೋತ್ರರೂಪವಾದ ವಚನ; ಶ್ರೀಹರಿಯನ್ನು ಚೋರ ಎಂದು ಕರೆಯುವ ಮೂಲಕವೇ ಅವನನ್ನು ಸರ್ವೋತ್ತಮ ಎಂದು ವರ್ಣಿಸುವ ಕೌಶಲ ಇಲ್ಲಿಯದು.

೨. ಶ್ರೀಹರಿಯು ಇತರ ಕಳ್ಳರಂತೆ ನಮಗೆ ಪ್ರಿಯವಾದದ್ದನ್ನು ಕದಿಯದೇ ಅನಿಷ್ಟವಾದ ಪಾಪಗಳನ್ನು ಕದಿಯುವನು. ಅಂತಹ ಅನಿಷ್ಟವಾದ ಪಾಪಗಳನ್ನು ಸಹ ಅವನು ಕದಿಯುವುದು ಅಲ್ಪಸ್ವಲ್ಪವಲ್ಲ. ಬಹುಜನ್ಮಗಳ ಸಕಲಪಾಪಗಳನ್ನೂ ಕದಿಯುವನು. ಇತರ ಚೋರರು ಸ್ಮರಣೆ ಮಾಡಿದಾಗ ದೂರಕ್ಕೆ ಪಲಾಯನ ಮಾಡಿದರೆ ಶ್ರೀಹರಿ ಸ್ಮರಣೆ ಮಾಡಿದಾಗಲೇ ಆಗಮಿಸುವ ವಿಚಿತ್ರಚೋರ.

೩. ಇತರ ಚೋರರು ವಿತ್ತಾದಿಗಳನ್ನು ಅಪಹರಿಸುವುದು ಅವರು ವಸ್ತುಗಳನ್ನು ಸಮೀಪಿಸಿದಾಗ ಮಾತ್ರ. ಶ್ರೀಹರಿ ಹಾಗಲ್ಲ; ಅವನು ಸ್ಮರಣೆ ಮಾತ್ರದಿಂದಲೇ ಸಕಲ-ಪಾಪಗಳನ್ನೂ ಪರಿಹರಿಸುವ ವಿಶಿಷ್ಟ ಹಿರಿಮೆಯವನು.

೪. ಚೋರರು ಗ್ರಾಮದ ನಗರದ ಅಥವಾ ದೇಶದ ಸೀಮಿತವ್ಯಾಪ್ತಿಯಲ್ಲಿ ಪ್ರಸಿದ್ಧಿ ಪಡೆಯುವರು. ಆದರೆ ಶ್ರೀಹರಿ ಇಡೀ ವಿಶ್ವದಲ್ಲೇ ಪ್ರಸಿದ್ಧನಾದ ಮಹಾಚೋರ ಎಂಬುದು ಅವನ ಇನ್ನೊಂದು ಬಗೆಯ ಹಿರಿಮೆ.

---

೧. 'ಪ್ರಸಹ್ಯಚೋರಃ' (ಪಾ.) 'ದಹತ್ಯಶೇಷಂ ಸ್ಮೃತಿಮಾತ್ರಯೈವ' (ಪಾ.) ; 'ಪ್ರಸಹ್ಯಚೋರಃ' ಇತಿ ಪಾಠೇ ಪ್ರಸಹ್ಯ ಹರತೀತಿ ಸಂಬಂಧಃ (ಸ್ಮೃ.ಕೃ.)

೨. 'ದಹತ್ಯಶೇಷಂ ಸ್ಮೃತಿಮಾತ್ರಯೈವ' (ಪಾ.)

೫. ಶ್ರೀಹರಿಯು ತನ್ನ ಭಕ್ತರ ಅನೇಕ ಜನ್ಮಗಳ ಪಾಪಸಂಗ್ರಹವನ್ನೆಲ್ಲಾ ಸ್ಮರಣೆ-ಮಾತ್ರದಿಂದಲೇ ಪರಿಹರಿಸುವ ಅತ್ಯಂತಸಮರ್ಥ; ಆದ್ದರಿಂದಲೇ ಸರ್ವೋತ್ತಮ ಎಂಬುದು ಒಟ್ಟು ತಾತ್ಪರ್ಯ: **ಯತತೋಽಪಿ ಹರೇಃ ಪದಸಂಸ್ಮರಣೇ ಸಕಲಂ ಹ್ಯಘಮಾಶು ಲಯಂ ವ್ರಜತಿ(ದ್ವಾದಶಸ್ತೋತ್ರ-೩/೨)**

೬. ಶ್ರೀಕೃಷ್ಣ 'ನವನೀತಚೋರ' ಎಂಬ ಶ್ರೀಮದ್ಭಾಗವತಾದಿ ಗ್ರಂಥಗಳಲ್ಲಿನ ಮಾತು ನಿಂದೆಯಾಗಿರದೆ ಸ್ತೋತ್ರವಾಗಿದೆ ಎಂಬುದನ್ನು ಇದು ಅಪೂರ್ವರೀತಿಯಲ್ಲಿ ಸ್ಫುಟ-ಪಡಿಸುವುದು. ತಿಳಿಯುವುದು.

೭. ಶ್ರೀಜಗನ್ನಾಥದಾಸರ **'ಸದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ'** (ಹ. ಕ.ಸಾ. ೨/೨೨) ಎಂಬ ಮಾತು ಇದರ ವಿವರಣೆಯಂತಿದೆ.

೮. ಚೋರನು ಕದ್ದ ಪದಾರ್ಥಗಳನ್ನು ತನ್ನಲ್ಲಿ ಸಂಗ್ರಹಿಸುವನು; ಆದರೆ ಶ್ರೀಹರಿ ತಾನು ಕದ್ದ ಭಕ್ತರ ಪಾಪಗಳನ್ನೆಲ್ಲಾ ಸುಟ್ಟು ಬೂದಿಮಾಡುವನು ಎಂಬುದು ಇಲ್ಲಿಯ ಮತ್ತೊಂದು ವಿಶೇಷ.

★★

## ಹರಿಸ್ಮರಣೆಯಿಂದ ಜನ್ಮಾಂತರಪಾತಕವು ಸಹ ಪರಿಹಾರ

**ಯಸ್ಯ ಸಂಸ್ಮರಣಾದೇವ ವಾಸುದೇವಸ್ಯ ಚಕ್ರಿಣಃ[೧] ।**
**ಕೋಟಿಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೪೯ ॥**

**ಅ:** ಚಕ್ರಪಾಣಿಯಾದ ವಾಸುದೇವನ ಉತ್ತಮ ಸ್ಮರಣೆಮಾತ್ರದಿಂದಲೇ ಕೋಟಿ-ಜನ್ಮಗಳಿಂದ ಸಂಪಾದಿತವಾದ ಪಾಪವೂ ಆ ಕ್ಷಣದಲ್ಲೇ ನಾಶ ಹೊಂದುವುದು.

ವಿ: ೧. ಈ ಶ್ಲೋಕದವರೆಗೆ ಶ್ರೀಹರಿಯ ಸ್ಮರಣೆಯ ಮಹತ್ತ್ವ ನಿರೂಪಿತವಾಗಿದೆ. ಶ್ಲೋಕ ೪೫ರಿಂದ ಇಲ್ಲಿಯವರೆಗಿನ ವಚನಗಳು ಅಗಸ್ತ್ಯಮುನಿಗಳ ವಚನಗಳು.

೨. ಹಿಂದಿನ ಶ್ಲೋಕದಲ್ಲಿ ಅನೇಕ ಜನ್ಮಗಳ ಪಾಪಸಂಗ್ರಹ ನಾಶವಾಗುವುದು ಎಂದು ತಿಳಿಸಿದ್ದರೆ, ಇಲ್ಲಿ ಕೋಟಿ ಜನ್ಮಗಳಿಂದ ಸಂಪಾದಿತವಾದ ಪಾಪ ಪರಿಹಾರವಾಗುವುದು ಎಂದಿರುವರು. ಇದರಿಂದ ಅಲ್ಲಿಯ ಅನೇಕಶಬ್ದಕ್ಕೆ ಕೆಲವು ಎಂದು ಅರ್ಥವಾಗದೇ ಅತ್ಯಂತಹೆಚ್ಚು ಎಂಬ ಅರ್ಥ ವಿವಕ್ಷಿತ ಎಂದಾಗುವುದು. ಇಲ್ಲಿಯ ಕೋಟಿ ಶಬ್ದಕ್ಕೂ ಸಹಿತ ಕೋಟಿ ಎಂಬ ಸೀಮಿತ ಅರ್ಥವನ್ನು ಮಾಡದೇ ಕೋಟಿಗಟ್ಟಲೆ ಎಂಬ ವಿಶೇಷಾರ್ಥವನ್ನು ಮಾಡಬೇಕು (ಶಬ್ದೋ ಬಹುತ್ವ ವಚನಃ).

★★

---

೧. ಶಾರ್ಙ್ಗಿಣಃ ( ಪಾ.)

## ಹರಿಧ್ಯಾನಕ್ಕಿಂತ ಮಿಗಿಲಾದ ತೀರ್ಥತಪಸ್ಸುಗಳಿಲ್ಲ

**ಕಿಂ ತಸ್ಯ ಬಹುಭಿಸ್ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।**
**ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ ॥ ೫೦ ॥**

ಅ: ಯಾವನು ಸದಾ ಅನನ್ಯ ಮನಸ್ಸಿನಿಂದ ದೇವನಾದ ನಾರಾಯಣನನ್ನು ಧ್ಯಾನಿಸುವನೋ ಅವನಿಗೆ ಅನೇಕ ತೀರ್ಥಗಳಿಂದೇನು? ತಪಸ್ಸುಗಳಿಂದೇನು? ಯಜ್ಞಗಳಿಂದೇನು?

ವಿ: ೧. ಈ ಶ್ಲೋಕದಿಂದ ಮುಂದಿನ ಕೆಲವು ಶ್ಲೋಕಗಳಲ್ಲಿ ಶ್ರೀಹರಿಯ ಧ್ಯಾನದ ಮಹತ್ತ್ವ ನಿರೂಪಿತವಾಗಿದೆ.

೨. ಶ್ರೀಹರಿಯನ್ನು ಸದಾ ಧ್ಯಾನಿಸುವವನಿಗೆ ತೀರ್ಥಯಾತ್ರೆ ತಪಸ್ಸು ಯಜ್ಞ ಯಾಗಗಳ ಅಗತ್ಯವಿಲ್ಲ ಎಂದರ್ಥ.

೩. ಧ್ಯಾನವೇ ತೀರ್ಥಯಾತ್ರೆ ಮೊದಲಾದ ಸಕಲಸತ್ಕರ್ಮಗಳಿಗಿಂತ ಮಿಗಿಲಾದ ಶ್ರೇಷ್ಠ ಸಾಧನವಾಗಿರುವುದರಿಂದ ಅಂತಹ ಧ್ಯಾನನಿರತನಾದವನಿಗೆ ತೀರ್ಥಯಾತ್ರಾದಿ ಅಲ್ಪಸಾಧನಗಳ ಅಗತ್ಯವಿರುವುದಿಲ್ಲ ಎಂದರ್ಥ.

೪. ಇಲ್ಲಿ ಧ್ಯಾನವೆಂದರೆ ಅಸಂಪ್ರಜ್ಞಾತಸಮಾಧಿಸ್ಥಿತಿ ಎಂಬ ಅರ್ಥವನ್ನು ತಿಳಿಯ-ಬೇಕು. ಅಂತಹ ಸ್ಥಿತಿ ಅತ್ಯುತ್ತಮ ಹಂತವಾದ್ದರಿಂದ ಆ ಸಮಯದಲ್ಲಿ ಬೇರಾವ ಕಾರ್ಯಗಳೂ ಸಹ ಅಗತ್ಯವೆನ್ನಿಸವು ಎಂದು ಭಾವ : **ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ । ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥** -ಗೀತಾ(೩/೧೭).

೫. ತೀರ್ಥಯಾತ್ರಾದಿಗಳು ಧ್ಯಾನಕ್ಕೆ ಸಾಧನವಾದ್ದರಿಂದ ಸಿದ್ಧಿರೂಪವಾದ ಧ್ಯಾನವೇ ಸಿದ್ಧಿಸಿದವನಿಗೆ ಆ ಸಾಧನಗಳ ಅಗತ್ಯವೆಲ್ಲಿಯದು ಎಂದು ತಾತ್ಪರ್ಯ; ಧ್ಯಾನವು ಸಕಲ ಸಾಧನೋತ್ತಮ ಎಂಬುದು ಫಲಿತಾರ್ಥ.

★★

## ಹರಿಸ್ಮರಣೆ ಮಾಡುವವರಿಗೆ ಪುನರ್ಜನ್ಮವಿಲ್ಲ

**ಯೇ[1] ಮಾನವಾ ವಿಗತರಾಗಪರಾವರಜ್ಞಾ**
**ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।**
**ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೇ**
**ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥ ೫೧ ॥**

---

೧. ವಾಮನಪುರಾಣ (೬೧/೭೧,೭೨)

**ಅ:** ಯಾವ ಮಾನವರು ಫಲದ ಆಸೆ ತೊರೆದು, ಸರ್ವೋತ್ತಮನಾದ ಶ್ರೀಹರಿ–ಯನ್ನು ತಿಳಿದು, ಸುರಗುರುವಾದ ಶ್ರೀನಾರಾಯಣನನ್ನು ಸತತ ಸ್ಮರಿಸುವರೋ, ಆ ಧ್ಯಾನದಿಂದಾಗಿ ದೋಷರಹಿತವಾಗುವ ಮನಸ್ಸಿನ ಅವರು ತಾಯಿಯ ಸ್ತನ್ಯವನ್ನು ಮತ್ತೊಮ್ಮೆ ಪಾನ ಮಾಡಲಾರರು.

**ವಿ:** ೧. ನಾರಾಯಣನನ್ನು ಸದಾ ಸ್ಮರಿಸುತ್ತಾ ಧ್ಯಾನಿಸುವವರಿಗೆ ಪುನರ್ಜನ್ಮವಿರದು ಎಂದರ್ಥ. **ಮಾನವ** ಎಂಬುದಕ್ಕೆ ಮನುಶಬ್ದವಾಚ್ಯರಾದ ವಾಯುದೇವರ ಅನುಯಾಯಿಗಳಾದವರು ಎಂಬುದು ವಿಶೇಷಾರ್ಥ. **ವಿಗತರಾಗರು** ಎಂದರೆ ರಾಗೋಪಲಕ್ಷಿತವಾದ ಅರಿಷಡ್ವರ್ಗದಿಂದ ರಹಿತರಾದವರು ಎಂದೂ, **ಪರಾವರಜ್ಞಾಃ** ಎಂದರೆ, ಪರಾವರಶಬ್ದವಾಚ್ಯನಾದ ಶ್ರೀಹರಿಯನ್ನು ಅರಿತವರು ಎಂದೂ ಅರ್ಥ.

೨. **ಪರಾವರ** ಎಂಬುದಕ್ಕೆ ಇಂದ್ರಾದಿಗಳಿಗಿಂತ ಪರರು ಶ್ರೇಷ್ಠರು ಎನ್ನಿಸಿದ ಬ್ರಹ್ಮಾದಿ ದೇವತೆಗಳೂ ಸಹ ಶ್ರೀಹರಿಯ ಮುಂದೆ ಅವರರು ಎನ್ನಿಸುವುದರಿಂದ ಶ್ರೀಹರಿಯು ಪರಾವರ ಎನ್ನಿಸಿರುವನು ಎಂದರ್ಥ:

೩. ಇಲ್ಲಿಯ **ನಾರಾಯಣಂ ಸುರಗುರುಂ** ಎಂಬುದು, **'ನಾರಾಯಣಂ ಸುರಗುರುಂ ಜಗದೇಕನಾಥಂ'** ಎಂಬ ಶ್ರೀಮನ್ಮಹಾಭಾರತದ ಮಂಗಲಶ್ಲೋಕ (೧-೧-೧)ವನ್ನು ಜ್ಞಾಪಿಸುವಂತಿರುವುದು ವಿಶೇಷ.

★★

## ಹರಿಚಿಂತನೆಯೇ ಮನಸ್ಸಿಗೆ ವಿಹಿತವಾದ ಕಾರ್ಯ

**ಹೇ ಚಿತ್ತ ಚಿಂತಯಸ್ವೇಹ[1] ವಾಸುದೇವಮಹರ್ನಿಶಮ್ ।**
**ನೂನಂ ಯಶ್ಚಿಂತಿತಃ ಪುಂಸಾಂ ಹಂತಿ ಸಂಸಾರಬಂಧನಮ್ ॥ ೫೨ ॥**

**ಅ:** ಎಲೈ ಮನಸ್ಸೇ ! ಇಲ್ಲಿ ಶ್ರೀವಾಸುದೇವನನ್ನು ಹಗಲಿರುಳೂ ಚಿಂತಿಸು; ಚಿಂತಿತನಾದ ಅವನು ನಿಶ್ಚಿತವಾಗಿಯೂ ಮನುಷ್ಯರ ಸಂಸಾರಬಂಧನವನ್ನು ಪರಿಹರಿಸುವನು.

**ವಿ:** ೧. ಇದು ಚಿತ್ತಕ್ಕೆ ಮಾಡಿದ ಉಪದೇಶರೂಪದಂತಿರುವುದು ಗಮನಾರ್ಹ. ಅಹರ್ನಿಶಂ ಎಂದರೆ ಸದಾ ಎಂದು ತಾತ್ಪರ್ಯ. ಇಹ ಎಂಬುದಕ್ಕೆ ಅತ್ಯುತ್ತಮಸಾಧನ–ಭೂಮಿಯಾದ ಭೂಲೋಕದಲ್ಲಿ ಸಾಧನಶರೀರದೊರೆತಿರುವಾಗ ಎಂದರ್ಥ.

೨. **ನರಜನ್ಮಬಂದಾಗ ನಾಲಿಗೆ ಇರುವಾಗ ಕೃಷ್ಣಾ** ಎನಬಾರದೇ ಎಂಬ ದಾಸವಾಣಿ ಇಲ್ಲಿಯ 'ಇಹ' ಶಬ್ದದ ವಿವರಣೆಯಂತಿದೆ ಎಂಬುದನ್ನು ಗಮನಿಸಬೇಕು.

---

೧. ಚಿಂತಯ ಸ್ನೇಹಾತ್ ( ಪಾ.); ಮಹಾಭಾರತ (೧೩/೧೨೪/೧೨)

೩. ಇದು ಚಿತ್ತಾಭಿಮಾನಿದೇವತೆಯ ಪ್ರಾರ್ಥನೆಯೂ ಆಗಿದೆ ಎಂಬ ವಿಶೇಷಾರ್ಥ ವ್ಯಾಖ್ಯಾನಗಳಲ್ಲಿದೆ[೧].

★★

## ಹರಿಧ್ಯಾನವೇ ಸಕಲಶಾಸ್ತ್ರಗಳ ಆದೇಶ

**[೨]ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ ೫೩ ॥**

**ಅ:** ಸಕಲಶಾಸ್ತ್ರಗಳನ್ನು ಅವಲೋಕಿಸಿ ಮತ್ತೆ ಮತ್ತೆ ವಿಚಾರಮಾಡಿದಾಗ ಖಚಿತ ಪಡುವುದಿಷ್ಟು 'ನಾರಾಯಣನನ್ನೇ ಸದಾ ಧ್ಯಾನಿಸಬೇಕು'.

**ವಿ:** ೧. ಇದು ಮಹಾಭಾರತದ ಶ್ಲೋಕ. ಸಕಲಶಾಸ್ತ್ರಗಳ ಸಾರ ಶ್ರೀಹರಿಯೇ ಧ್ಯೇಯ ಎಂದಾಗಿದೆ. ಎಂದರ್ಥ. ಇಲ್ಲಿ **ಸಕಲಶಾಸ್ತ್ರಗಳು** ಎಂದರೆ ಋಗಾದಿ ನಾಲ್ಕು ವೇದಗಳು, ಪಂಚರಾತ್ರ, ಮಹಾಭಾರತ ಮತ್ತು ಮೂಲರಾಮಾಯಣ ಎಂಬ ಇತಿಹಾಸಗಳು, ಶ್ರೀಮದ್ಭಾಗವತಾದಿ ಪುರಾಣಗಳು, ಮನುಸ್ಮೃತಿ ಮೊದಲಾದ ಸ್ಮೃತಿಗಳು ಮೊದಲಾದ ಸಕಲಸಚ್ಛಾಸ್ತ್ರಗಳು ಎಂದರ್ಥ.

೨. ಇದು ಮಹಾಭಾರತತಾತ್ಪರ್ಯನಿರ್ಣಯದ ಈ ಶ್ಲೋಕದ (೧/೨೨) ವಿಸ್ತೃತ-ರೂಪದಂತಿರುವುದು ಗಮನಾರ್ಹ:

**'ಅರ್ಥೋऽಯಮೇವ ನಿಖಿಲೈರಪಿ ವೇದವಾಕ್ಯೈ**
**ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।**
**ಅನ್ಯೈಶ್ಚ ಶಾಸ್ತ್ರವಚನೈಃ ಸಹತತ್ತ್ವಸೂತ್ರೈ-**
**ರ್ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥'**

★★

## ಶ್ರೀಹರಿಯ ಸ್ಮರಣೆಯಿಂದ ಸರ್ವವಿಧಕಲ್ಯಾಣ

**[೩]ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ ।**
**ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಮ್ ॥ ೫೪ ॥**

---

೧. ಹರಿಸ್ಮರಣಾರ್ಥಂ ಚಿತ್ತಾಭಿಮಾನಿದೇವತಾಪ್ರಾರ್ಥನಂ ಕಾರ್ಯಮಿತಿ ಭಾವೇನಾಹ । (ತಾ.)
ಧ್ಯಾನಸ್ಯ ಚಿತ್ತದೇವತಾಪ್ರಸಾದಸಾಧ್ಯತ್ವಾತ್ ತತ್ ಪ್ರಾರ್ಥನಾಪ್ರಕಾರಂ ನಿರೂಪಯತಿ ॥ (ಉ.)

೨. ಮಹಾಭಾರತ ೧೩-೧೨೪ । ಮತ್ತು ನೃಸಿಂಹಪುರಾಣ ।

೩. ಬ್ರಹ್ಮಪುರಾಣ ೧೯೧-೧೭ ; ವಿಷ್ಣುಪುರಾಣ ೫-೧೭-೧೭ ॥

**ಅ:** ಜೀವಿಯು ಯಾವನನ್ನು ಸ್ಮರಿಸಿದಾಗ ಸಕಲಮಂಗಲಗಳಿಗೆ ನೆಲೆಯೆನ್ನಿಸು-ವನೋ, ಅಂತಹ ಅಜನಾದ ಶ್ರೀಹರಿಯನ್ನು ಸದಾ ಶರಣು ಹೊಂದುವೆನು.

**ವಿ:** ೧. ಸಕಲಕಲ್ಯಾಣಗಳಿಗೂ ಜೀವನು ಪಾತ್ರನಾಗುವುದು ಶ್ರೀಹರಿಯನ್ನು ಸ್ಮರಿಸಿ-ದಾಗಲೇ ; ಬೇರಾರ ಸ್ಮರಣೆಯೂ ಇಂತಹ ಹಿರಿಮೆಯನ್ನು ತಂದು ಕೊಡಲಾರದು. ಹೀಗೆ ಸಕಲ ಕಲ್ಯಾಣಗಳಿಗೂ ಕಾರಣನಾಗುವ ಶ್ರೀಹರಿಯನ್ನು ಸದಾ ಶರಣು ಹೊಂದುವುದು ಯೋಗ್ಯಚೇತನನ ಮುಖ್ಯ ಕರ್ತವ್ಯ ಎಂದರ್ಥ.

೨. ಇಲ್ಲಿ **ಸಕಲಕಲ್ಯಾಣಗಳು** ಎಂದರೆ ಇಹಪರದ ಸಕಲ ಯೋಗ್ಯಬಯಕೆಗಳು ಎಂದರ್ಥ.

★★

**ಹರಿಸ್ಮರಣೆಯಿಂದ ಸಕಲವಿಧ ಪುಣ್ಯಕಾರ್ಯಗಳ ಸತ್ಫಲ**

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ತೀರ್ಥೇಷು ವ್ರತೇಷು ಯಚ್ಚ ।**
**ಇಷ್ಟೇಷು[೧] ಪೂರ್ತೇಷು[೨] ಚ ಯತ್ ಪ್ರದಿಷ್ಟಂ**
**ಪುಣ್ಯಂ ಸ್ಮೃತೇ ತತ್ ಖಲು ವಾಸುದೇವೇ ॥ ೫೫ ॥**

**ಅ:** ವೇದಗಳಲ್ಲಿ, ಯಜ್ಞಗಳಲ್ಲಿ, ತಪಸ್ಸುಗಳಲ್ಲಿ, ದಾನಗಳಲ್ಲಿ, ತೀರ್ಥಗಳಲ್ಲಿ, ವ್ರತಗಳಲ್ಲಿ, ಇಷ್ಟಕಾರ್ಯಗಳಲ್ಲಿ, ಪೂರ್ತಗಳಲ್ಲಿ ಯಾವ ಪುಣ್ಯವು ಹೇಳಲ್ಪಟ್ಟಿದೆಯೋ ಅದೆಲ್ಲಾ ವಾಸುದೇವನಾದ ಶ್ರೀಹರಿಯನ್ನು ಸ್ಮರಿಸಿದಾಗ ಲಭಿಸುವುದು.

**ವಿ:** ೧. ವೇದಾಧ್ಯಯನ, ಯಜ್ಞಗಳ ಆಚರಣೆ, ತಪಸ್ಸು, ದಾನ, ತೀರ್ಥಯಾತ್ರೆ, ವ್ರತಗಳು, ಇಷ್ಟಾಪೂರ್ತಗಳು ಮೊದಲಾದವುಗಳು ಶ್ರೇಷ್ಠಪುಣ್ಯಕಾರ್ಯಗಳೇ ಎಂಬುದು ಸುಪ್ರಸಿದ್ಧ.

೨. ಆ ಎಲ್ಲ ಪುಣ್ಯಕಾರ್ಯಗಳ ಫಲವೂ ಶ್ರೀಹರಿಯ ಸ್ಮರಣೆ ಮಾತ್ರದಿಂದಲೇ ಲಭಿಸುವುದು. ಆದ್ದರಿಂದ ಶ್ರೀಹರಿಯ ಸ್ಮರಣೆ ಅವೆಲ್ಲವುಗಳಿಗಿಂತಲೂ ತುಂಬ ಶ್ರೇಷ್ಠವಾದುದು ಎಂದರ್ಥ.

---

೧. 'ಚೈವ । ಪುಂಸಾಂ' (ಪಾ.)

೨. ಇಷ್ಟಂ ಯಜನಂ, ಪೂರ್ತಂ ಅನ್ನದಾನಾದಿಕಂ, ತೇಷು ಪ್ರೀತ್ಯುದ್ದೇಶ್ಯತ್ವೇನ । (ಉ) ॥ ಇಷ್ಟಂ ಯಜನಂ, ಪೂರ್ತಂ ಪೂಜಾ, ತೇಷು ಪೂರ್ತೇಷು ಅನ್ನದಾನಾದಿಷು ಪ್ರೀತ್ಯುದ್ದೇಶ್ಯತ್ವೇನ (ಉಪೇ) ॥ ಇಷ್ಟೇಷು ಜ್ಯೋತಿಷ್ಟೋಮಾದಿಷು । ಪೂರ್ತೇಷು ತಟಾಕಾದಿಷು ನಿರ್ಮಿತೇಷು (ಕೋ) ॥ ಇಷ್ಟೇಷು – ಅಗ್ನಿಹೋತ್ರಂ ತಪಃ ಸತ್ಯಂ ವೇದಾನಾಂ ಚಾನುಪಾಲನಮ್ । ಆತಿಥ್ಯಂ ವೈಶ್ವದೇವಂ ಚ ಇಷ್ಟಮಿತ್ಯಭಿಧೀಯತೇ ॥ ..... ಪೂರ್ತೇಷು ತಟಾಕಾದಿಷು ಕ್ರಿಯಮಾಣೇಷು ಸತ್ಸು ॥ (ಸ್ಮೃ.ಕೃ).

೩. ಇಲ್ಲಿ **ವೇದಗಳು** ಎಂದರೆ ಋಗಾದಿ ನಾಲ್ಕು ಹಾಗೂ ಇತಿಹಾಸ ಪುರಾಣಗಳು ಎಂಬ ಐದನೆಯದು ಗ್ರಾಹ್ಯ; **ಯಜ್ಞಗಳು** ಎಂದರೆ ಅಶ್ವಮೇಧ, ರಾಜಸೂಯ ಮೊದಲಾದವುಗಳು; **ದಾನಗಳು** ಎಂದರೆ ಅನ್ನದಾನಾದಿ ಮಹಾದಾನಗಳು; **ತೀರ್ಥಗಳು** ಎಂದರೆ ಗಂಗಾದಿತೀರ್ಥಕ್ಷೇತ್ರಗಳು; **ವ್ರತಗಳು** ಎಂದರೆ ವಿಷ್ಣುಪಂಚಕ, ಭೀಷ್ಮಪಂಚಕ, ಚಾಂದ್ರಾಯಣ ಮೊದಲಾದವುಗಳು; **ಇಷ್ಟಾಪೂರ್ತಗಳು** ಎಂದರೆ ಕೆರೆ, ಭಾವಿ ತೋಡಿಸುವುದು ಮೊದಲಾದವುಗಳು.

೪. ಇವೆಲ್ಲವುಗಳ ಗುರಿ ಸತತ ಹರಿಸ್ಮರಣೆಯೇ ಆಗಿರುವುದರಿಂದ ಹರಿಸ್ಮರಣೆ ಮಾಡುವವನಿಗೆ ಇವೆಲ್ಲವುಗಳ ಫಲ ಸ್ವಾಭಾವಿಕವಾಗಿಯೇ ಲಭಿಸುವುದು ಎಂದರ್ಥ.

೫. **ವೇದೇಷು** – ಎಂಬ ಭಗವದ್ಗೀತೆಯ ಎಂಟನೆಯ ಅಧ್ಯಾಯದ ಕೊನೆಯ ಶ್ಲೋಕದ ವಿವರಣೆಯಂತಿರುವುದು ಈ ಶ್ಲೋಕದ ವಿಶೇಷ:

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್॥(೮/೨೮)**

೬. ಶ್ಲೋಕ ೫೦ರಿಂದ ೫೫ನೇ ಶ್ಲೋಕದ ವರೆಗಿನ ಒಟ್ಟು ಆರು ಶ್ಲೋಕಗಳೂ ಸಹ ಅಗಸ್ತ್ಯರ ವಚನಗಳೇ ಆಗಿವೆ.

★★

## ಸಕಲವಿಧಕಾಮನೆಗಳ ಸಿದ್ಧಿಗೂ ಶ್ರೀಹರಿಯ ಆರಾಧನೆಯೇ ಉಪಾಯ

**ಔರ್ವಃ**

**ಆರಾಧ್ಯೈವಂ ನರೋ ವಿಷ್ಣುಂ ಮನಸಾ ಯದ್ಯದಿಚ್ಛತಿ ।**
**ಫಲಂ ¹ಪ್ರಾಪ್ನೋತಿ ವಿಪುಲಂ ಭೂರಿ ಸ್ವಲ್ಪಮಥಾಪಿ ವಾ ॥ ೫೬ ॥**

**ಅ:** ಔರ್ವರು ಹೇಳುವರು: 'ಮನುಷ್ಯನು ವಿಷ್ಣುವನ್ನು ಆರಾಧಿಸಿಯೇ ಮನಸ್ಸಿನಿಂದ ತಾನು ಏನೆಲ್ಲವನ್ನೂ ಬಯಸುವನೋ, ಅಂತಹ ಫಲ ಚಿಕ್ಕದಿರಲಿ ಅಥವಾ ದೊಡ್ಡದಿರಲಿ, ಅದನ್ನೆಲ್ಲ ವಿಪುಲವಾಗಿ ಹೊಂದುವನು'.

**ವಿ:** ೧. ವಿಷ್ಣುವಿನ ಆರಾಧನೆಯಿಂದ ಸಾಮಾನ್ಯಫಲಗಳಿಂದ ಹಿಡಿದು ಮಹತ್ತರ-ವಾದ ಸಕಲಫಲಗಳೂ ಸಹ ಲಭಿಸುವವು ಎಂಬುದು ಇಲ್ಲಿಯ ವಿಶೇಷಾಂಶ. ಎಂದರೆ, ದೈನಂದಿನ ಸಾಮಾನ್ಯ ಅಪೇಕ್ಷೆಗಳ ಸಿದ್ಧಿಗಾಗಲೀ ಮೋಕ್ಷಾದಿ ಮಹಾಪುರುಷಾರ್ಥಗಳ ಸಿದ್ಧಿಗಾಗಲೀ ಶ್ರೀವಿಷ್ಣುವಿನ ಆರಾಧನೆಯೇ ಮುಖ್ಯ ಸಾಧನ ಎಂದರ್ಥ.

---

೧. 'ಪ್ರಾಪ್ನೋತ್ಯವಿಕಲಂ' (ಪಾ.)

೨. ಸಾಮಾನ್ಯಫಲಕ್ಕೆ ಸಾಮಾನ್ಯದೇವತೆ, ಮಹತ್‌ಫಲಕ್ಕೆ ಅಸಾಮಾನ್ಯದೇವತೆ ಎಂಬ ತಪ್ಪು ಕಲ್ಪನೆಯನ್ನು ತೊರೆದು ಯಾವುದೇ ಬಯಕೆಯ ಪೂರ್ಣಸಿದ್ಧಿಗೂ ಸಹ ಶ್ರೀಹರಿಯನ್ನೇ ಆರಾಧಿಸಬೇಕು ಎನ್ನುವುದು ಇಲ್ಲಿಯ ಸಂದೇಶ.

★★

## ಶ್ರೀಹರಿಯ ನಾಮಕೀರ್ತನೆಯಿಂದ ಸಕಲಪಾಪಗಳ ಪರಿಹಾರ

**[೧]ಯನ್ನಾಮಕೀರ್ತನಂ ಭಕ್ತ್ಯಾ [೨]ವಿಲಾಪನಮನುತ್ತಮಮ್ ।**
**ಮೈತ್ರೇಯಾಶೇಷಪಾಪಾನಾಂ [೩]ಧಾತೂನಾಮಿವ ಪಾವಕಃ ॥ ೫೭ ॥**

**ಅ:** ಎಲೈ ಮೈತ್ರೇಯನೇ ! ಭಕ್ತಿಯಿಂದ ಶ್ರೀಹರಿಯ ನಾಮಕೀರ್ತನೆ, ನಾಮಚಿಂತನೆ ಮಾಡಿದರೆ ಸಕಲಪಾಪಗಳು, ಲೋಹಗಳು ಅಗ್ನಿಯಿಂದ ಹೇಗೋ ಹಾಗೆ, ಸುಟ್ಟುಹೋಗುವವು.

ವಿ: ಲೋಹಗಳ ದಹನಕ್ಕೆ ಅಗ್ನಿಯು ಹೇಗೋ ಸಕಲ ಪಾಪಗಳ ಪರಿಹಾರಕ್ಕೂ ಭಗವನ್ನಾಮಕೀರ್ತನೆ ಮುಖ್ಯಸಾಧನ ಎಂದರ್ಥ.

★★

## ಶ್ರೀಹರಿಯ ಕೀರ್ತನೆಯಿಂದ ಕಲಿದೋಷದ ಪರಿಹಾರ

**ಕಲಿಕಲ್ಮಷಮತ್ಯುಗ್ರಂ ನರಕಾರ್ತಿಪ್ರದಂ ನೃಣಾಮ್ ।**
**ಪ್ರಯಾತಿ ವಿಲಯಂ ಸದ್ಯಃ ಸಕೃತ್ ಸಂಕೀರ್ತಿತೇಽಚ್ಯುತೇ ॥ ೫೮ ॥**

**ಅ:** ಅಚ್ಯುತನಾದ ಶ್ರೀಹರಿಯನ್ನು ಒಮ್ಮೆ ಭಕ್ತಿಯಿಂದ ಸ್ಮರಿಸಿದಾಗ ಮನುಷ್ಯರಿಗೆ ನರಕದುಃಖವನ್ನು ನೀಡುವ ಅತ್ಯಂತ ಭಯಂಕರವಾದ ಕಲಿಯ ದೋಷವು ಕೂಡಲೇ ಸಂಪೂರ್ಣವಾಗಿ ನಾಶ ಹೊಂದುವುದು.

ವಿ: ೧. ಕಲಿಯ ದೋಷದ ಫಲಶ್ರುತಿ ನರಕಾದಿದುಃಖ. ಅದು ಅತ್ಯಂತ ಉಗ್ರವಾದುದು. ಕಲಿಯು ಬ್ರಹ್ಮವರದಿಂದಾಗಿ ರುದ್ರಾದಿದೇವತೆಗಳನ್ನೂ ಸಹ ಪೀಡಿಸುವ ಮಹಾದೈತ್ಯ. ಅಂತಹವನ ಪೀಡೆಯನ್ನು ಪರಿಹರಿಸುವ ಮಹಾಸಾಮರ್ಥ್ಯ ಶ್ರೀಹರಿಯ ಸ್ಮರಣೆಯದು. ತನ್ನನ್ನು ಒಮ್ಮೆ ಸ್ಮರಿಸಿದಾಗಲೇ ಅಂತಹ ಅತ್ಯುಗ್ರವಾದ ಕಲಿಕಲ್ಮಷವನ್ನು ಪರಿಹರಿಸುವ ಶ್ರೀಹರಿ ಸರ್ವೋತ್ತಮ ಎಂದರ್ಥ. ಅವನು ಸಕಲಗುಣಗಳಿಂದಲೂ ಸದಾ

---

೧. ವಿಷ್ಣುಪುರಾಣ (೬/೮/೨೦)
೨. 'ವಿಲಾಯನ...' (ಪಾ.)
೩. ಧಾತೂನಾಂ ರಸಗಂಧಕಾದೀನಾಮ್ ॥ (ತಾ) ; ಧಾತೂನಾಂ ಸುವರ್ಣಾದೀನಾಮ್ ॥ (ಉ)

ಪೂರ್ಣನಾದ್ದರಿಂದ ಅಚ್ಯುತಶಬ್ದವಾಚ್ಯನಾದವನು: **ಅಚ್ಯುತೋ ಯೋ ಗುಣೈರ್ನಿತ್ಯ-ಮೇವಾಖಿಲೈಃ। (ದ್ವಾದಶಸ್ತೋತ್ರ-೮/೮)**

೨. ಶ್ರೀಹರಿಯ ಕಲ್ಕಿರೂಪ ಕಲಿಯುಗಕ್ಕೆ ನಾಶವುಂಟುಮಾಡುವಂತಹುದು ಎಂಬುದು ಸುಪ್ರಸಿದ್ಧವಾದ ವಿಚಾರ. ಕಲ್ಕಿನಾಮದ ಅರ್ಥವೂ ಇದೇ ಆಗಿದೆ :

**ಕಲಿಮಲಹುತವಹ ಸುಭಗ ಮಹೋತ್ಸವ**
**ಶರಣದ ಕಲ್ಕೀಶ ಭವ ಮಮ ಶರಣಮ್। - ದ್ವಾದಶಸ್ತೋತ್ರ (೯/೧೪)**
**ಕಲೇಸ್ತು ಕಾತ್ಕಾರತ ಏವ ಕಲ್ಕೀ**
**ಜ್ಞಾನಂ ಕಲಂ ಕಂ ಸುಖಮೇವ ತದ್ವಾನ್ – ಕಲ್ಕೀತಿ।**
**-ಮ.ಭಾ.ತಾ.ನಿ.(೩೨/೧೬೧)**

೩. **ಕಲಿಯುಗದಲಿ ಹರಿನಾಮವ ಸ್ಮರಿಸಲು ಕುಲಕೋಟಿಗಳುದ್ಧರಿಸುವವು** – ಎಂಬ ಶ್ರೀಪುರಂದರದಾಸರ ಕೀರ್ತನೆ ಇದರ ವಿವರಣೆಯಂತಿದೆ.

೪. ಶ್ರೀಕೃಷ್ಣರೂಪದ ಶ್ರೀಹರಿ ಭೀಮನ ಮೂಲಕ ಕಲಿನಿಗ್ರಹ ಮಾಡಿದ ಅಪೂರ್ವ ಪ್ರಸಂಗವು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಿರೂಪಿತವಾಗಿರುವುದು ಇದಕ್ಕೆ ನಿದರ್ಶನ.

★★

## ಶ್ರೀಹರಿಯನ್ನು ಆಶ್ರಯಿಸುವವರಿಗೆ ಸರ್ವದೇವತಾನುಗ್ರಹಪ್ರಾಪ್ತಿ

**ಅನಾಯಾಸೇನ ಚಾಯಾಂತಿ ಮುಕ್ತಿಂ ಕೇಶವಸಂಶ್ರಿತಾಃ[೧]।**
**ತದ್ವಿಘಾತಾಯ[೨] ಜಾಯಂತೇ [೩]ಶಕ್ರಾದ್ಯಾಃ ಪರಿಪಂಥಿನಃ ॥ ೫೯ ॥**

**ಅ:** ಬ್ರಹ್ಮರುದ್ರಪ್ರವರ್ತಕನಾದ ಶ್ರೀಹರಿಯನ್ನು ಆಶ್ರಯಿಸುವವರು ಅನಾಯಾಸ-ದಿಂದ ಮುಕ್ತಿಗೆ ತೆರಳುವರು; ಅದಕ್ಕೆ ಒದಗುವ ವಿಘ್ನವನ್ನು ಇಂದ್ರಾದಿದೇವತೆಗಳು ಪರಿಹರಿಸುವರು.

---

೧. 'ತೇ ಯಾಂತಿ ..... ಕೇಶವಮಾಶ್ರಿತಾಃ' (ಪಾ.)

೨. ಮುಕ್ತೇರ್ವಿಘಾತಾಯ ಯೇ ಜಾಯಂತೇ । ತೇಷಾಂ ಅಸುರಾಣಾಂ ಶಕ್ರಾದ್ಯಾಃ ಪರಿಪಂಥಿನಃ ಇತ್ಯರ್ಥಃ । ಅಥವಾ ತದ್ವಿಘಾತಾಯ ಮುಕ್ತ್ಯಾವಿಘಾತಕಾಸುರವರ್ಗಾಯ ಶಕ್ರಾದ್ಯಾಃ ಪರಿಪಂಥಿನೋ ಜಾಯಂತೇ ಭವಂತೀತ್ಯರ್ಥಃ॥ (ತಾ)
ತೇಷಾಂ ವಿಷ್ಣ್ವಾಶ್ರಿತಾನಾಂ ವಿಘಾತಾಯ ಭವಂತಿ । ವಿಘ್ನಮುದ್ದಿಶ್ಯ ಪರಿಪಂಥಿನೋ ಜಾಯಂತೇ । ಮೋಕ್ಷವಿಘ್ನಪರಿಹಾರಕಾ ಭವಂತೀತ್ಯರ್ಥಃ। 'ಆತ್ಮನೋ ಭಜನೇ ಬುದ್ಧಿಮುತ್ಪಾದ್ಯ ಫಲದಾಃ ಸುರಾಃ' ಇತ್ಯುಕ್ತೇಃ॥ (ಉ)
ಮೋಕ್ಷವಿಘ್ನಪರಿಹಾರಕಾ ಭವಂತೀತ್ಯರ್ಥಃ। 'ಆತ್ಮನೋ ಭಜನೇ ಬುದ್ಧಿಮುತ್ಪಾದ್ಯ ಫಲದಾಸ್ಸುರಾಃ' ಇತ್ಯುಕ್ತೇಃ॥ (ಉಪೇ)

೩. ಶಾಕ್ಯಾದ್ಯಾ ಇತಿ ಪಾಠೇ ತು ಸ್ಪಷ್ಟೋಽರ್ಥಃ॥ (ಸ್ವ.ಕೃ)

ವಿ: ೧. ಶ್ರೀಹರಿಯನ್ನು ಆಶ್ರಯಿಸುವುದು ಅನಾಯಾಸದಿಂದ ಮುಕ್ತಿಗೆ ಸಾಧನ. ಆದರೆ ಇಂದ್ರಾದಿದೇವತೆಗಳ ಆರಾಧನೆ ಮುಕ್ತಿಗೆ ಸಾಧನವಾಗದು. ಆದ್ದರಿಂದ ಅವರನ್ನು ಆರಾಧಿಸುವುದು ಒಂದು ರೀತಿ ಮುಕ್ತಿಗೆ ಅಡ್ಡಿಯಾಗುವುದು ಎಂದರ್ಥ.

೨. ಇಲ್ಲಿ ಇಂದ್ರಾದಿದೇವತೆಗಳು ವಿಷ್ಣುವನ್ನು ಆರಾಧಿಸುವವನಿಗೆ ವಿಘ್ನಗಳನ್ನು ಒಡ್ಡುವ ಮೂಲಕ ಅಡ್ಡಿ ಪಡಿಸುವರು. ಅವರು ಹಾಗೆ ಅಡ್ಡಿ ಪಡಿಸುವುದು ಅವರ ನಿಷ್ಠೆಯನ್ನು ಪರೀಕ್ಷಿಸಲೆಂದೇ ಹೊರತು ನಿಜಕ್ಕೂ ವಿಘ್ನಮಾಡಲೆಂದಲ್ಲ ಎಂಬ ವಿಶೇಷವಿವರ ಶ್ರೀಮದ್ಭಾಗವತಪುರಾಣದ ಧ್ರುವಚರಿತ್ರೆಯ ವಿವರಣೆಯ ಪ್ರಸಂಗದಲ್ಲಿ ಶ್ರೀಮದ್ಭಾಗವತ-ತಾತ್ಪರ್ಯನಿರ್ಣಯದಲ್ಲಿ ಬಂದಿದೆ (೪/೯/೮೦):

**ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್ ।**
**ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ ತು ವಿಘಾತನೇ ।**
**ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್ ।**
**ಸತ್ಯಕಾಮಾ ಯತೋ ದೇವಾಸ್ತಚ್ಚಿತ್ತಾದದ್ಯಭಿಮಾನಿನಃ ।**
**ತತೋ ವಿಮೋಹನಾಯೈವ ಪ್ರಾಪ್ನುಯುಸ್ತೇ ಪರಾಜಯಮ್ ।**
**ತೇಷಾಮಶಕ್ತಿತೋಕ್ತಿಶ್ಚ ವಿಮೋಹಾಯ ಸುರದ್ವಿಷಾಮ್ ' ಬ್ರಹ್ಮಾಂಡೇ ॥**

೩. ತಮ್ಮನ್ನು ಸರ್ವೋತ್ತಮತ್ವೇನ ಆರಾಧಿಸುವವರ ಪಾಲಿಗಂತೂ ಇಂದ್ರಾದಿ-ದೇವತೆಗಳು ಸರ್ವಥಾ ಶುಭಫಲವನ್ನು ನೀಡದೇ ಅನರ್ಥಕ್ಕೇ ಕಾರಣರಾಗುವರು ಎಂಬರ್ಥವು ಇಲ್ಲಿ ವಿವಕ್ಷಿತ.

೪. ಬ್ರಹ್ಮಾದಿದೇವತೆಗಳು ರಾವಣಮೊದಲಾದವರಿಗೆ ನೀಡಿದ ಫಲ ಅವರ ಉದ್ಧಾರಕ್ಕೆ ಸಾಧನವಾಗದೇ ಪತನಕ್ಕೇ ಕಾರಣವಾಯಿತು ಎಂಬುದು ಶ್ರೀಮದ್ಭಾಗವತಾದಿಗಳಲ್ಲಿ ಸುಪ್ರಸಿದ್ಧ. ಇಲ್ಲಿ **ಶಕ್ರಾದ್ಯಾಃ** ಎಂಬಲ್ಲಿನ ಆದಿಶಬ್ದಕ್ಕೆ ಬ್ರಹ್ಮಾದಿಗಳು ವಿವಕ್ಷಿತ.

★★

## ಶ್ರೀಹರಿಯ ಹೊರತು ಮತ್ತೊಬ್ಬ ಸರ್ವಪಾಪನಾಶಕನಿಲ್ಲ

**ಚತುಃಸಾಗರಮಾಸಾದ್ಯ ಜಂಬೂದ್ವೀಪೋತ್ತಮೇ ಕ್ವಚಿತ್ ।**
**ನ ಪುಮಾನ್ ಕೇಶವಾದನ್ಯಃ ಸರ್ವಪಾಪಚಿಕಿತ್ಸಕಃ ॥ ೬೦ ॥**

**ಅ:** ನಾಲ್ಕು ಸಮುದ್ರಗಳವರೆಗೆ ಹೋಗಿ ಹುಡುಕಿದರೂ, ಜಂಬೂದ್ವೀಪವೆಂಬ ಉತ್ತಮದ್ವೀಪದಲ್ಲಿ ಸಕಲಪಾಪಗಳನ್ನು ಪರಿಹರಿಸುವವನು ಶ್ರೀಹರಿಯ ಹೊರತು ಮತ್ತೊಬ್ಬನು ದೊರಕನು.

ವಿ: ಇದು **ನ ದೈವಂ ಕೇಶವಾತ್ಪರಮ್** ಎಂಬ ಹರಿವಂಶದ ಮಾತಿನ ವಿವರಣೆಯಂತಿದೆ. ಕೇಶವ ಎಂದರೆ ಬ್ರಹ್ಮರುದ್ರಾದಿಪ್ರವರ್ತಕ ಎಂದರ್ಥ ಈಗಾಗಲೇ ಬಂದಿದೆ (ಶ್ಲೋಕ. ೧).

## ಕಲಿಯುಗದಲ್ಲಿ ಹರಿಕೀರ್ತನೆಯ ಮಹಿಮೆ

**ಯದಭ್ಯರ್ಚ್ಯ ಹರಿಂ ಭಕ್ತ್ಯಾ ಕೃತೇ ವರ್ಷಸಹಸ್ರಕಮ್ ।**
**ಫಲಂ ಪ್ರಾಪ್ನೋತ್ಯವಿಕಲಂ[೧] ಕಲೌ ಸಂಕೀರ್ತ್ಯ ಕೇಶವಮ್ ॥ ೬೧ ॥**

**ಅ:** ಕೃತಯುಗದಲ್ಲಿ ಶ್ರೀಹರಿಯನ್ನು ಭಕ್ತಿಯಿಂದ ಸಾವಿರವರ್ಷಗಳ ಕಾಲ ಪೂಜಿಸಿದಾಗ ಲಭಿಸುವ ಫಲವು, ಕಲಿಯುಗದಲ್ಲಿ ಶ್ರೀಹರಿಯನ್ನು ಕೀರ್ತಿಸು-ವುದರಿಂದಲೇ ಲಭಿಸುವುದು.

**ವಿ:** ೧. ಕೃತಯುಗದ ಸಾವಿರವರ್ಷಗಳ ಪೂಜೆಗೆ ಕಲಿಯುಗದ ಹರಿಸ್ಮರಣೆ ಸಮಾನ ಎಂದರ್ಥ. ಕಲಿಯುಗದಲ್ಲಿ ಧರ್ಮಾಚರಣೆಗೆ ಅನುಕೂಲತೆ ತುಂಬಾ ಕಡಿಮೆಯಾದ್ದರಿಂದ ಇಲ್ಲಿ ಮಾಡುವ ಕೇವಲ ಕೀರ್ತನೆಗೂ ಅಷ್ಟು ಅಪಾರವಾದ ಫಲ ಲಭಿಸುವುದು ಎಂದರ್ಥ. ಈ ಬಗ್ಗೆ ವಿವರಗಳನ್ನು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಕಾಣಬಹುದು. ಭೀಮಸೇನನ ಆಳ್ವಿಕೆಯಲ್ಲಿ ಧರ್ಮ ಪೂರ್ಣಪ್ರಮಾಣದಲ್ಲಿ ಮೆರೆಯತೊಡಗಿದಾಗ ಅದು ಕೃತಯುಗಕ್ಕಿಂತಲೂ ಮಿಗಿಲೆನ್ನಿಸಿತ್ತು ಎಂಬ ವಿಶೇಷವಿವರಣೆಯನ್ನು ನೀಡಿರುವರು.

೨. ಕೇವಲ ಸ್ಮರಣೆಮಾತ್ರದಿಂದಲೇ ವಿಶೇಷ ಹರಿಪ್ರೀತಿಗೆ ಸಾಧನವಾಗುವುದರಿಂದ ಜ್ಞಾನಿಗಳು ಕಲಿಯುಗದಲ್ಲಿ ಜನಿಸಬಯಸುವರು ಎಂಬ ವಿಶೇಷಾಂಶ ಶ್ರೀಮದ್ಭಾಗವತದಲ್ಲಿದೆ:

**''ಕಲಿಂ ಸಂಭಾಜಯಂತ್ಯಾರ್ಯಾಃ ಗುಣಜ್ಞಾಃ ಸಾರಭಾಗಿನಃ ।**
**ಯತ್ರ ಸಂಕೀರ್ತನೇನೈವ ಸರ್ವಸ್ವಾರ್ಥೋಽಭಿಲಭ್ಯತೇ ॥**
**ನಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ ।**
**ಯತೋ ವಿಂದಂತಿ ಪರಮಾಂ ಶಾಂತಿಂ ನಶ್ಯತಿ ಸಂಸೃತಿಃ ॥**
**ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛಂತಿ ಸಂಭವಮ್ ।**
**ಯತ್ರ ಸಂಕೀರ್ತಿತೋ ನೃಣಾಂ ಹರಿರ್ದಾಸ್ಯತ್ಯಸಂಭಮ್'' ॥ – ಭಾಗವತ**

★★

## ಕಲಿಯುಗದಲ್ಲಿ ಹರಿಕೀರ್ತನೆ ದುರ್ಲಭ

**ಕ್ಷೀಯತೇ ತು ಯದಾ ಧರ್ಮಃ ಪ್ರಾಪ್ತೇ ಘೋರೇ ಕಲೌ ಯುಗೇ ।**
**ತದಾ ನ ಕೀರ್ತಯೇತ್ ಕಶ್ಚಿನ್ಮುಕ್ತಿದಂ ದೇವಮಚ್ಯುತಮ್ ॥ ೬೨ ॥**

**ಅ:** ಘೋರವಾದ ಕಲಿಯುಗ ಒದಗಿದಾಗ ಧರ್ಮವು ಕ್ಷೀಣಿಸುವುದು; ಆಗ ಮುಕ್ತಿ ನೀಡುವ ದೇವನಾದ ಅಚ್ಯುತನಾದ ಶ್ರೀಹರಿಯನ್ನು ಯಾವನೂ ಕೀರ್ತಿಸಲಾರನು.

---

೧. ಫಲಮಾಪ್ನೋತಿ ವಿಪುಲಂ ( ಪಾ.)

ವಿ: ೧. ಶ್ರೀಹರಿಯು ಹೀಗೆ ಮುಕ್ತಿಪ್ರದನಾದ ಸರ್ವೋತ್ತಮದೇವತೆಯಾಗಿದ್ದರೂ ಕಲಿಯುಗದ ಜನಮಾತ್ರ ಅವನನ್ನು ಕೀರ್ತಿಸುವುದಿಲ್ಲ ಎಂಬುದು ವಿಶೇಷ. ಅದಕ್ಕೆ ಕಾರಣ ಧರ್ಮಪ್ರಜ್ಞೆ ಕ್ಷೀಣಿಸಿರುವುದೇ ಆಗಿದೆ ಎಂದರ್ಥ. ಧರ್ಮಾಚರಣೆಯಿಲ್ಲದವರಿಗೆ ಹರಿಯನ್ನು ಕೀರ್ತಿಸುವ ಸೌಭಾಗ್ಯ ಲಭಿಸದು ಎಂದು ತಾತ್ಪರ್ಯ.

೨. ಕಲಿಯುಗವು ದುರ್ಯೋಧನನ ಪತನಕಾಲದಿಂದಲೇ ಪ್ರಾರಂಭವಾಯಿತು. ಆ ಸಮಯದಲ್ಲೂ ಶ್ರೀಕೃಷ್ಣ ಭೀಮರ ಸಾಮರ್ಥ್ಯದಿಂದಾಗಿ ಕೃತಕ್ಕೆ ಮಿಗಿಲೆನಿಸುವ ಸನ್ನಿವೇಶ ಭೂಲೋಕದಲ್ಲಿ ಉಂಟಾಯಿತು ಎಂಬ ವಿಶೇಷಾಂಶವನ್ನು ಶ್ರೀಮದಾಚಾರ್ಯರು ತಿಳಿಸಿರುವರು :

**ಸಮಾರಬ್ಧಂ ಕಲಿಯುಗಂ ಯದಾ ದುರ್ಯೋಧನೋಽಪತತ್ ।**
**ಷಟ್ತ್ರಿಂಶಾಬ್ದಂ ಪುನಃ ಕೃಷ್ಣಃ ಕೃತಮೇವಾನ್ವವರ್ತಯತ್ ॥**
**ಕೃತಾದಪಿ ವಿಶೇಷೋಽಯಂ ಯತ್ಪುಣ್ಯಸ್ಯಾಧಿಕಂ ಫಲಮ್ ।**
**ಅಲ್ಪಮೇವ ಚ ಪಾಪಸ್ಯ ಕಾಲಾತ್ ಕೃಷ್ಣಾಜ್ಞಯಾ ತಥಾ ॥**
**- ಮ.ಭಾ.ತಾ.ನಿ (೩೨/೧೦,೧೧)**

೩. ಕೇವಲ ಕೀರ್ತನೆಯಿಂದಲೇ ಸದ್ಗತಿಗೆ ಕಾರಣವಾಗುವ ಹಿರಿಮೆ ಕಲಿಯುಗದ್ದು ಎಂಬ ವಿಶೇಷಾಂಶ ಶ್ರೀಮದ್ಭಾಗವತದಲ್ಲಿದೆ:

**ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಸಂಗಃ ಪರಂ ವ್ರಜೇತ್ ॥ - ಭಾಗವತ(೧೨/೩/೫೧)**

**ಕಲೌ ನ ರಾಜನ್ ಜಗತೋ ಪರಂ ಗುರುಂ ತ್ರಿಲೋಕನಾಥಾನತಪಾದಪಂಕಜಮ್ ।**
**ಪ್ರಾಯೇಣ ಮರ್ತ್ಯಾ ಭಗವಂತಮಚ್ಯುತಂ ಯಕ್ಷ್ಯಂತಿ ಪಾಖಂಡವಿಭಿನ್ನಚೇತಸಃ ॥**
**ಯನ್ನಾಮಧೇಯಂ ಮ್ರಿಯಮಾಣ ಆತುರಃ ಪತನ್ ಸ್ಖಲನ್ ವಾ ವಿವಶೋ ಗೃಣನ್ ಪುಮಾನ್ ।**
**ವಿಮುಕ್ತಕರ್ಮಾರ್ಗಲ ಉತ್ತಮಾಂ ಗತಿಂ ಪ್ರಾಪ್ನೋತಿ ಯಕ್ಷ್ಯಂತಿ ನ ತೇ ಕಲೌ ಜನಾಃ ॥**
**- ಭಾಗವತ (೧೨/೩/೪೩,೪೪)**

**ಕಲಿಕಾಲಕಾಲಿತಗುಣೇ ಧರಾತಲೇ ಸುಜನೋ ನ ನೂನಮಧುನಾಽಸ್ತಿ ಯೋಗ್ಯಧೀಃ ।**
**ಪರತತ್ತ್ವವರ್ಣನಮಯೋಗ್ಯತಾವತೇ ನನು ಹವ್ಯದಾನಮಪಿ ನಿಂದ್ಯತೇ ಶುನೇ ॥**
**- ಸುಮಧ್ವವಿಜಯ (೮/೪೯)**

★★

**ಮೈಮರೆತು ಶ್ರೀಹರಿಯನ್ನು ಕೀರ್ತಿಸುವುದು ಸಹ ಪುಣ್ಯಕರ**

**ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।**
**ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತಮೃಗೈರಿವ[1] ॥ ೬೩ ॥**

೧. ಸಿಂಹತ್ರಸ್ತೈರ್ಮೃಗೈರಿವ ( ಪಾ.) ; ವಿಷ್ಣುಸ್ಮೃತಿ ೧೫/೧೬

ಅ: ಮೈಮರೆತಾದರೂ ಶ್ರೀಹರಿಯ ನಾಮವನ್ನು ಕೀರ್ತಿಸಿದಾಗ, ಸಿಂಹದಿಂದ ಭಯಗೊಂಡ ಜಿಂಕೆಗಳಿಂದ ಹೇಗೋ ಹಾಗೆ, ಮನುಷ್ಯನು ಸರ್ವಪಾತಕ-ಗಳಿಂದಲೂ ಕೂಡಲೇ ಬಿಡುಗಡೆ ಹೊಂದುವನು.

ವಿ: ೧. ಶ್ರೀಹರಿನಾಮದ ಕೀರ್ತನೆಯ ವೈಭವವನ್ನು ಇಲ್ಲಿ ಮತ್ತೊಂದು ಬಗೆಯಲ್ಲಿ ನಿರೂಪಿಸಿರುವರು. ಮೈಮರೆತು ಮಾಡುವ ಹರಿಕೀರ್ತನೆಯೂ ಸಹ ಸರ್ವಪಾಪ-ಪರಿಹಾರಕ ಎಂಬುದು ವಿಶೇಷ. ಪಾಪಗಳು ನರಸಿಂಹನಾದ ಶ್ರೀಹರಿಯ ಸ್ಮರಣೆಯಿಂದ ಬಿಡುಗಡೆ ಹೊಂದುವ ಬಗೆಯನ್ನು ಸಿಂಹಕ್ಕೆ ಅಂಜಿ ಜಿಂಕೆಗಳು ಓಡುವ ರೀತಿಗೆ ಹೋಲಿಸಿರುವುದು ಗಮನಾರ್ಹ.

೨. ಮೃಗಗಳು ಮೃಗರಾಜನಾದ ಸಿಂಹಕ್ಕೆ ಅಂಜಿ ದೂರಾಗುವಂತೆ ಮೃಗದಂತಹ ಪಾಪಗಳು ನರಸಿಂಹನಾದ ಶ್ರೀಹರಿಯ ನಾಮಸ್ಮರಣೆಗೆ ಅಂಜಿ ನಾಶವಾಗುವವು. ಜಿಂಕೆಗಳು ಅಂಜುವುದು ಕೇವಲ ಸಿಂಹದ ನಾಮದಿಂದಲ್ಲ; ಆದರೆ ಪಾತಕಗಳು ಶ್ರೀಹರಿಯ ನಾಮಕ್ಕೇ ಅಂಜುವುದು ಎಂಬ ಇಲ್ಲಿಯ ನಿರೂಪಣೆ ಗಮನಾರ್ಹ.

೩. ಶ್ಲೋಕ ೫೬ರಿಂದ ೬೩ರವರೆಗಿನ ಶ್ಲೋಕಗಳು ಔರ್ವರ ವಚನಗಳು.

★★

## ನಾರಾಯಣನಾಮದ ಹಿರಿಮೆ

### ಬ್ರಹ್ಮಾ

**ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।**
**ತಥಾಽಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್[೧] ॥ ೬೪ ॥**

ಅ: ಬ್ರಹ್ಮದೇವರು ಹೇಳುವರು: 'ನಾರಾಯಣ ಎಂಬ ಮಂತ್ರವಿದೆ; ಬಯಸಿದ್ದನ್ನು ನುಡಿಯುವ ನಾಲಿಗೆ ಇದೆ; ಆದರೂ ಘೋರನರಕದಲ್ಲಿ ಬೀಳುವರು ಎಂಬುದು ಮಾತ್ರ ಅದ್ಭುತ !'.

ವಿ: ೧. ನಾರಾಯಣ ಎಂಬ ತಾರಕಮಂತ್ರವಿದ್ದು ಅದನ್ನು ಉಚ್ಚರಿಸಲೆಂದು ಶ್ರೀಹರಿಯು ನೀಡಿರುವ ನಾಲಿಗೆಯಿದ್ದು ಮನುಷ್ಯ ಅದರ ಉಪಯೋಗಪಡೆಯದೇ ನರಕದಲ್ಲಿ ಬೀಳುವುದು ಎಂತಹ ಆಶ್ಚರ್ಯ ಎಂದರ್ಥ.

೨. ನಾರಾಯಣನ ನಾಮ ನರಕದಿಂದ ಉದ್ಧಾರಮಾಡುವಂತಹದು. ನಾಮ-ಮಾತ್ರದಿಂದಲೇ ನರಕವನ್ನು ತಪ್ಪಿಸುವ ಶ್ರೀಹರಿಯ ಸ್ಮರಣೆಯನ್ನು ಮಾಡದ ಜನ ಎಂತಹ ಪಾಪಿಗಳು ಎಂಬುದು ಇಲ್ಲಿಯ ಭಾವ.

★★

---

೧. ಮಜ್ಜಂತೀತ್ಯೇತದದ್ಭುತಮ್ ( ಪಾ.) ; ವಾಯುಪುರಾಣ ಮಾಘಮಾಹಾತ್ಮ್ಯ (೪೯)

### ಸಕಲರಿಗೂ ಹರಿಕೀರ್ತನೆಯಿಂದಲೇ ಕಲ್ಯಾಣ

**ಆರ್ತಾ ವಿಷಣ್ಣಾಃ [1]ಶಿಥಿಲಾಶ್ಚ ಭೀತಾ**
**ಘೋರೇಷು ಚ ವ್ಯಾಧಿಷು ವರ್ತಮಾನಾಃ ।**
**ಸಂಕೀರ್ತ್ಯ ನಾರಾಯಣಶಬ್ದಮಾತ್ರಂ**
**ವಿಮುಕ್ತದುಃಖಾಃ ಸುಖಿನೋ ಭವಂತಿ** ॥ ೬೫ ॥

**ಅ**: ಆರ್ತರು, ವಿಷಣ್ಣರು, ವೃದ್ಧರು, ಭಯಗೊಂಡವರು, ಘೋರವ್ಯಾಧಿಗಳಿಂದ ನರಳುವವರು ಕೇವಲ ನಾರಾಯಣ ಎಂಬ ಶಬ್ದವನ್ನು ಭಕ್ತಿಯಿಂದ ಕೀರ್ತನೆ ಮಾಡಿದರೆ ಸಮಸ್ತದುಃಖಗಳಿಂದ ಬಿಡುಗಡೆ ಹೊಂದಿ ಸುಖಿಗಳಾಗುವರು.

ವಿ: ೧. ಶ್ರೀಹರಿಯ ನಾಮ ಎಷ್ಟು ಬಗೆಯ ಜನಗಳನ್ನು ಉದ್ಧಾರಮಾಡುವುದೆಂಬ ವಿವರ ಇಲ್ಲಿದೆ. ಭೀತರು ವ್ಯಾಧಿಗ್ರಸ್ತರು ಮೊದಲಾದ ಸಕಲರಿಗೂ ಸಹ ನಾರಾಯಣನಾಮ ಅತ್ಯಂತತಾರಕ ಎಂಬುದು ತಾತ್ಪರ್ಯ:

೨. ಇದು ಈ ಕೆಳಗಿನ ಗೀತಾಶ್ಲೋಕಕ್ಕೆ ವಿವರಣೆಯಂತಿರುವುದು ಗಮನಾರ್ಹ :

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸು ರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ (೭/೧೬)**

೩. ವಿಷಾದ ಎಂದರೆ ಮೋಹದ ಕಾರಣದಿಂದಾಗಿ ಒದಗುವ ಶೋಕದಿಂದ ಉಂಟಾಗುವ ಮನೋದೌರ್ಬಲ್ಯ; ಇದು ಸಕಲಕರ್ತವ್ಯಗಳಿಗೂ ಅಡ್ಡಿಯಾಗುವ ಪ್ರಬಲ-ದೋಷ: **ವಿಷಾದೋ ನಾಮ ಮೋಹನಿಮಿತ್ತಿಕಾತ್ ಶೋಕಾತ್ ಯನ್ಮನೋ-ದೌರ್ಬಲ್ಯಮ್ । ಯಸ್ಮಿನ್ ಸತಿ ಸರ್ವವ್ಯಾಪಾರೋಪರಮಃ ಸ ಇತಿ ಜ್ಞೇಯಮ್ ॥ - ಗೀತಾಭಾಷ್ಯಪ್ರಮೇಯದೀಪಿಕಾ**

೪. ಶ್ಲೋಕ ೬೪ ಮತ್ತು ೬೫ ಬ್ರಹ್ಮವಚನಗಳು: ಈ ಶ್ಲೋಕವು ಮಹಾಭಾರತದ ಭೀಷ್ಮಸ್ತವರಾಜದಲ್ಲೂ ಕಂಡುಬರುತ್ತದೆ.

★★

### ಶ್ರೀಹರಿಯ ಆರಾಧನೆ ಮೋಕ್ಷಹೇತು

**ಕೌಶಿಕಃ**

**ಅನಾರಾಧಿತಗೋವಿಂದಾ ಯೇ ನರಾ ದುಃಖಭಾಗಿನಃ ।**
**ಆರಾಧ್ಯ ವಾಸುದೇವಂ ಸ್ಯುಃ ಸದಾನಂದೈಕಭೋಗಿನಃ** ॥ ೬೬ ॥

---

೧. ಶಿಥಿಲಾ ಅವಯವಶೈಥಿಲ್ಯಯುಕ್ತಾಃ (ತಾ); ಶಿಥಿಲಾಃ ಅವಯವಶೈಥಿಲ್ಯಂ ಪ್ರಾಪ್ತಾಃ (ಉ); ಶಿಥಿಲಾಃ ಅಂಗಪಾಟವರಹಿತಾಃ (ಕೋ); ಶಿಥಿಲಾಃ ಜರಾದಿನಾ ದೇಹಾದೌ ದೌರ್ವಿಧ್ಯಯುಕ್ತಾಃ (ಸ್ಟ.ಕೃ); ಶಿಥಿಲಾಃ ಜರಾದಿನಾ ದೇಹಾದೌ ಶೈಥಿಲ್ಯಯುಕ್ತಾಃ (ಕೃ)

ಅ: ಕೌಶಿಕರು ಹೇಳುವರು : 'ಗೋವಿಂದನನ್ನು ಆರಾಧಿಸದ ಮನುಷ್ಯರೆಲ್ಲ ದುಃಖ-ಭಾಗಿಗಳು; ವಾಸುದೇವನನ್ನು ಆರಾಧಿಸಿದವರು ಸದಾ ಆನಂದವನ್ನೇ ಹೊಂದುವರು'.

ವಿ: ೧. ಶ್ರೀಹರಿಯ ಆರಾಧನೆಯನ್ನು ತೊರೆದವರೆಲ್ಲ ದುಃಖಹೊಂದುವವರೇ. ಆದರಂತೆ ಶ್ರೀಹರಿಯ ಆರಾಧನೆಯನ್ನು ಮಾಡುವವರೆಲ್ಲಾ ಸದಾ ಸುಖಿಗಳೇ ಎಂದರ್ಥ. ದುಃಖಪಡುವವರೆಲ್ಲಾ ಶ್ರೀಹರಿಯನ್ನು ಆರಾಧಿಸದವರು; ಸುಖವಾಗಿರುವವರೆಲ್ಲಾ ಶ್ರೀಹರಿಯನ್ನು ಆರಾಧಿಸಿದವರು ಎಂಬರ್ಥವು ಇದರಿಂದ ಸೂಚಿತ.

೨. ದುಃಖಭಾಗಿಗಳು ಎಂಬುದಕ್ಕೆ ಮುಖ್ಯವಾಗಿ ನಿತ್ಯದುಃಖವಾದ ಅಂಧಂತಮಸ್ಸಿಗೆ ತೆರಳುವವರು ಎಂಬರ್ಥವು, ಸದಾನಂದೈಕಭೋಗಿಗಳು ಎಂಬುದಕ್ಕೆ ನಿತ್ಯಾನಂದ ರೂಪವಾದ ಮೋಕ್ಷವನ್ನು ಹೊಂದುವವರು ಎಂಬ ಅರ್ಥವು ವಿವಕ್ಷಿತ.

★★

## ಒಮ್ಮೆ ಶ್ರೀಹರಿಯನ್ನು ಕೀರ್ತಿಸುವುದೂ ಸದ್ಗತಿಗೆ ಕಾರಣ

**[೧]ಸಕೃದುಚ್ಚರಿತೋ ಯೈಸ್ತು ಕೃಷ್ಣೇತಿ ನ ವಿಶಂತಿ ತೇ ।**
**ಗರ್ಭಾಗಾರಗೃಹಂ ಮಾತುರ್ಯಮಲೋಕಂ ಚ ದುಃಸಹಮ್[೨] ॥ ೬೮ ॥**

ಅ: ಕೃಷ್ಣ ಎಂದು ಒಮ್ಮೆಯಾದರೂ ಉಚ್ಚರಿಸುವವರು ಸಹ ತಾಯಿಯ ಗರ್ಭದಲ್ಲಿ ನೆಲೆಸುವ ದುಃಖವನ್ನಾಗಲೀ, ಸಹಿಸಲಾಗದ ಯಮಲೋಕವನ್ನಾಗಲೀ, ಹೊಂದಲಾರರು.

ವಿ: ೧. ಕೃಷ್ಣನ ಸ್ಮರಣೆ ಪುನರ್ಜನ್ಮವನ್ನು ತಪ್ಪಿಸುವುದು, ನರಕವನ್ನು ಪರಿಹರಿಸುವುದು ಎಂದು ಭಾವ. ಶ್ರೀಹರಿಯ ಒಂದುಬಾರಿ ಸ್ಮರಣೆಯೆಂದರೆ ಭಕ್ತಿಪೂರ್ವಕವಾದ ಸ್ಮರಣೆ ವಿವಕ್ಷಿತ. ಅಂತಹ ಸ್ಮರಣೆ ಬಹುಜನ್ಮಗಳ ಸಾಧನೆಯ ಫಲ.

೨. ಇದರಿಂದ ಶ್ರೀವಾಯುದೇವರು ಮೊದಲಾದ ದೇವತೆಗಳು ಶ್ರೀಹರಿಯ ಆದೇಶದಂತೆ ಭೂಮಿಯಲ್ಲಿ ಅವತರಿಸಿದರೂ ಅವರಿಗೆ ಗರ್ಭವಾಸದ ದುಃಖ ಸರ್ವಥಾ ಇರದು ಎಂಬ ವಿಶೇಷಾಂಶ ಸೂಚಿತವಾಗಿದೆ: '**ಅಹಿಂಸ್ಯಮಾನಃ ಉರ್ವಿಯಾ ವಿವಾವೃಧೇ**(ಬಳಿತ್ಥಾಸೂಕ್ತ). ಆದರಂತೆ ದ್ರೋಣಾದಿಗಳು ಅಯೋನಿಜರಾಗಿ ಜನಿಸಿದ ಹಿನ್ನೆಲೆಯೂ ಸಹ ನಿರೂಪಿತವಾಗಿದೆ ಎಂದು ತಿಳಿಯಬೇಕು.

★★

---

೧. ಸಕೃದುಚ್ಚಾರಿತಮ್ ( ಪಾ.) ; ಗರ್ಭಾಗಾರಂ ಗೃಹಮ್ ( ಪಾ.) ; ೨. ಬ್ರಹ್ಮಪುರಾಣ (೨೦-೪೨) । ; ವಿಷ್ಣುಪುರಾಣ ೨-೬-೪೨ ॥ ; ೩. ಶ್ರೀಭಗವಾನುವಾಚ - ಇತಿ ಕ್ವಚಿತ್; ಪದ್ಮಪುರಾಣ( ಉತ್ತರಖಂಡ ೮೨/೧೮)

## ಶ್ರೀಹರಿನಾಮದ ಜಪವು ಮುಕ್ತಿಸಾಧನ

**ಕ್ವ ನಾಕಪೃಷ್ಠಗಮನಂ ಪುನರಾವೃತ್ತಿಲಕ್ಷಣಮ್[೩] ।**
**ಕ್ವ ಜಪೋ ವಾಸುದೇವೇತಿ ಮುಕ್ತಿಬೀಜಮನುತ್ತಮಮ್ ॥ ೬೮ ॥**

**ಅ:** ಮರಳಿ ಜನಿಸುವ ಅಪಾಯದಿಂದ ಕೂಡಿರುವ ಸ್ವರ್ಗಲೋಕಕ್ಕೆ ತೆರಳು-ವುದೆಲ್ಲಿ? ಅತ್ಯುತ್ತಮವಾದ ಮುಕ್ತಿಗೆ ಸಾಧನವಾದ 'ವಾಸುದೇವ' ಎಂದು ಜಪಿಸುವುದೆಲ್ಲಿ?

**ವಿ:** ೧. ಸ್ವರ್ಗ ಲಭಿಸುವುದಕ್ಕಿಂತಲೂ ವಾಸುದೇವನನ್ನು ಜಪಿಸುವುದು ಶ್ರೇಷ್ಠ ಎಂದರ್ಥ. ಸ್ವರ್ಗದ ಫಲ ಅನಿತ್ಯ: ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।(ಗೀ ೯,೨೧); ಆದರೆ ವಾಸುದೇವನನ್ನು ಆರಾಧಿಸುವುದು ಶಾಶ್ವತವಾದ ಮುಕ್ತಿಗೆ ಸಾಧನ. ಆದ್ದರಿಂದ ಸ್ವರ್ಗಪ್ರಾಪ್ತಿಯ ಸುಖಕ್ಕಿಂತ ವಾಸುದೇವನನ್ನು ಆರಾಧಿಸುವ ಭಾಗ್ಯ ತುಂಬಾ ಶ್ರೇಷ್ಠವಾದುದು ಎಂದರ್ಥ.

೨. **ದ್ವೌ ಕ್ವೌ ಮಹದಂತರಂ ಗಮಯತಃ** ಎಂಬ ನ್ಯಾಯದಂತೆ ಇಲ್ಲಿಯ ಎರಡು 'ಕ್ವ'ಕಾರಗಳು ಸ್ವರ್ಗಪ್ರಾಪ್ತಿ ಹಾಗೂ ವಾಸುದೇವಜಪಗಳಿಗಿರುವ ಮಹತ್ತರವಾದ ಅಂತರವನ್ನು ಸೂಚಿಸುವವು.

★★

## ಹರಿನಾಮವನ್ನು ಅರಿತು ಉಚ್ಚರಿಸಬೇಕು

**[೧]ಬುದ್ಧ್ವಾ ಬುದ್ಧ್ವಾ ವದಸ್ವೈನಂ ಹರಿರಿತ್ಯಕ್ಷರದ್ವಯಮ್ ।**
**[೨]ಸ್ಮರಣಾತ್ ಕೀರ್ತನಾದ್ಯಸ್ಯ ನ ಪುನರ್ಜಾಯತೇ ಕ್ವಚಿತ್ ॥ ೬೯ ॥**

**ಅ:** ಹರಿ ಎಂಬ ಎರಡು ಅಕ್ಷರಗಳನ್ನು ಬುದ್ಧಿಯಿಂದ ಚೆನ್ನಾಗಿ ತಿಳಿದು ಉಚ್ಚರಿಸು ; ಅವನ ಸ್ಮರಣೆ ಮತ್ತು ಕೀರ್ತನೆಗಳಿಂದಾಗಿ ಮತ್ತೊಮ್ಮೆ ಎಲ್ಲೂ ಹುಟ್ಟುವ ಪ್ರಸಂಗ ಒದಗದು.

**ವಿ:** ೧. ಹರಿನಾಮೋಚ್ಚಾರಣೆಯು ಅರ್ಥಜ್ಞಾನಪೂರ್ವಕವಾಗಿದ್ದಲ್ಲಿ ವಿಶೇಷಫಲ-ದಾಯಕ ಎಂದರ್ಥ. ಹರಿಯ ಸ್ಮರಣೆ ಮತ್ತು ಕೀರ್ತನೆಗಳು ಪುನರ್ಜನ್ಮವನ್ನು ಪರಿಹರಿಸುವ ಶ್ರೇಷ್ಠಸಾಧನವಾದ್ದರಿಂದ ಅದನ್ನು ಅರಿತು ಉಚ್ಚರಿಸುವ ಮೂಲಕ ಮುಖ್ಯಫಲವನ್ನು ಪಡೆಯುವ ವಿವೇಕವನ್ನು ತೋರಬೇಕು ಎಂದು ಭಾವ.

---

೧. ಬುಧ್ವಾಽಭ್ಯಸೇದೇತತ್ ( ಪಾ.);
೨. ಸ್ಮರಣಾದೇವ ಕೃಷ್ಣಸ್ಯ ( ಪಾ.) ; ನ ಪುನರ್ಜಾಯತೇ ಭುವಿ ( ಪ್ರ.)

೨. ಮೈಮರೆತು ಹರಿನಾಮವನ್ನು ಉಚ್ಚರಿಸುವುದು ತಾರಕವೇ ಆದರೂ ಅರ್ಥ-ಜ್ಞಾನಪೂರ್ವಕವಾದ ಉಚ್ಚಾರಣೆ ಮುಖ್ಯಫಲಕ್ಕೆ ಸಾಧನ ಎಂಬುದು ಇಲ್ಲಿಯ ವಿಶೇಷನಿರೂಪಣೆ.

★★

## ಹರಿನಾಮಕೀರ್ತನೆಯಿಂದ ಜಿಹ್ವೆಗೆ ಸಾರ್ಥಕ್ಯ

**ಹೇ ಜಿಹ್ವೇ ಮಮ ನಿಸ್ನೇಹೇ ಹರಿಂ ಕಿಂ ನು ನ ಭಾಷಸೇ[೧] ।**
**ಹರಿಂ ವದಸ್ವ ಕಲ್ಯಾಣಿ ಸಂಸಾರೋದಧಿನೌರ್ಹರಿಃ ॥ ೭೦ ॥**

**ಅ:** ಸ್ನೇಹರಹಿತಳಾದ ಎಲೈ ಜಿಹ್ವೆಯೇ ! ನೀನೇಕೆ ಹರಿ ಎನ್ನುತ್ತಿಲ್ಲ ; ಕಲ್ಯಾಣಿ ! ನೀನು ಹರಿ ಎಂದು ನುಡಿ; ಅವನು ಸಂಸಾರಸಾಗರಕ್ಕೆ ನೌಕೆಯಾದವನು.

**ವಿ:** ೧. ಇದು ಜಿಹ್ವೆಗೆ ನೀಡಿದ ಸಂದೇಶ. ಹರಿಯನ್ನು ನುಡಿಯದ ನಾಲಿಗೆ ಸ್ನೇಹರಹಿತವಾದ ನಾಲಿಗೆಯೇ ಸರಿ. ಉದ್ಧಾರಕ್ಕೆ ಕಾರಣವಾಗದಾಗ ಅದು ಹೇಗೆ ಸ್ನೇಹಿತ ಎನ್ನಿಸೀತು.

೨. ಹರಿಯು ಸಂಸಾರಸಾಗರವನ್ನು ದಾಟಿಸುವ ನೌಕೆಯಾದ್ದರಿಂದ ಅವನ ಬಗ್ಗೆ ನುಡಿಯುವುದು ತಾರಕವಾಗುವುದು. ಬೇರೆಲ್ಲವೂ ಸಹ ಬಂಧಕ ಎಂದರ್ಥ.

೩. ಇದು ಜಿಹ್ವೆಯ ಅಭಿಮಾನಿದೇವತೆಗೆ ಮಾಡಿದ ಪ್ರಾರ್ಥನೆ ಎಂದೂ ಸಹ ಭಾವಿಸಬಹುದು. ವಾಗಿಂದ್ರಿಯಕ್ಕೆ ಅಗ್ನಿ ಅಭಿಮಾನಿದೇವತೆ ಎಂಬುದು ಪ್ರಸಿದ್ಧ.

೪. ಇಂದ್ರಿಯಾಭಿಮಾನಿದೇವತೆಗಳನ್ನು ಹೀಗೆ ಪ್ರಾರ್ಥಿಸುವ ಮೂಲಕ ಅವರು ಹರಿಪ್ರೀತಿಗೆ ಸಾಧನವಾಗುವಂತೆ ಅನುಗ್ರಹಿಸುವಂತೆ ಮಾಡಿಕೊಳ್ಳಬೇಕು ಎಂಬುದು ಇಲ್ಲಿಯ ತತ್ತ್ವ.

★★

## ಪುಣ್ಯಹೀನರಿಗೆ ಶ್ರೀಹರಿಯ ಆರಾಧನೆ ಲಭಿಸದು

**ಅಸಾರೇ ಖಲು ಸಂಸಾರೇ ಸಾರಾತ್ ಸಾರತರೋ ಹರಿಃ ।**
**ಪುಣ್ಯಹೀನಾ ನ ವಿಂದಂತಿ [೨]ಸಾರಂಗಾಶ್ಚ ಯಥಾ ಜಲಮ್ ॥ ೭೧ ॥**

---

೧. ನಾನುಭಾಷಸೇ ( ಪಾ.)

೨. ಸಾರಂಗಾಃ ಕೃಷ್ಣಮೃಗಾಃ ಇತಿ ಕೇಚಿತ್ । (ತಾ)
ಸಾರಂಗಾಖ್ಯಾಮೃಗಾ ಏವ ತಟಾಕಸ್ಥಂ ಜಲಂ ನ ಜಾನಂತೀತ್ಯರ್ಥಃ । ಯದ್ವಾ ''ಸಾರಂಗಾಶ್ಚಾತಕೇ ಭೃಂಗೇ'' ಇತ್ಯಭಿಧಾನಾತ್ ॥ (ಉ)

ಅ: ಸಾರಹೀನವಾದ ಈ ಸಂಸಾರದಲ್ಲಿ ಎಲ್ಲ ಸಾರಗಳಿಗಿಂತಲೂ ಮಿಗಿಲಾದ ಸಾರ ಶ್ರೀಹರಿ; ಅವನನ್ನು ಪುಣ್ಯಹೀನರಾದ ಜನರು, ಚಾತಕಪಕ್ಷಿಯು ಜಲವನ್ನು ಹೇಗೋ ಹಾಗೆ, ತಿಳಿಯಲಾರರು.

ವಿ: ೧. ಸಂಸಾರ ನಿಜವಾದ ಅರ್ಥದಲ್ಲಿ ನಿಸ್ಸಾರವೇ ಆದರೂ ಅದು ಹರಿಸ್ಮರಣೆಗೆ ಸಾಧನವಾಗುವುದರಿಂದ ಸುಸಾರವೆನ್ನಿಸಿದೆ. ಹರಿಯೇ ಸಕಲಶಾಸ್ತ್ರಗಳ ಸಾರನಾದ್ದರಿಂದ ಅವನ ಸ್ಮರಣೆ ಮುಖ್ಯಕರ್ತವ್ಯ. ಸಂಸಾರ ಅದಕ್ಕೆ ಕಾರಣವಾದಾಗ ಅದು ಅರ್ಥವತ್ತಾಗುವುದು. ಇಲ್ಲವಾದಲ್ಲಿ ಅದು ಸಂಪೂರ್ಣನಿಸ್ಸಾರವೇ ಸರಿ ಎಂದರ್ಥ.

೨. ಇಂತಹ ಸಾರಭೂತನಾದ ಶ್ರೀಹರಿಯನ್ನು ತಿಳಿಯದ ಜನ ಅವಿವೇಕಿಗಳು. ಎದುರೇ ಇರುವ ಜಲವನ್ನು ಅರಿಯದೇ ಹೋಗುವ ಚಾತಕಪಕ್ಷಿಯಂತೆ ಪುಣ್ಯಹೀನರಾದ ಜನ ಶ್ರೀಹರಿಯನ್ನು ಅರಿಯದಾಗುವರು ಎಂದರ್ಥ :

★★

### ಹರಿನಾಮಸ್ಮರಣೆ ಸಕಲತೀರ್ಥಕ್ಷೇತ್ರಗಳಿಗಿಂತ ಮಿಗಿಲು

**ಕುರುಕ್ಷೇತ್ರೇಣ ಕಿಂ ತಸ್ಯ ಕಿಂ ಕಾಶ್ಯಾ [1]ಪುಷ್ಕರೇಣ ಕಿಮ್ ।**
**ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಮ್[2] ॥ ೭೨ ॥**

ಅ: ಯಾರ ನಾಲಿಗೆಯ ತುದಿಯಲ್ಲಿ ಹರಿಯೆಂಬ ಎರಡು ಅಕ್ಷರ ಇರುವವೋ, ಅವನಿಗೆ ಕುರುಕ್ಷೇತ್ರದಿಂದೇನು? ಕಾಶಿಯಿಂದೇನು? ಪುಷ್ಕರದಿಂದೇನು?

ವಿ: ೧. ಕುರುಕ್ಷೇತ್ರ, ಕಾಶಿ, ಪುಷ್ಕರಗಳೆಲ್ಲ ಪುಣ್ಯಕ್ಷೇತ್ರಗಳು; ಅವುಗಳ ಯಾತ್ರೆ ಹರಿನಾಮೋಚ್ಚಾರಣೆಗೆ ಕಾರಣವಾಗುವ ಪುಣ್ಯಕಾರ್ಯಗಳು. ಹರಿನಾಮೋಚ್ಚಾರಣೆ ಸಿದ್ಧಿಸಿದವನಿಗೆ ಆ ಕ್ಷೇತ್ರಯಾತ್ರೆಗಿಂತ ಆ ಕಾರ್ಯವೇ ಮುಖ್ಯಕರ್ತವ್ಯ ಎಂದರ್ಥ.

೨. ಕುರುಕ್ಷೇತ್ರಾದಿಯಾತ್ರೆಗಳನ್ನು ಹರಿನಾಮಸ್ಮರಣೆಯ ಸಾಧನವನ್ನಾಗಿ ಉಪಯೋಗಿಸಿ-ಕೊಳ್ಳದೆ ಅನ್ಯಫಲಕ್ಕೆ ಬಳಸಿಕೊಳ್ಳುವವರು ಮುಖ್ಯಫಲವನ್ನು ಕಳೆದುಕೊಳ್ಳುವ ಅವಿವೇಕಿಗಳು ಎಂದೂ ಭಾವ.

೩. ಈ ಶ್ಲೋಕ ಕಿಂ ತಸ್ಯ ಬಹುಭಿಸ್ತೀರ್ಥೈಃ (ಶ್ಲೋ. ೫೦) ಎಂಬ ಶ್ಲೋಕದಂತೆ ಇರುವುದು ಗಮನಾರ್ಹ. ಅಲ್ಲಿ ಹರಿಧ್ಯಾನದ ಮಹತ್ತ್ವ ನಿರೂಪಿತವಾಗಿದ್ದರೆ, ಇಲ್ಲಿ ಹರಿನಾಮೋಚ್ಚಾರಣೆಯ ಮಹತ್ತ್ವ ನಿರೂಪಿತವಾಗಿದೆ ಎಂಬುದು ವಿಶೇಷ.

---

೧. ಪುಷ್ಕರೇಣ ವಾ( ಪಾ.)
೨. ವಾಮನ ಪುರಾಣ(೬೭/೩೨)

೪. ಶ್ಲೋಕ ೬೬ರಿಂದ ೭೨ರವರೆಗಿನ ಒಟ್ಟು ೭ ಶ್ಲೋಕಗಳು ಕೌಶಿಕರ ವಚನಗಳು.

★★

## ಶ್ರೀಹರಿಯ ಆರಾಧನೆ ಸಂಸಾರದ ಸಾರ

### ಬ್ರಹ್ಮಾ

**ಅಸಾರೇ ಖಲು ಸಂಸಾರೇ ಸಾರಮೇಕಂ ನಿರೂಪಿತಮ್ ।**
**ಸಮಸ್ತಲೋಕನಾಥಸ್ಯ ಸಾರಮಾರಾಧನಂ ಹರೇಃ ॥ ೭೩ ॥**

**ಅ:** ಬ್ರಹ್ಮದೇವರು ಹೇಳುವರು: 'ಅಸಾರವಾದ ಸಂಸಾರದಲ್ಲಿ ಸಾರವೆಂದು ನಿರೂಪಿತವಾಗಿರುವುದು ಸಮಸ್ತಲೋಕಗಳಿಗೂ ಒಡೆಯನಾದ ಶ್ರೀಹರಿಯ ಆರಾಧನೆಯೊಂದೇ'.

**ವಿ:** ೧. ಸಂಸಾರ ಅಸಾರವಾದರೂ ಇದರಲ್ಲಿ ಶ್ರೀಹರಿಯ ಆರಾಧನೆ ಮಾಡುವ ಸುಯೋಗ ಲಭಿಸುವುದರಿಂದ ಅದು ಸಾರ್ಥಕ ಎಂದರ್ಥ. ಶ್ರೀಹರಿಯು ಸಮಸ್ತಲೋಕಗಳಿಗೂ ಒಡೆಯನಾಗಿರುವುದರಿಂದಲೇ ಅವನ ಆರಾಧನೆಗೆ ವಿಶೇಷ ಮಹತ್ತ್ವ ಎಂಬುದು **ಸಮಸ್ತಲೋಕನಾಥಸ್ಯ** ಎಂಬ ಪದದಿಂದ ಸೂಚಿತ.

೨. ಶ್ರೀಹರಿಯ ಆರಾಧನೆಯೊಂದೇ ಸಾರವೆಂದು ತಿಳಿಸಿದ್ದರಿಂದ ಉಳಿದೆಲ್ಲವುಗಳೂ ಅಸಾರ ಎಂಬ ಪ್ರಮೇಯವು ಸೂಚಿತ.

★★

## ಶ್ರೀಹರಿಯ ಆರಾಧನೆಯಿಂದ ಇಂದ್ರಿಯಗಳು ಸಾರ್ಥಕ

**ಸಾ ಜಿಹ್ವಾ ಯಾ ಹರಿಂ ಸ್ತೌತಿ ತಚ್ಚಿತ್ತಂ [೧] ಯತ್ತದರ್ಪಣಮ್ ।**
**ತಾವೇವ ಕೇವಲೌ ಶ್ಲಾಘ್ಯೌ ಯೌ ತತ್ಪೂಜಾಕರೌ ಕರೌ ॥ ೭೪ ॥**

**ಅ:** ಹರಿಯನ್ನು ಸ್ತುತಿಸುವುದೇ ಜಿಹ್ವೆ; ಅವನಿಗೆ ಅರ್ಪಿತವಾಗುವುದೇ ಚಿತ್ತ; ಅವನ ಪೂಜೆಗೆ ತೊಡಗಿಕೊಳ್ಳುವ ಕೈಗಳೇ ಶ್ಲಾಘ್ಯವಾದ ಕೈಗಳು.

**ವಿ:** ಇಂದ್ರಿಯಗಳ ಸಾಫಲ್ಯವನ್ನು ಇಲ್ಲಿ ನಿರೂಪಿಸಲಾಗಿದೆ. ಯಾವುದೋ ಮಾತನ್ನಾಡುವುದು ನಾಲಿಗೆಯ ಸಾರ್ಥಕ್ಯಕ್ಕೆ ಕಾರಣವಾಗದು. ಹರಿವಾರ್ತೆಯನ್ನು ಆಡಿದಾಗಲೇ ಅದರ ಸಾಫಲ್ಯ. ಅದರಂತೆಯೇ ಭಗವಂತನಲ್ಲಿ ಅರ್ಪಿತವಾಗುವುದೇ

---

೧. ಯತ್ತದರ್ಪಿತಮ್ (ಪಾ.); ಕೇವಲಮ್ (ಪಾ.); ತ್ವತ್ಪೂಜಾಕರೌ । (ಪಾ.)

ಮನಸ್ಸಿನ ಮುಖ್ಯಕರ್ತವ್ಯ. ಶ್ರೀಹರಿಯ ಪೂಜೆಯಲ್ಲಿ ತೊಡಗಿಕೊಳ್ಳುವುದೇ ಕೈಗಳ ಮುಖ್ಯಕರ್ತವ್ಯ ಎಂಬ ವಿಶೇಷಾಂಶ ಇಲ್ಲಿ ನಿರೂಪಿತ. ಕೇವಲ ಹರಟೆ, ಯಾವುದೋ ವಿಷಯದ ಚಿಂತನೆ, ಯಾವುದೋ ಕಾರ್ಯದ ಆಚರಣೆ, ನಾಲಿಗೆ ಮೊದಲಾದವುಗಳ ಸಾರ್ಥಕ್ಯಕ್ಕೆ ಸರ್ವಥಾ ಕಾರಣವಲ್ಲ ಎಂದು ಭಾವ :

**ಬಿಲೇ ಬತೋರುಕ್ರಮವಿಕ್ರಮಾನ್ ಯೇ ನ ಶೃಣ್ವತಃ ಕರ್ಣಪುಟೇ ನರಸ್ಯ ।**
**ಜಿಹ್ವಾಽಸತೀ ದಾರ್ದುರಿಕೇವ ಸೂತ ನ ಚೇತ್ ಪ್ರಗಾಯತ್ಯುರುಗಾಯಗಾಥಾಮ್ ॥**
**ಭಾರಃ ಪರಂ ಪಟ್ಟಕಿರೀಟಜುಷ್ಟಮಪ್ಯುತ್ತಮಾಂಗಂ ನ ನಮೇನ್ಮುಕುಂದಮ್ ।**
**ಶಾವೌ ಕರೌ ನೋ ಕುರುತಃ ಸಪರ್ಯಾಂ ಹರೇರ್ಲಸತ್ಕಾಂಚನಕಂಕಣೌ ವಾ ॥**
**ಬರ್ಹಾಯಿತೇ ತೇ ನಯನೇ ನರಾಣಾಂ ಲಿಂಗಾನಿ ವಿಷ್ಣೋರ್ನ ನಿರೀಕ್ಷತೋ ಯೇ ।**
**ಪಾದೌ ನೃಣಾಂ ತೌ ದ್ರುಮಜನ್ಮಭಾಜೌ ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ ॥**
**ಜೀವಚ್ಛವೋ ಭಾಗವತಾಂಘ್ರಿರೇಣುಂ ನ ಜಾತು ಮರ್ತ್ಯೋಽಭಿಲಷೇತ ಯಸ್ತು ।**
**ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ ಶ್ವಸಂಛವೋ ಯಸ್ತು ನ ವೇದ ಗಂಧಮ್ ॥**
**ತದಶ್ಮಸಾರಂ ಹೃದಯಂ ಬತೇದಂ ಯದ್ಗೃಹ್ಯಮಾಣೈರ್ಹರಿನಾಮಧೇಯೈಃ ।**
**ನ ವಿಕ್ರಿಯೇತಾಥ ಮುಖೇ ವಿಕಾರೋ ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥**

- ಶ್ರೀಮದ್ಭಾಗವತ (೨/೩/೨೦-೨೪)

★★

## ಹರಿಭಕ್ತನಿಗೆ ಇದ್ದಲ್ಲೇ ಮೋಕ್ಷ

**ಯಸ್ತು ವಿಷ್ಣುಪರೋ ನಿತ್ಯಂ ದೃಢಭಕ್ತಿರ್ಜಿತೇಂದ್ರಿಯಃ ।**
**ಸ್ವಗೃಹೇಽಪಿ ವಸನ್ ಯಾತಿ ತದ್ವಿಷ್ಣೋಃ ಪರಮಂ ಪದಮ್ ॥ ೭೫ ॥**

**ಅ:** ವಿಷ್ಣುವನ್ನೇ ಸರ್ವೋತ್ತಮನೆಂದು ತಿಳಿದು ಸದಾ ಅವನಲ್ಲಿ ದೃಢವಾದ ಭಕ್ತಿಯನ್ನು ಹೊಂದಿ ಇಂದ್ರಿಯಗಳ ಮೇಲೆ ಹಿಡಿತ ಸಾಧಿಸಿದವನು, ತನ್ನ ಮನೆಯಲ್ಲೇ ನೆಲೆಸಿದ್ದರೂ ಆ ವಿಷ್ಣುವಿನ ಪರಮ ನೆಲೆಯನ್ನು ತಲುಪುವನು.

ವಿ: ೧. ವಿಷ್ಣುಸರ್ವೋತ್ತಮತ್ವಪರಿಜ್ಞಾನ, ಅವನಲ್ಲಿ ದೃಢವಾದ ಭಕ್ತಿ ಮತ್ತು ಜಿತೇಂದ್ರಿಯತ್ವಗಳನ್ನು ಸಾಧಿಸಿದಲ್ಲಿ ತೀರ್ಥಯಾತ್ರೆ ಮೊದಲಾದವುಗಳ ಆವಶ್ಯಕತೆಯೇ ಇರದು; ತಾನಿರುವ ಮನೆಯಲ್ಲಿ ವಾಸಿಸುತ್ತಲೇ ವೈಕುಂಠಕ್ಕೆ ತೆರಳುವ ಸಾಧನೆ ಮಾಡಿಕೊಳ್ಳಬಹುದು ಎಂದರ್ಥ.

೨. ಇಲ್ಲಿಯ **ತದ್ವಿಷ್ಣೋಃ ಪರಮಂ ಪದಮ್** ಎಂಬ ಮಾತು ಕಠೋಪನಿಷತ್ತಿನ ವಾಕ್ಯದಂತಿರುವುದು ಗಮನಾರ್ಹ; 'ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ। **ಅಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥**'.

೩. ಈ ಮೂರುಶ್ಲೋಕಗಳು ಬ್ರಹ್ಮಪ್ರೋಕ್ತವಾದವುಗಳು.

**ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾದ್ ಯತಃ ಸ ಆಸ್ತೇ ಸಹಷಟ್ಸಪತ್ನಃ।**
**ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ ಗೃಹಾಶ್ರಮಃ ಕಿಂ ನು ಕರೋತ್ಯವದ್ಯಮ್ ॥**
- ಭಾಗವತ (೫/೧/೧೭)

**ದಾಂತಸ್ಯ ಕಿಮರಣ್ಯೇನ ತಥಾಽದಾಂತಸ್ಯ ಭಾರತ।** - ಮಹಾಭಾರತ

**ರಾಗದ್ವೇಷೌ ಯದಿ ಸ್ಯಾತಾಂ ತಪಸಾ ಕಿಂಪ್ರಯೋಜನಮ್।**
**ತಾವುಭೌ ಯದಿ ನ ಸ್ಯಾತಾಂ ತಪಸಾ ಕಿಂ ಪ್ರಯೋಜನಮ್ ॥**
- ಗೀತಾಭಾಷ್ಯೋದ್ಧೃತಪ್ರಮಾಣವಚನ (೧೦/೪೨)

★★

## ಶ್ರೀಹರಿಯ ಪೂಜೆಯ ಬಗ್ಗೆ ಕೇಳುವುದೂ ಪುಣ್ಯಕರ

**ಶಂಕರಃ**

**ಸಾಧು ಸಾಧು ಮಹಾಭಾಗ ಸಾಧು ದಾನವನಾಶನ[1] ।**
**ಯನ್ಮಾಂ ಪೃಚ್ಛಸಿ ಧರ್ಮಜ್ಞ ಕೇಶವಾರಾಧನಂ ಪ್ರತಿ ॥ ೭೬ ॥**

**ಅ:** ಶಂಕರನು ಹೇಳುವನು : 'ಮಹಾಪುಣ್ಯಶಾಲಿಯೇ ! ಭಲೇ ಭಲೇ ! ದಾನವನಾಶಕನೇ ಭಲೇ ! ಧರ್ಮಬಲ್ಲವನೇ ! ನೀನು ಕೇಶವನ ಆರಾಧನೆಯ ಬಗ್ಗೆ ನನ್ನನ್ನು ಕೇಳುತ್ತಿರುವಿಯಲ್ಲವೇ.

**ವಿ:** ೧. ಶ್ರೀಹರಿಯ ಬಗ್ಗೆ ತಿಳಿಸುವುದಿರಲಿ ತಿಳಿಯಬಯಸುವುದೂ ಸಹ ಅತ್ಯಂತ ಪ್ರಶಂಸನೀಯವಾದ ಕಾರ್ಯ ಎಂಬ ಭಾವ ಇಲ್ಲಿದೆ.

೨. ಅಂತಹ ಹರಿವಿಷಯಕವಾದ ಜಿಜ್ಞಾಸೆ ಹುಟ್ಟಲೂ ಸಹ ಮಹಾಸುಕೃತಶಾಲಿಯೂ ಧರ್ಮಜ್ಞನೂ ಆಗಿರಬೇಕು.

೩. ಗೀತೆಯಲ್ಲಿ ಬಂದಿರುವಂತೆ ಉತ್ತಮ ಪ್ರಶ್ನೆ ಭಗವದ್ವಿಚಾರವನ್ನು ತಿಳಿಯುವ ಶ್ರೇಷ್ಠಸಾಧನವಾದ್ದರಿಂದ ಅದಕ್ಕೆ ಇಷ್ಟು ಮಹತ್ತ್ವ :

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।(೪/೩೪)**

೪. ಶ್ರೀಮದ್ಭಾಗವತದಲ್ಲಿ ಶ್ರೀಶುಕಾಚಾರ್ಯರು ಪರೀಕ್ಷಿದ್ರಾಜನನ್ನು 'ವರೀಯಾನೇಷ ತೇ ಪ್ರಶ್ನಃ'(೨/೧/೧) ಎಂದು ಅಭಿನಂದಿಸುವ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

---

೧. ದಾನವನಾಶಕ ( ಪಾ.)

## ಅಲ್ಪಕಾಲದ ಹರಿಸ್ಮರಣೆಯೂ ಸರ್ವಪಾಪನಾಶಕ

**ನಿಮಿಷಂ ನಿಮಿಷಾರ್ಧಂ ವಾ ಮುಹೂರ್ತಮಪಿ ಭಾರ್ಗವ ।**
**ನಾದಗ್ಧಾಶೇಷಪಾಪಾನಾಂ ಭಕ್ತಿರ್ಭವತಿ ಕೇಶವೇ ॥ ೭೭ ॥**

**ಅ:** ಭಾರ್ಗವನೇ ! ಸಕಲಪಾಪಗಳು ಭಸ್ಮವಾಗದವರಿಗೆ ನಿಮಿಷ, ಅರ್ಧನಿಮಿಷ ಅಥವಾ ಒಂದು ಮುಹೂರ್ತಕಾಲ ಸಹ ಶ್ರೀಹರಿಯಲ್ಲಿ ಭಕ್ತಿ ಹುಟ್ಟಲಾರದು.

ವಿ: ೧. ಶ್ರೀಹರಿಯಲ್ಲಿ ಅತ್ಯಲ್ಪಕಾಲದಲ್ಲಿ ಭಕ್ತಿ ಹುಟ್ಟಲೂ ಸಹ ಸಕಲಪಾಪಗಳ ನಿವೃತ್ತಿ ಹೊಂದಿದವರಿಗೆ ಮಾತ್ರ ಸಾಧ್ಯ. ಎಂದರೆ ಶ್ರೀಹರಿಯ ಭಕ್ತನಾಗಬಯಸುವವನು ಪಾಪಕರ್ಮಗಳನ್ನು ತೊರೆಯಬೇಕು ಎಂಬ ಎಚ್ಚರಿಕೆ ಇಲ್ಲಿದೆ :

**ಜನ್ಮಾಂತರಸಹಸ್ರೇಷು ತಪೋಜ್ಞಾನಸಮಾಧಿಭಿಃ ।**
**ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ ॥ – ವಿಷ್ಣುತೀರ್ಥೀಯ**

೨. ರಾವಣಾದಿಗಳಿಗೆ ಎಷ್ಟೆಲ್ಲಾ ಬಾಹ್ಯಸಂಪತ್ತು ಇದ್ದರೂ ಶ್ರೀಹರಿಯಲ್ಲಿ ಭಕ್ತಿ ಮಾಡುವ ಯೋಗ ಲಭಿಸಲಿಲ್ಲ. ಅವರು ಮಾಡಿದ ಬ್ರಹ್ಮಾದಿಗಳಲ್ಲಿನ ಭಕ್ತಿ ಫಲಿಸಲೂ ಇಲ್ಲ ಎಂಬುದು ಇದನ್ನು ದೃಢಪಡಿಸುವ ನಿದರ್ಶನ.

★★

## ಶ್ರೀಹರಿಯ ಸ್ಮರಣೆಯೇ ಮನಸ್ಸಿನ ಮುಖ್ಯಕಾರ್ಯ

**ಕಿಂ ತೇನ ಮನಸಾ ಕಾರ್ಯಂ ಯನ್ನ ತಿಷ್ಠತಿ ಕೇಶವೇ ।**
**[೧]ಮನೋ ಮುಕ್ತಿಫಲಾವಾಪ್ತೌ ಕಾರಣಂ ಸುಪ್ರಯೋಜಿತಮ್ ೭೮**

**ಅ:** ಯಾವ ಮನಸ್ಸು ಶ್ರೀಹರಿಯಲ್ಲಿ ನೆಲೆಗೊಳ್ಳದೋ ಅಂತಹ ಮನಸ್ಸಿನಿಂದ ಆಗುವುದೇನು? ಉತ್ತಮರೀತಿಯಲ್ಲಿ ಶ್ರೀಹರಿಯಲ್ಲಿ ತೊಡಗುವ ಮನಸ್ಸು ಮುಕ್ತಿಫಲವನ್ನು ಪಡೆಯಲು ಕಾರಣವಾಗುವುದು.

ವಿ: ೧. ಮನಸ್ಸು ಸಕಲಸಾಧನೆಗಳಿಗೂ ಮೂಲ. ಎಲ್ಲರೂ ಗಳಿಸಲೇಬೇಕಾದ ಮುಕ್ತಿಫಲದ ಸಿದ್ಧಿಗೆ ಮನಸ್ಸು ಶ್ರೀಹರಿಯಲ್ಲಿ ನೆಲೆಗೊಳ್ಳುವುದೇ ಮುಖ್ಯಕಾರಣ ಎಂದರ್ಥ.

೨. 'ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ' ಎಂಬ ದ್ವಾದಶಸ್ತೋತ್ರದ ಮಾತು ಇದರ ವಿವರಣೆಯಂತಿದೆ.

---

೧. ಮನೋ ಮುಕ್ತಿಪಲಾವಾಪ್ತ್ಯೈ ಕಾರಣಂ ಸಪ್ರಯೋಜನಮ್ ( ಪಾ.)

೩. 'ಎಚ್ಚೆತ್ತು ಇರು ಕಂಡ್ಯ ಮನವೆ, ನಮ್ಮಚ್ಯುತನ ಅಂಘ್ರಿಯ ನೆನೆ ಕಂಡ್ಯ ಮನವೆ' ಎಂಬ ಶ್ರೀವಿಜಯದಾಸರ ಮಾತು ಇದರ ವಿವರಣರೂಪದಂತಿರುವುದು ಗಮನಾರ್ಹ.

★★

## ಹರಿನಾಮ ನುಡಿಯದ ನಾಲಿಗೆ ರೋಗವೇ ಸರಿ

**ನೂನಂ ತತ್ ಕಂಠಶಾಲೂಕಮಥವಾಽಪ್ಯುಪಜಿಹ್ವಿಕಾ ।**
**ರೋಗೋ ನಾಮ ನ ಸಾ ಜಿಹ್ವಾ ಯಾ ನ ವಕ್ತಿ ಹರೇರ್ಗುಣಾನ್[೧] ॥ ೭೯ ॥**

**ಅ:** ಯಾವ ನಾಲಿಗೆಯು ಶ್ರೀಹರಿಯ ಗುಣಗಳನ್ನು ಕೊಂಡಾಡದೋ, ಅದು ನಿಶ್ಚಿತವಾಗಿಯೂ ಕತ್ತಿನ ಬಳಿ ಬೆಳೆದ ಗಂಟು ಅಥವಾ ಕಿರುನಾಲಿಗೆ ಎನ್ನಬೇಕು ; ಅದು ನಿಶ್ಚಿತವಾಗಿಯೂ ರೋಗವೇ !!

**ವಿ:** ೧. ಹರಿಯನ್ನು ಕೊಂಡಾಡದ ನಾಲಿಗೆ [೨]ಕಂಠದ ಬಳಿಯ ಗಂಟು ಅಥವಾ ಕಿರುನಾಲಿಗೆ ಎನ್ನುವ ಮೂಲಕ ಅದು ಜಿಹ್ವೇಂದ್ರಿಯ ಎನ್ನಿಸುವ ಅರ್ಹತೆಯನ್ನೇ ಕಳೆದುಕೊಳ್ಳುವುದು ಎಂದು ತಿಳಿಸಿರುವರು.

೨. ಶ್ರೀಹರಿಯ ಗುಣಗಳನ್ನು ಕೊಂಡಾಡಿದಾಗಲೇ ನಾಲಿಗೆಯ ಸಾರ್ಥಕ್ಯ.

೩. ಇದು ಕೀರ್ತನ ಭಕ್ತಿಯ ನಿರೂಪಣೆಯೂ ಆಗಿದೆ.

★★

## ಹರಿಪೂಜೆ ಮಾಡದ ಕೈಗಳು ವ್ಯರ್ಥ

**[೩]ಭಾರಭೂತೈಃ ಕರೈಃ ಕಾರ್ಯಂ ಕಿಂ ತಸ್ಯ ನೃಪಶೋರ್ದ್ವಿಜಾಃ ।**
**ಯೈರ್ಹಿ ನ ಕ್ರಿಯತೇ ವಿಷ್ಣೋರ್ಗೃಹಸಂಮಾರ್ಜನಾದಿಕಮ್ ॥ ೮೦ ॥**

**ಅ:** ಎಲೈ ದ್ವಿಜರೇ ! ಯಾವ ಕೈಗಳಿಂದ ವಿಷ್ಣುಮಂದಿರದ ಮಾರ್ಜನಾದಿಗಳು ಮಾಡಲ್ಪಡುವುದಿಲ್ಲವೋ ಅಂತಹ ಭಾರಭೂತವಾದ ಕೈಗಳಿಂದ ಮನುಷ್ಯ ಪಶುವಿಗೆ ಆಗುವುದೇನು?

---

೧. ವಾಮನಪುರಾಣ (೬೭/೩೪)
೨. ಶಾಲೂಕಂ ಕಂಠಮಧ್ಯೋತ್ಪನ್ನಂ ದರ್ದುರಮ್ (ತಾ) ॥ ಕಂಠಶಾಲೂಕಂ ಕಂಠೇ ವಿದ್ಯಮಾನಮಾಂಸ-ವಿಶೇಷಃ (ಉಪೇ)॥ ಕಿಂತು ತತ್ಕಂಠಶಾಲೂಕಮ್ । ತದ್ಭಕ್ತಸ್ಯ ತಸ್ಯ ಭಕ್ತಸ್ಯ ಕಂಠತಾಲ್ವೋರ್ಮಧ್ಯೇ ವಿದ್ಯಮಾನಂ ಮಾಂಸರೂಪಮ್ (ಸ್ಕ.ಕೃ) ॥; ರೋಗೋ ನಾಮ ಗಲರೋಗ ಇತಿ ಪ್ರಸಿದ್ಧಃ (ಉ) ॥ ಕಂಠರೋಗ ಇತಿ ಪ್ರಸಿದ್ಧಃ (ಉಪೇ) ॥
೩. ಭಾರಭೂತೈಃ ಕಾರ್ಯಮೇಭಿಃ ಕಿಂ ತಸ್ಯ ನೃಪಶೋರ್ದ್ವಿಜ । ( ಪಾ.)

ವಿ: ೧. ಶ್ರೀಹರಿಮಂದಿರದ ಸ್ವಚ್ಛತೆಯಲ್ಲಿ ತೊಡಗದ ಕೈಗಳು ವ್ಯರ್ಥ. ಅಂತಹ ಕೈಗಳನ್ನು ಹೊಂದಿದವನು ಮನುಷ್ಯನಲ್ಲ ಪಶು ಎಂದರ್ಥ.

೨. ಅಭಿಷೇಕಾದಿಗಳು ಹೇಗೋ ಹಾಗೆಯೇ ಹರಿಮಂದಿರದ ಸ್ವಚ್ಛತಾಕಾರ್ಯ ಮೊದಲಾದವುಗಳು ಸಹ ದೇವಪೂಜೆಯಾಗಿವೆ ಎಂಬ ಸಂದೇಶ ಇಲ್ಲಿದೆ.

೩. ಕಿಂ ಎಂಬುದು ಆಕ್ಷೇಪಾರ್ಥದ ಪ್ರಯೋಗ :

**ಆಕ್ಷಿಪ್ಯತೇ ಕಿಮಿತ್ಯೇತತ್ ಯತೋऽಲ್ಪಫಲತಾ ಭವೇತ್ ।**
**ವಸ್ತುನೋ ಯತ್ರ ಚಾಲ್ಪತ್ವಂ ಪುಂಸೋ ವಾ ನೇತಿ ಚೋಚ್ಯತೇ ॥**
**- ಪ್ರಕಾಶಸಂಹಿತಾ ( ಭಾಗವತತಾತ್ಪರ್ಯ)**

★★

## ಹರಿಮಂದಿರಕ್ಕೆ ತೆರಳದ ಕಾಲುಗಳು ಹರಿಮೂರ್ತಿನೋಡದ ಕಣ್ಣುಗಳು ವ್ಯರ್ಥ

**ಚರಣೌ ತೌ ತು [1]ಸಫಲೌ ಕೇಶವಾಲಯಗಾಮಿನೌ ।**
**ತೇ ಚ ನೇತ್ರೇ ಮಹಾಭಾಗ ಯಾಭ್ಯಾಂ ಸಂದೃಶ್ಯತೇ ಹರಿಃ ॥ ೮೧ ॥**

**ಅ:** ಶ್ರೀಹರಿಮಂದಿರಕ್ಕೆ ತೆರಳುವ ಕಾಲುಗಳೇ ಸಾರ್ಥಕವಾದ ಕಾಲುಗಳು. ಅದರಂತೆ, ಪುಣ್ಯಶಾಲಿಯೇ ! ಯಾವ ಕಣ್ಣುಗಳಿಂದ ಶ್ರೀಹರಿಯು ನೋಡಲ್ಪಡುವನೋ ಆ ಕಣ್ಣುಗಳೇ ನಿಜವಾದ ಕಣ್ಣುಗಳು.

ವಿ: ೧. ಕಾಲುಗಳ ಸಾರ್ಥಕ್ಯ ವಿಷ್ಣುಮಂದಿರಕ್ಕೆ ತೆರಳಿದಾಗ ; ಕಣ್ಣುಗಳ ಸಾರ್ಥಕ್ಯ ಶ್ರೀಹರಿಮೂರ್ತಿಯನ್ನು ಕಂಡಾಗ ಎಂದರ್ಥ.

೨. ಶ್ರೀಮದ್ಭಾಗವತದಲ್ಲಿ ಅಂಬರೀಷರಾಜ ತನ್ನ ಸಕಲೇಂದ್ರಿಯಗಳನ್ನು ಶ್ರೀಹರಿಸೇವೆಗೆ ಮೀಸಲಿರಿಸಿರುವ ವಿವರ ಬಂದಿರುವುದು ಇದಕ್ಕೆ ನಿದರ್ಶನದಂತಿದೆ :

**ಸ ವೈ ಮನಃ ಕೃಷ್ಣಪದಾರವಿಂದಯೋರ್ವಚಾಂಸಿ ವೈಕುಂಠಗುಣಾನುವರ್ಣನೇ ।**
**ಕರೌ ಹರೇರ್ಮಂದಿರಮಾರ್ಜನಾದಿಷು ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ॥**
**ಮುಕುಂದಲಿಂಗಾಲಯದರ್ಶನೇ ದೃಶೌ ತದ್ಭೃತ್ಯಗಾತ್ರಸ್ಪರ್ಶೇऽಂಗಸಂಗಮ್ ।**
**ಘ್ರಾಣಂ ಚ ತತ್ಪಾದಸರೋಜಸೌರಭಶ್ರೀಮತ್ತುಲಸ್ಯಾಂ ರಸನಾಂ ತದರ್ಪಿತೇ ॥**
**ಪಾದೌ ಹರೇಃ ಕ್ಷೇತ್ರಪಥಾನುಸರ್ಪಣೇ ಶಿರೋ ಹೃಷೀಕೇಶಪದಾಭಿವಂದನೇ ।**
**ಕಾಮಂ ತು ದಾಸ್ಯೇ ನ ತು ಕಾಮಕಾಮ್ಯಯಾ ತಥೋತ್ತಮಶ್ಲೋಕಜನಾಶ್ರಯಾಂ ರತಿಂ ॥**
**ಏವಂ ಸದಾ ಕರ್ಮಕಲಾಪಮಾತ್ಮನಃ ಪರೇऽಧಿಯಜ್ಞೇ ಭಗವತ್ಯಧೋಕ್ಷಜೇ ।**
**ಸರ್ವಾತ್ಮಭಾವಂ ವಿದಧನ್ಮಹೀಮಿಮಾಂ ತನ್ನಿಷ್ಠವಿಪ್ರಾಭಿಹಿತಃ ಶಶಾಸ ಹ ॥** -(೯/೬/೬-೯)

---

೧. ಸುಭಗೌ ಇತಿ ಕ್ವಚಿತ್ ।

೩. **'ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದಾ'** ಎಂಬ ಶ್ರೀಪಾದರಾಜರ ಹಾಗೂ **'ಭೂಷಣಕೆ ಭೂಷಣ, ಇದು ಭೂಷಣ'** ಎಂಬ ಕೃತಿಗಳು ಈ ಶ್ಲೋಕಗಳ ಭಾವವಿವರಣೆಯಂತಿದೆ.

೨. ಶ್ರೀಗೋಪಾಲದಾಸರ **'ಆವರೋಗವೋ ಎನಗೆ ದೇವ ಧನ್ವಂತ್ರಿ । ಸಾವಧಾನದಿ ಕೈಯ್ಯ ಪಿಡಿದು ನೋಡಯ್ಯ'** ಎಂಬ ಕೀರ್ತನೆಯು ಈ ಶ್ಲೋಕಗಳ ಭಾವಸಂಗ್ರಹದಂತಿದೆ.

★★

## ಹರಿಮಂದಿರಕ್ಕೆ ತೆರಳದ ಸಂಚಾರ ವ್ಯರ್ಥ

**ಕಿಂ ತಸ್ಯ ಚರಣೈಃ ಕಾರ್ಯಂ ವೃಥಾಸಂಚರಣೈರ್ದ್ವಿಜಾಃ ।**
**ಯೈರ್ಹಿ ನ ವ್ರಜತೇ ಜಂತುಃ ಕೇಶವಾಲಯದರ್ಶನೇ ॥ ೮೨ ॥**

**ಅ:** ವಿಷ್ಣುಮಂದಿರದ ದರ್ಶನಕ್ಕೆ ತೆರಳದ ಜೀವಿಯ ಕಾಲುಗಳಿಂದ ಆಗುವುದೇನು? ಅವುಗಳದು ವ್ಯರ್ಥಸಂಚಾರ ಮಾತ್ರ.

**ವಿ:** ೧. ಕಾಲುಗಳು ಕೇವಲ ಲೌಕಿಕಕಾರ್ಯಗಳಿಗೆ ಧಾವಿಸಿದಾಗ ಸಫಲವೆನ್ನಿಸವು. ಶ್ರೀವಿಷ್ಣುಮಂದಿರದ ದರ್ಶನಕ್ಕಾಗಲೀ ವಿಷ್ಣುಕಥಾಶ್ರವಣದ ಸ್ಥಳಗಳಿಗೆ ನಡೆದಾಗಲಾಗಲೀ ಅವುಗಳು ಸಾರ್ಥಕವೆನಿಸುವವು.

೨. ಲೌಕಿಕರೀತಿಯಲ್ಲಿ ಕಚೇರಿಯ ಕೆಲಸಕ್ಕಾಗಿ ಓಡಾಟವು ಪ್ರಯಾಣದ ವೆಚ್ಚ ಮೊದಲಾದವುಗಳಿಗೆ ಪರಿಗಣಿತವಾಗುವಂತೆ ದೇವತಾರಾಧನೆ ಎಂಬ ಅನುಸಂಧಾನದಿಂದ ಮಾಡುವ ಸಂಚಾರ ಮೊದಲಾದ ಕಾರ್ಯಗಳು ಮೋಕ್ಷಸಾಧನವೆನ್ನಿಸುವವು ಎಂದು ತಿಳಿಯಬೇಕು.

★★

## ಋಷಿಗಳ ಋಷಿ ಪದವಿ ಹರಿಯ ಅನುಗ್ರಹದ ಫಲ

**ವೇದವೇದಾಂತವಿದುಷಾಂ ಮುನೀನಾಂ ಭಾವಿತಾತ್ಮನಾಮ್ ।**
**ಋಷಿತ್ವಮಪಿ ಧರ್ಮಜ್ಞ ವಿಜ್ಞೇಯಂ ತತ್ಪ್ರಸಾದಜಮ್ ॥ ೮೩ ॥**

**ಅ:** ಎಲೈ ಧರ್ಮಜ್ಞನೇ ! ವೇದವೇದಾಂತಗಳನ್ನು ಬಲ್ಲ ಹರಿಭಕ್ತಿಪರಾಯಣ-ರಾದ ಮುನಿಗಳ ಋಷಿತ್ವವೂ ಸಹ ಆ ಶ್ರೀಹರಿಯ ಪ್ರಸಾದದಿಂದ ಉಂಟಾದುದು ಎಂದು ತಿಳಿಯಬೇಕು.

**ವಿ:** ೧. **ಋಷಿಗಳು** ಎಂದರೆ ವೇದಮಂತ್ರಗಳನ್ನು ದರ್ಶನ ಮಾಡುವವರು ಮೊದಲಾದ ವಿಶೇಷಾರ್ಥ ಶಾಸ್ತ್ರಗಳಲ್ಲಿದೆ: ಋಷಿರ್ದರ್ಶನಾತ್. ಅಂತಹ ಋಷಿತ್ವದ ಸಂಪಾದನೆ ಜನ್ಮಜನ್ಮಗಳ ಪುಣ್ಯಕಾರ್ಯಗಳ ಫಲ.

೨. ಋಷಿಗಳಾಗಿ ಪುಣ್ಯಕಾರ್ಯಮಾಡುವುದಿರಲಿ ಋಷಿಗಳಾಗುವುದೇ ಶ್ರೀಹರಿಯ ಮಹಾಪ್ರಸಾದದ ಫಲ ಎಂಬ ವಿಶೇಷಾಂಶ ಇಲ್ಲಿದೆ; ವಿಷ್ಣುತತ್ತ್ವವಿನಿರ್ಣಯದಲ್ಲಿನ ಮಾತುಗಳು ಇದರ ವಿವರಣೆಯಂತಿವೆ; ಅದರಂತೆ ದ್ವಾದಶಸ್ತೋತ್ರದ ಈ ಕೆಳಗಿನ ಶ್ಲೋಕವು ಇದರ ವ್ಯಾಖ್ಯಾನದಂತಿರುವುದು ಗಮನಾರ್ಹ :

**ಷಡ್ವರ್ಗನಿಗ್ರಹನಿರಸ್ತಸಮಸ್ತದೋಷಾ**
**ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಮ್ ।**
**ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥**

★★

## ಹರಿಸ್ಮರಣೆಯಿಂದ ಸ್ವರ್ಗವೂ ಲಭ್ಯ

**ವಿಚಿತ್ರರತ್ನಪರ್ಯಂಕೇ [೧]ಮಹಾಭೋಗೇ ಚ ಭೋಗಿನಃ ।**
**ರಮಂತೇ [೨]ನಾಕಿರಾಮಾಭಿಃ ಕೇಶವಸ್ಮರಣಾತ್ ಫಲಮ್ ॥ ೮೪ ॥**

**ಅ:** ಮಹಾಭೋಗಗಳಿಂದ ಕೂಡಿದ ವಿಚಿತ್ರರತ್ನಖಚಿತಮಂಚದ ಮೇಲೆ ಸ್ವರ್ಗಸ್ತ್ರೀಯರೊಂದಿಗೆ ವಿಹರಿಸಿ ಭೋಗಪಡುವುದು ಶ್ರೀಹರಿಯ ಸ್ಮರಣೆಯ ಫಲ.

ವಿ: ೧. ಶ್ರೀಹರಿಸ್ಮರಣೆ ಸ್ವರ್ಗಕ್ಕೂ ಸಾಧನ ಎಂಬುದು ಇಲ್ಲಿಯ ಸಂದೇಶ. ಶ್ರೀಹರಿಸ್ಮರಣೆಯಿಂದ ಮೋಕ್ಷ ಲಭಿಸುವುದಾದರೂ ಸ್ವರ್ಗಾದಿ ವಿಶೇಷಭೋಗ ಲಭಿಸದು ಎಂಬ ಶಂಕೆಗೆ ಇಲ್ಲಿ ಉತ್ತರವಿದೆ. ಸ್ವರ್ಗಾದಿಸಿದ್ಧಿಗೆಂದು ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವವರಿಗೆ ಸಿಕ್ಕುವ ಮಹತ್‌ಫಲವೆಂದರೆ ಸ್ವರ್ಗಮಾತ್ರ. ಆದರೆ ಹರಿಸ್ಮರಣೆ ಮಾಡುವವರಿಗೆ ಮುಂದೆ ಮೋಕ್ಷವು ಖಚಿತವಾಗಿ ಲಭಿಸುವುದರೊಂದಿಗೆ ಸ್ವರ್ಗಾದಿ ಭೋಗಗಳೂ ಸಹ ಲಭಿಸುವವು ಎಂದರ್ಥ.

೨. ಸ್ವರ್ಗಪ್ರಾಪ್ತಿ ಅನಿತ್ಯಫಲ; ಮೋಕ್ಷಪ್ರಾಪ್ತಿ ನಿತ್ಯಫಲ ; ಎರಡನ್ನೂ ಕೊಡುವ ಸಾಮರ್ಥ್ಯ ಶ್ರೀಹರಿಸ್ಮರಣೆಯದು. ಭಗವದ್ಗೀತೆಯ ಈ ಕೆಳಗಿನ ಶ್ಲೋಕದ ಸಾರಾಂಶ-ದಂತಿರುವುದು ಇದರ ಹಿರಿಮೆ :

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ (೨/೪೬)**

★★

---

೧. ಮಹಾಭೋಗೇನ ( ಪಾ.) ; ೨. ನಾಕನಾರೀಭಿಃ । ( ಪಾ.)

## ಹರಿಭಕ್ತಿಯು ಅಶ್ವಮೇಧಾದಿ ಯಜ್ಞಗಳಿಗಿಂತ ಮಿಗಿಲು

**ಅಶ್ವಮೇಧಸಹಸ್ರಾಣಾಂ ಯಃ ಸಹಸ್ರಂ ಸಮಾಚರೇತ್ ।**
**ನಾಸೌ ತತ್ಫಲಮಾಪ್ನೋತಿ ತದ್ಭಕ್ತೈರ್ಯದವಾಪ್ಯತೇ ॥ ೮೫ ॥**

**ಅ:** ಸಾವಿರಾರು ಅಶ್ವಮೇಧಗಳನ್ನು ಸಾವಿರಬಾರಿ ಯಾವನು ಆಚರಿಸುವನೋ, ಅವನೂ ಸಹ ಶ್ರೀಹರಿಭಕ್ತರು ಪಡೆಯುವಂತಹ ಉತ್ತಮಫಲವನ್ನು ಪಡೆಯಲಾರ.

**ವಿ:** ೧. ಸಾವಿರಾರು ಅಶ್ವಮೇಧಯಾಗಗಳಿಗಿಂತ ಹರಿಯಲ್ಲಿ ಭಕ್ತಿಮಾಡುವುದು ಮಿಗಿಲಾದುದು ಎಂದರ್ಥ. ಭಕ್ತಿಪೂರ್ವಕವಾಗಿ ಅಶ್ವಮೇಧಯಾಗಗಳನ್ನು ಮಾಡುವುದು ಇನ್ನೂ ಶ್ರೇಷ್ಠ ಆದರೆ ಭಕ್ತಿಯಿಲ್ಲದ ಯಾಗಗಳಿಗಿಂತ ಭಕ್ತಿಮಾಡುವುದೇ ಶ್ರೇಷ್ಠ ಎಂದು ಭಾವ.

೨. ಮೀಮಾಂಸಕರು ಯಾಗಾದಿಕರ್ಮಗಳಲ್ಲಿ ನಿರತರಾದರೂ ಹರಿಯಲ್ಲಿ ಭಕ್ತಿ ಮಾಡುವ ವಿವೇಕವಿಲ್ಲದವರಾದ್ದರಿಂದ ಅವರ ಸಾಧನೆ ಅತ್ಯಂತ ಸೀಮಿತ ಎಂಬ ವಿಶೇಷಾಂಶ ಇಲ್ಲಿ ಸೂಚಿತ.

೩. ಈ ಅರ್ಥದಲ್ಲಿ ಇಲ್ಲಿ ಮೀಮಾಂಸಕಮತದ ವಿಮರ್ಶೆಯೂ ಆಗಿದೆ ಎಂದು ತಿಳಿಯಬಹುದು.

★★

## ಶ್ರೀಹರಿಗೆ ನಮಸ್ಕರಿಸಲು ಆದೇಶ

**ರೇ ರೇ ಮನುಷ್ಯಾಃ ಪುರುಷೋತ್ತಮಸ್ಯ**
**ಕರೌ ನ [೧]ಕಸ್ಮಾನ್ಮುಕಲೀಕುರುಧ್ವಮ್ ।**
**ಕ್ರಿಯಾಜುಷಾಂ ಕೋ ಭವತಾಂ ಪ್ರಯಾಸಃ**
**ಫಲಂ ಹಿ ಯತ್ ತತ್ ಪದಮಚ್ಯುತಸ್ಯ ॥ ೮೬ ॥**

**ಅ:** ಎಲೈ ಎಲೈ ಮನುಷ್ಯರೇ ! ನೀವೇಕೆ ಪುರುಷೋತ್ತಮನಾದ ಶ್ರೀಹರಿಗೆ ಎರಡು ಕೈಗಳನ್ನು ಜೋಡಿಸುತ್ತಿಲ್ಲ; ಕ್ರಿಯಾಶೀಲರಾದ ನಿಮಗೆ ಅಲ್ಲಿ ಪ್ರಯಾಸ-ವೇನಿದೆ? ಅದರ ಫಲ ಅಕ್ಷಯವಾದ ಮೋಕ್ಷಫಲವೇ ಅಲ್ಲವೇ?

**ವಿ:** ಇಲ್ಲಿ ಕೈಜೋಡಿಸುವುದು ಎಂದರೆ ನಮಸ್ಕರಿಸುವುದು ಎಂದರ್ಥ; ನಮಸ್ಕರಿಸು-ವಂತಹ ಸಾಮಾನ್ಯಕಾರ್ಯಕ್ಕೂ ಸಹ ಅಕ್ಷಯಫಲವನ್ನು ಶ್ರೀಹರಿ ನೀಡುವುದರಿಂದ ಅಂತಹ ಪುಣ್ಯಕಾರ್ಯವನ್ನು ಮಾಡದೇ ಜೀವನವನ್ನು ವ್ಯರ್ಥಮಾಡಿಕೊಳ್ಳುವುದೇಕೆ? ಎಂಬ ವಿಶೇಷ ಸಂದೇಶವನ್ನು ಇಲ್ಲಿ ನೀಡಿರುವರು.

---

೧. ಕಸ್ಮಾನ್ಮುಕುಲೀಕುರುಧ್ವೇ ( ಪಾ.)

## ಶ್ರೀಹರಿಗೆ ಪ್ರದಕ್ಷಿಣೆ ಸಕಲ ಯಜ್ಞಗಳಿಗಿಂತ ಶ್ರೇಷ್ಠ

**ವಿಷ್ಣೋರ್ವಿಮಾನಂ ಯಃ ಕುರ್ಯಾತ್ ಸಕೃದ್ಭಕ್ತ್ಯಾ ಪ್ರದಕ್ಷಿಣಮ್ ।**
**ಅಶ್ವಮೇಧಸಹಸ್ರಸ್ಯ [೧]ಫಲಮಾಪ್ನೋತಿ ಮಾನವಃ ॥ ೮೭ ॥**

ಅ: ಯಾವನು ಭಕ್ತಿಯಿಂದ ವಿಷ್ಣುವಿನ ಮಂದಿರಕ್ಕೆ ಪ್ರದಕ್ಷಿಣೆ ಮಾಡುವನೋ, ಅಂತಹ ಮಾನವನು ಸಾವಿರಾರು ಅಶ್ವಮೇಧಗಳ ಫಲವನ್ನು ಹೊಂದುವನು.

ವಿ: ೧. ಈ ಶ್ಲೋಕದಲ್ಲಿ ಪ್ರದಕ್ಷಿಣೆಯ ಮಹತ್ತ್ವ ನಿರೂಪಿತವಾಗಿದೆ. ವಿಷ್ಣು-ದೇವಾಲಯಕ್ಕೆ ಮಾಡುವ ಒಂದೊಂದು ನಮಸ್ಕಾರವೂ ಸಾವಿರಾರು ಅಶ್ವಮೇಧಗಳ ಫಲವನ್ನು ತಂದು ಕೊಡುವಂತಹ ಶ್ರೇಷ್ಠಪುಣ್ಯಕಾರ್ಯ ಎಂದು ಭಾವ.

೨. ಇಲ್ಲಿ **ಮಾನವ** ಎಂಬ ಪದದಿಂದ ಮನು ಶಬ್ದವಾಚ್ಯರಾದ ವಾಯುದೇವರ ಭಕ್ತನಾಗಿ ಅವರು ಹೇಳಿದ ಮಾರ್ಗದಲ್ಲಿ ಶ್ರೀಹರಿಯನ್ನು ಆರಾಧಿಸುವವನಿಗೆ ಇಂತಹ ಮುಖ್ಯಫಲ ಲಭಿಸುವುದು ಎಂದರ್ಥ.

೩. ಪ್ರದಕ್ಷಿಣೆಯೆಂದರೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸುತ್ತ ಕೈಗಳನ್ನು ಸಂಪುಟಾ-ಕಾರವಾಗಿ ಜೋಡಿಸಿಕೊಂಡು ಬಾಯಲ್ಲಿ ಸ್ತೋತ್ರ ಹೇಳುತ್ತ ಹೃದಯದಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತ ಎಡದಿಂದ ಬಲಕ್ಕೆ ಸುತ್ತುವುದು ಎಂದರ್ಥ. ದಿನ ತುಂಬಿದ ಬಸುರಿಯು ಪೂರ್ಣಕುಂಭವನ್ನು ಹೊತ್ತುಕೊಂಡು ಮೆಲ್ಲನೆ ಪ್ರದಕ್ಷಿಣೆ ಮಾಡುವುದು ವಿಹಿತ:

**ಪದಾಂತರೇ ಪದಂ ನ್ಯಸ್ತಂ ಕರೌ ಸಂಪುಟವತ್‌ಕೃತೌ ।**
**ಸ್ತುತಿರ್ವಾಚಿ ಹೃದಿ ಧ್ಯಾನಂ ಪ್ರದಕ್ಷಿಣಮಿತೀರಿತಮ್ ॥ ಇತಿ ॥ (ತಾ.)**

**ಪಾದೌ ಪದಾಂತರೇ ಕೃತ್ವಾ ಕರೌ ಚಲನವರ್ಜಿತೌ ।**
**ಹೃದಿ ಧ್ಯಾನಂ ಮುಖೇ ಸ್ತೋತ್ರಂ ಚತುರಂಗಂ ಪ್ರದಕ್ಷಣಮ್ ॥**
**ಆಸನ್ನಪ್ರಸವಾ ನಾರೀ ಜಲಪೂರ್ಣಂ ಯಥಾ ಘಟಮ್ ।**
**ಉದ್ಧೃತ್ಯ ಶನಕೈರ್ಯಾತಿ ವಿಷ್ಣೋಃ ಕುರ್ಯಾತ್ ಪ್ರದಕ್ಷಿಣಮ್ ॥ (ಉ)**

೪. ಈ ಶ್ಲೋಕದಲ್ಲಿಯ 'ಸಹಸ್ರ' ಎಂಬುದಕ್ಕೆ ಶತಶಬ್ದೋ ಬಹುತ್ವವಾಚೀ ಎಂಬ ನ್ಯಾಯದಂತೆ ಸಾವಿರಾರು, ಬಹಳ ಎಂಬ ಅರ್ಥ ವಿವಕ್ಷಿತ.

★★

೧. ಫಲಂ ಪ್ರಾಪ್ನೋತಿ ( ಪಾ.)

## ಶ್ರೀಹರಿಯ ಪ್ರದಕ್ಷಿಣೆಯಿಂದ ವಿಷ್ಣುಲೋಕಪ್ರಾಪ್ತಿ

**ಪ್ರದಕ್ಷಿಣಂ ತು ಯಃ [೧]ಕುರ್ಯಾದ್ಧರಿಂ ಭಕ್ತ್ಯಾ ಸಮನ್ವಿತಃ।**
**ಹಂಸಯುಕ್ತವಿಮಾನೇನ [೨]ವಿಷ್ಣುಲೋಕಂ ಸ ಗಚ್ಛತಿ ॥ ೮೮ ॥**

**ಅ:** ಭಕ್ತಿಯಿಂದ ಕೂಡಿ ಯಾವನು ಶ್ರೀಹರಿಗೆ ಪ್ರದಕ್ಷಿಣೆಯನ್ನು ಮಾಡುವನೋ, ಅವನು ಹಂಸಗಳು ಹೂಡಿದ ವಿಮಾನದಲ್ಲಿ ಕುಳಿತು ವಿಷ್ಣುಲೋಕವನ್ನು ಸೇರುವನು.

**ವಿ:** ೧. ವಿಷ್ಣುವಿನ ವಿಮಾನ(ಮಂದಿರ)ದ ಪ್ರದಕ್ಷಿಣೆ ವಿಮಾನಮಾರ್ಗವಾಗಿ ವೈಕುಂಠ ತಲುಪಿಸುವ ಸಾಧನ ಎಂದರ್ಥ. ಶ್ರೀಹರಿಗೆ ಮಾಡುವ ಪ್ರತಿಯೊಂದು ಪ್ರದಕ್ಷಿಣೆಯೂ ವೈಕುಂಠ ತಲುಪುವ ಸಾಧನೆ ಎಂಬ ವಿಶೇಷಾಂಶ ಇಲ್ಲಿದೆ.

೨. ಕ್ರೀಡೆಗಳಲ್ಲಿ ಓಡುವುದು, ಹಾರುವುದು ಮೊದಲಾದವುಗಳೂ ಸಹ ಪ್ರಶಸ್ತಿಗೆ ಪರಿಗಣಿತವಾಗುವಂತೆ ಈ ಪ್ರದಕ್ಷಿಣೆ ಮೊದಲಾದವುಗಳು ಎಂದು ತಿಳಿಯಬೇಕು.

★★

## ಶ್ರೀಹರಿಗೆ ನಮಸ್ಕರಿಸುವುದು ಸಹ ಸಕಲತೀರ್ಥವ್ರತಗಳಿಗಿಂತ ಶ್ರೇಷ್ಠ

**[೩]ತೀರ್ಥಕೋಟಿಸಹಸ್ರಾಣಿ ವ್ರತಕೋಟಿಶತಾನಿ ಚ।**
**ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ೮೯**

**ಅ:** ಸಾವಿರಕೋಟಿ ತೀರ್ಥಗಳು, ನೂರಾರುಕೋಟಿ ವ್ರತಗಳೂ ಸಹ ವಿಷ್ಣುವಿಗೆ ಮಾಡುವ ಸಾಷ್ಟಾಂಗನಮಸ್ಕಾರದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸವು.

**ವಿ:** ಸಾವಿರಾರುಕೋಟಿತೀರ್ಥಯಾತ್ರೆಗಳಿಗಿಂತಲೂ ಕೋಟಿಗಟ್ಟಲೆ ವ್ರತಗಳಿಗಿಂತಲೂ ನಾರಾಯಣನಿಗೆ ಭಕ್ತಿಯಿಂದ ಮಾಡುವ ಪ್ರಣಾಮ ತುಂಬಾ ಶ್ರೇಷ್ಠವಾದುದು ಎಂದರ್ಥ. ಹರಿನಮಸ್ಕಾರದ ಫಲವಿಶೇಷ ಇಲ್ಲಿ ನಿರೂಪಿತವಾಗಿದೆ.

★★

---

೧. ಕುರ್ಯಾದ್ಧರಿಭಕ್ತ್ಯಾ( ಪಾ.) ಕುರ್ಯಾತ್ಸ್ವಭಕ್ತ್ಯಾ( ಪಾ.)
೨. ವಿಷ್ಣೋರ್ಲೋಕಂ ( ಪಾ.)
೩. ಸ್ಕಾಂದಪುರಾಣ ೨-೫-೧೦-೩೦॥; ತೀರ್ಥಕೋಟಿಶತಾನಿ ಚ( ಪಾ.); ವಾಮನ ಪುರಾಣದಲ್ಲೂ 'ತೀರ್ಥಕೋಟಿಶತಾನಿ ಚ' ಎಂದೇ ಇದೆ.-೬೭/೬೨

## ಪ್ರಣಾಮದ ಲಕ್ಷಣ

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋऽಷ್ಟಾಂಗ ಈರಿತಃ ೯೦**

**ಅ:** ಎದೆಯಿಂದ, ತಲೆಯಿಂದ, ನೋಟದಿಂದ, ಮನಸ್ಸಿನಿಂದ, ಹಾಗೆಯೇ ಮಾತಿನಿಂದ, ಪಾದಗಳಿಂದ, ಕೈಗಳಿಂದ, ಮೊಣಕಾಲುಗಳಿಂದ ಕೂಡಿದ ಪ್ರಣಾಮವು ಸಾಷ್ಟಾಂಗ ಪ್ರಣಾಮ ಎನ್ನಿಸುವುದು.

**ವಿ:** ೧. ಹಿಂದಿನ ಶ್ಲೋಕದಲ್ಲಿ ಪ್ರಣಾಮದ ಫಲವನ್ನು ತಿಳಿಸಿದ್ದರೆ, ಈ ಶ್ಲೋಕದಲ್ಲಿ ಆ ಪ್ರಣಾಮದ ಲಕ್ಷಣವನ್ನು ತಿಳಿಸಿರುವರು.

೨. ನಮಸ್ಕಾರ ಮಾಡಿದಾಗ ಎದೆ ತಲೆಗಳು ಕಾಲು ಕೈಗಳು ತೊಡೆಗಳು ನೆಲಕ್ಕೆ ಸ್ಪರ್ಶಿಸಿರಬೇಕು; ನೋಟ ಭಗವಂತನಲ್ಲಿಟ್ಟಿರಬೇಕು; ಮನಸ್ಸು ಅವನನ್ನು ಚಿಂತಿಸುತ್ತಿರಬೇಕು; ಮಾತಿನಲ್ಲಿ ಅವನ ಸ್ತೋತ್ರ ನಡೆದಿರಬೇಕು; ಇಂತಹ ನಮಸ್ಕಾರವನ್ನು ಸಾಷ್ಟಾಂಗನಮಸ್ಕಾರ ಎನ್ನುವರು.

೩. ಇಂತಹ ಸಾಷ್ಟಾಂಗನಮಸ್ಕಾರ ಮುಖ್ಯವಾಗಿ ವಿಹಿತವಾಗಿರುವುದು ಪುರುಷರಿಗೆ; ಸ್ತ್ರೀಯರಿಗೆ ವಿಹಿತವಾದದ್ದು ಪಂಚಾಂಗನಮಸ್ಕಾರ ಎಂಬ ವಿಶೇಷವಿಧಿ ಶಾಸ್ತ್ರಗಳಲ್ಲಿವೆ.

೪. ಇಂತಹ ಮುಖ್ಯನಮಸ್ಕಾರವನ್ನು ಸದಾ ಮಾಡುವ ಅಸಾಧಾರಣ ಹಿರಿಮೆ ಋಜುಗಳದ್ದು ಮಾತ್ರ. ಬಾಲಮಧ್ವರು ಅನಂತೇಶ್ವರನಿಗೆ ಮಾಡಿದ ಇಂತಹ ಸಾಷ್ಟಾಂಗನಮಸ್ಕಾರವನ್ನು ದೇವಶ್ರೇಷ್ಠರುಗಳೂ ಸಹ ಅಭಿವಂದಿಸಿ ನಲಿದ ವಿವರ ಸುಮಧ್ವವಿಜಯದಲ್ಲಿ ಬಂದಿದೆ (೩/೭): '**ನ ಹಿ ಹರಿಂ ಸತತಂ ನ ನಮತ್ಯಸೌ ನಚ ನ ಪಶ್ಯತಿ ನಾಪಿ ನ ವಂದತೇ । ಅಪಿ ತಥೇತಿ ವಿಧಾಯ ವಿಶೇಷತಃ ಸ ನನು ಸಾಧುಜನಾನ್ ಸಮಶಿಕ್ಷಯತ್॥**'

★★

### ಕಪಟದ ಹರಿನಮಸ್ಕಾರವು ಸಹ ಪಾಪಹರ

**ಶಾಠ್ಯೇನಾಪಿ ನಮಸ್ಕಾರಂ ಕುರ್ವತಃ ಶಾರ್ಙ್ಗಪಾಣಯೇ ।**
**ಶತಜನ್ಮಾರ್ಜಿತಂ ಪಾಪಂ ನಶ್ಯತ್ಯೇವ ನ ಸಂಶಯಃ ॥ ೯೧ ॥**

**ಅ:** ಶಾರ್ಙ್ಗಪಾಣಿಯಾದ ಶ್ರೀಹರಿಗೆ ಶಾಠ್ಯದಿಂದ ನಮಸ್ಕಾರಮಾಡುವವನ ನೂರು ಜನ್ಮಗಳ ಪಾಪವು ಸಹ ಕೂಡಲೇ ಪರಿಹಾರವಾಗುವುದು; ಸಂಶಯ ಬೇಡ.

ವಿ: ೧. ಕೇವಲ ಯಾಂತ್ರಿಕನಮಸ್ಕಾರಕ್ಕೂ ವಿಶೇಷಮಹತ್ತ್ವವಿದೆ ಎಂಬುದು ಇಲ್ಲಿಯ ಮೇಲ್ನೋಟದ ಅರ್ಥ. ಆದರೆ ಈ ಮೊದಲೇ ತಿಳಿಸಿದಂತೆ ಅಂತಹ ಶಾಠ್ಯಪೂರ್ವಕ ನಮಸ್ಕಾರವೂ ಸಹ ಕೇವಲ ಭಕ್ತಿಪುರಸ್ಸರವಾಗಿದ್ದಾಗ ಮಾತ್ರವೇ ಮುಖ್ಯಫಲಕ್ಕೆ ಕಾರಣ ಎಂಬ ವಿಶೇಷಾಂಶವನ್ನು ತಿಳಿಯಬೇಕು.

೨. ಇಲ್ಲಿಯೂ ಸಹ ಶಾಠ್ಯದಿಂದ ಎಂದರೆ ಶಾಠ್ಯನಿಮಿತ್ತದಿಂದ ಎಂದೇ ಅರ್ಥ. ಈ ಬಗ್ಗೆ ವಿವರಗಳು ಈಗಾಗಲೇ ಬಂದಿವೆ (ಶ್ಲೋ. ೧೨).

★★

## ಶ್ರೀಹರಿಯೇ ಸರ್ವೋದ್ಧಾರಕ

**ಸಂಸಾರಾರ್ಣವಮಗ್ನಾನಾಂ ನರಾಣಾಂ ಪಾಪಕರ್ಮಣಾಮ್ ।**
**ನಾನ್ಯೋದ್ಧರ್ತಾ[೧] ಜಗನ್ನಾಥಂ ಮುಕ್ತ್ವಾ ನಾರಾಯಣಂ ಪರಮ್ ೯೨**

ಅ: ಸಂಸಾರಸಮುದ್ರದಲ್ಲಿ ಮುಳುಗಿದ ಪಾಪಿಗಳಾದ ಮನುಷ್ಯರಿಗೆ ಸರ್ವೋತ್ತಮನಾದ ಲೋಕನಾಥನಾದ ನಾರಾಯಣನನ್ನು ಬಿಟ್ಟು ಬೇರಾವ ಉದ್ಧಾರಕನೂ ಇಲ್ಲ.

ವಿ: ೧. ಸಂಸಾರಸಾಗರದಿಂದ ಮೇಲೆತ್ತಿ ಮುಕ್ತಿ ನೀಡುವ ಸ್ವತಂತ್ರಸಾಮರ್ಥ್ಯ ಶ್ರೀಹರಿಯದು ಮಾತ್ರ ಎಂದು ಭಾವ. ಲಕ್ಷ್ಮೀನಾರಾಯಣರ ಹೊರತು ಇತರರೆಲ್ಲ ಸಂಸಾರ ಹೊಂದಿದವರಾದ್ದರಿಂದ ಅವರಾರೂ ಮುಖ್ಯವಾಗಿ ಮೋಕ್ಷದಾಯಕರಲ್ಲ. ಬ್ರಹ್ಮ-ವಾಯುಗಳು ಜೀವೋತ್ತಮರಾದ ಋಜುಗಳು; ಅವರೂ ಸಹ ಸ್ವತಂತ್ರವಾಗಿ ಮೋಕ್ಷ ನೀಡದೇ ಶ್ರೀಹರಿಯನ್ನು ಪ್ರಾರ್ಥಿಸಿ ಮೋಕ್ಷ ಕೊಡಿಸುವರು.

೨. ಭಗವದ್ಗೀತೆಯಲ್ಲಿ ಶ್ರೀಕೃಷ್ಣ 'ಮೃತ್ಯುಸಂಸಾರಸಾಗರದಿಂದ ತನ್ನ ಭಕ್ತರನ್ನು ಮೇಲೆತ್ತುವವನು ತಾನೇ' ಎಂದು ನಿರೂಪಿಸಿರುವುದನ್ನು ಇಲ್ಲಿ ಗಮನಿಸಬೇಕು:

**'ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ।'** - (೧೨/೬)

★★

## ಹರಿಯನ್ನು ವಂದಿಸಿದವರಿಗೆ ಶಾಶ್ವತಸದ್ಗತಿ

**ರೇಣುಕುಂಠಿತಗಾತ್ರಸ್ಯ ಕಣಾ ಯಾವಂತಿ ಭಾರತ ।**
**ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥ ೯೩ ॥**

---

೧. ನಾನ್ಯೋ ಧರ್ತ್ತಾ ( ಪಾ.); ಪ್ರಭುಮ್ ( ಪಾ.); ವಿಭುಮ್ ಇತಿ ಕ್ವಚಿತ್ ।

ಅ: ಶ್ರೀಹರಿಗೆ ನಮಸ್ಕರಿಸಿದಾಗ ದೇಹಕ್ಕೆ ಎಷ್ಟು ಧೂಳಿನ ಕಣಗಳು ಮೆತ್ತುವವೋ ಅಷ್ಟು ಸಾವಿರವರ್ಷಗಳ ಕಾಲ ಅವನು ವೈಕುಂಠದಲ್ಲಿ ಮಾನ್ಯನಾಗುವನು.

ವಿ: ೧. ಶ್ರೀಹರಿಗೆ ನಮಸ್ಕರಿಸಿದಾಗ ದೇಹಕ್ಕೆ ಮೆತ್ತುವ ಧೂಳೂ ಸಹ ಪವಿತ್ರವಾದುದು ಎಂದರ್ಥ. ದೇಹಕ್ಕೆ ಎಷ್ಟು ಧೂಳಿನ ಕಣಗಳು ಮೆತ್ತಿರುವವೋ ಅಷ್ಟು ಸಾವಿರವರ್ಷಗಳ ಕಾಲ ವೈಕುಂಠವಾಸ ಖಚಿತ. ಒಟ್ಟಾಗಿ ಶಾಶ್ವತ ಸುಖಪ್ರಾಪ್ತಿ ಎಂದು ಭಾವ.

೨. ಭಕ್ತಿಯಿಂದ ಶ್ರೀಹರಿಗೆ ನಮಸ್ಕರಿಸಿದ ಮೇಲೆ ದೇಹಕ್ಕೆ ಧೂಳು ಮೆತ್ತಿದೆ ಎಂದು ಅದನ್ನು ಝಾಡಿಸಿಕೊಳ್ಳುವ ಅವಿವೇಕ ಮಾಡಕೂಡದು ಎಂಬ ಧರ್ಮಸೂಕ್ಷ್ಮವೂ ಇಲ್ಲಿ ನಿರೂಪಿತ. ದೇವಸ್ಥಾನವು ಪವಿತ್ರವಾದುದು; ಸಮ್ಮಾರ್ಜನಾದಿಗಳಿಂದ ತುಂಬ ಶುದ್ಧವಾಗಿರುವಂತಹದು; ಆದರಿಂದ ಅಲ್ಲಿಯ ಧೂಳಿಗೂ ಸಹ ತುಂಬ ಮಹತ್ತ್ವ-ವಿರುವುದರಿಂದ ಅದು ತಾರಕವೇ ಹೊರತು ಮಾರಕವಲ್ಲ ಎಂದು ತಿಳಿಯಬೇಕು.

★★

## ಶ್ರೀಹರಿಯ ನೈವೇದ್ಯ ಪರಮಪಾವನ

**ಪಾವನಂ ವಿಷ್ಣುನೈವೇದ್ಯಂ ಸುಭೋಜ್ಯಮೃಷಿಭಿಃ ಸ್ಮೃತಮ್ ।**
**ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೯೪ ॥**

ಅ: ವಿಷ್ಣುವಿಗೆ ಸಮರ್ಪಿಸಿದ ನೈವೇದ್ಯ ಪವಿತ್ರವಾದುದು, ಸುಭೋಜ್ಯ-ವಾದುದು ಎಂದು ಋಷಿಗಳು ತಿಳಿಸಿರುವರು; ಬೇರೆ ದೇವತೆಗಳ ನೈವೇದ್ಯವನ್ನು ತಿಂದರೆ ಚಾಂದ್ರಾಯಣವ್ರತವನ್ನು ಆಚರಿಸಬೇಕು.

ವಿ: ೧. ಉಚ್ಛಿಷ್ಟಭೋಜನ ತಾಮಸ ಎಂಬ ಮಾತು ಭಗವದ್ಗೀತೆಯಲ್ಲಿ ಬಂದಿದೆ; ಆದರೆ ವಿಷ್ಣುವಿಗೆ ಸಮರ್ಪಿಸಿದ ನೈವೇದ್ಯ ಅವನ ಉಚ್ಛಿಷ್ಟವೇ ಆದರೂ ಅದು ತಾಮಸವೆನ್ನಿಸದೇ ಪರಮಸಾತ್ವಿಕ ಎನ್ನಿಸುವುದು ವಿಶೇಷ

೨. ವಿಷ್ಣುವು ಪವಿತ್ರಕ್ಕಿಂತಲೂ ಪವಿತ್ರನಾದ್ದರಿಂದ ಅವನಿಗೆ ಸಮರ್ಪಿತವಾದ ನೈವೇದ್ಯ ಪವಿತ್ರವೇ ಹೊರತು ಅಪವಿತ್ರವಲ್ಲ; ಆದರೆ ಇತರ ದೇವತೆಗಳ ನೈವೇದ್ಯ ವಿಷ್ಣುನೈವೇದ್ಯದಂತೆ ಗ್ರಾಹ್ಯವಾದುದಲ್ಲ.

೩. ಶ್ರೀಮದ್ಭಾಗವತಪುರಾಣದಲ್ಲಿ ಬಂದಿರುವ ಉದ್ಧವನ ಮಾತು ಇದಕ್ಕೆ ವಿವರಣೆಯಂತಿರುವುದು ಗಮನಾರ್ಹ - ಭಾಗವತ(೧೧/೬/೪೬):

'ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ ।
ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥'

೪. ಇಲ್ಲಿಯ **ಪಾವನಂ** ಎಂಬ ಪದದಿಂದ ಪವನ ಶಬ್ದವಾಚ್ಯರಾದ ವಾಯುದೇವರ ನೈವೇದ್ಯವೂ ಸಹ ಹರಿನೈವೇದ್ಯದಂತೆ ಗ್ರಾಹ್ಯ ಎಂಬ ವಿಶೇಷಾರ್ಥವನ್ನು ವ್ಯಾಖ್ಯಾನಕಾರರು ತಿಳಿಸಿರುವರು. ವಾಯುದೇವರು ಆಖಣಾಶ್ಮಸಮರಾಗಿದ್ದು ಅವರಲ್ಲಿ ಅಸುರಾವೇಶಾದಿ ದೋಷಗಳು ಸರ್ವಥಾ ಇಲ್ಲವಾದ್ದರಿಂದ ಅವರ ನೈವೇದ್ಯವೂ ಸಹ ಗ್ರಾಹ್ಯ ಎಂದರ್ಥ:

**ವಾಯುಲಕ್ಷ್ಮೀಹರೀಣಾಂ ಚ ತ್ರಯಾಣಾಮರ್ಪಿತಾಶನಮ್ ।**
**ಗ್ರಾಹ್ಯಮೇವ ಕ್ರಮೇಣ ಸ್ಯಾದ್ ಗ್ರಾಹ್ಯಂ ನಾನ್ಯಾರ್ಪಿತಂ ಕ್ವಚಿತ್ ॥**
**ಪರಶುಕ್ಲತ್ರಯಸ್ಯ ಸ್ಯಾದ್ದೇವತ್ವಂ ನಾಮೃತಾಂಧಸಾಮ್ ।**
**ತನ್ನಿವೇದಿತಮನ್ನಾದ್ಯಂ ಭುಂಜೀಯಾನ್ಮುಖ್ಯತೋ ಬುಧಃ ॥ ಪಾದ್ಮೇ ॥**

**ದೇವದೇವೋ ಯತಃ ಶುದ್ಧೋ ವಾಯುದೇವೋ ಜಗದ್ಗುರುಃ ।**
**ಹರಿಪ್ರಿಯಸ್ತತೋ ಗ್ರಾಹ್ಯಮನ್ನಂ ವಾಯ್ವರ್ಪಿತಂ ಬುಧೈಃ ॥ ನಾರದೀಯೇ ॥**

**ವಿಷ್ಣುಲಕ್ಷ್ಮೀವಾಯುದೇವಾನ್ ವಿನಾ ದೇವಾಃ ಶಿವಾದಯಃ ।**
**ಅನ್ಯದೇವಾ ಇತಿ ಪ್ರೋಕ್ತಾಸ್ತೇ ಯೇ ವಿಷ್ಣುಪ್ರಿಯಾ ಅಪಿ ॥**
**- ಪ್ರಮಾಣಸಂಗ್ರಹದಲ್ಲಿ ಉದಾಹೃತವಾಗಿರುವ ಆಗ್ನೇಯ ವಚನ ॥**

**- ಅನ್ಯದೇವಸ್ಯೇತಿ ॥ ........ ರುದ್ರಾದಿ ದೇವಸ್ಯ ।**
**ಸಕೃದೇವ ತು ಯೋಽಶ್ನಾತಿ ಬ್ರಾಹ್ಮಣೋ ಜ್ಞಾನದುರ್ಲಭಃ ।**
**ನಿರ್ಮಾಲ್ಯಂ ಶಂಕರಾದೀನಾಂ ಚಂಡಾಲೋ ಸ ಭವೇದ್ ಧ್ರುವಮ್ ॥ ಇತಿ**

**ಪಾದ್ಮವಚನೇನ ಅನ್ಯದೇವತಾನಿವೇದಿತಸ್ಯೈವ ನಿಂದಿತತ್ವಾತ್ । ವಾಯುಸ್ತ್ವನ್ಯದೇವಃ ನ । ತನ್ನಿವೇದಿತಂ ಗ್ರಾಹ್ಯಮ್ । ತದುಕ್ತಮ್ -**

**ತೇಷಾಮೇಕಾಂತಿನಃ ಶ್ರೇಷ್ಠಾಃ ತ ಏವಾನನ್ಯದೇವತಾಃ ।**
**ಅಹಮೇವ ಗತಿಸ್ತೇಷಾಂ ನಿರಾಶೈಃ ಕರ್ಮಕಾರಿಣಾಮ್ ॥ ಇತಿ ॥**

**ಪವಿತ್ರಂ ಪವಮಾನಸ್ಯ ಭುಕ್ತಶೇಷಂ ಜಗದ್ಗುರೋಃ ।**
**ಭುಂಜೀತ ಶುದ್ಧಭಾವೇನ ಭಕ್ತಿಜ್ಞಾನವಿವರ್ಧನಮ್ ॥ ಇತಿ ॥**

**ಶುದ್ಧಂ ನಿವೇದಿತಂ ವಾಯೋರ್ಯೋಽಶ್ನಾತಿ ನರಪುಂಗವಃ ।**
**ಶುದ್ಧೋ ಜ್ಞಾನಾದ್ಯಮಾಪ್ನೋತಿ ಹರೇರಚ್ಛಿನ್ನಭಕ್ತಿತಃ ॥**
**- ಇತಿ ವಿಧಾಯಕಪ್ರಮಾಣಾಚ್ಚ ॥ (ಉ.)**

**ಅನ್ಯದೇವಸ್ಯೇತಿ ॥ ರುದ್ರಾದಿ ದೇವಸ್ಯ । ವಾಯುಸ್ತ್ವನ್ಯದೇವಃ ನ । (ಉಪೇ)**

**ಅನ್ಯೇಷಾಂ ದೇವತಾನಾಂ ಚ ನ ಗೃಹ್ಣೀಯಾಚ್ಚ ಭಕ್ತಿತಃ ।**
**ಅಭಕ್ತಾನಾಂ ಚ ಪಕ್ವಾನ್ನಂ ಭುಕ್ತ್ವಾ ಚ ನರಕಂ ವ್ರಜೇತ್।**
**- ಸ್ಕಾಂದ ಮಾರ್ಗಶೀರ್ಷಮಾಹಾತ್ಮ್ಯ**

**ನೈವೇದ್ಯಭೋಜನಂ ಶ್ರೇಯಃ ಸರ್ವೇಷಾಂ ಚ ತದಾಽವದತ್ ।**
**ಭಗವಾನ್ ವ್ಯಾಸರೂಪೀ ತು ಕರ್ಮಲೇಪಾಯ ವೈ ಸತಾಮ್ ।**

ಭುಕ್ತ್ವಾಽನ್ಯದೇವನೈವೇದ್ಯಂ ದ್ವಿಜಶ್ಚಾಂದ್ರಾಯಣಂ ಚರೇತ್ ।
ಭುಕ್ತ್ವಾ ಕೇಶವನೈವೇದ್ಯಂ ಕೋಟಿಕೋಟ್ಯಯುತಂ ಫಲಮ್ ॥

ಬ್ರಹ್ಮಚಾರಿಗೃಹಸ್ಥೈಶ್ಚ ವಾನಪ್ರಸ್ಥೈಶ್ಚ ಭಿಕ್ಷುಭಿಃ ।
ವಿಷ್ಣೋರ್ನೈವೇದ್ಯಂ ಭೋಕ್ತವ್ಯಂ ನಾತ್ರ ಕಾರ್ಯಾ ವಿಚಾರಣಾ ॥

– ವಿಷ್ಣುತೀರ್ಥೀಯ

೫. **ಚಾಂದ್ರಾಯಣವ್ರತ** ಎಂದರೆ ಗೋವಿಗೆ ನವಣೆ ಧಾನ್ಯವನ್ನು ತಿನ್ನಿಸಿ ಅದರ ಗೋಮಯದ ಮೂಲಕ ಹೊರಬರುವ ಅವುಗಳನ್ನು ಪಾಕ ಮಾಡಿ ನೈವೇದ್ಯ ವೈಶ್ವದೇವಾದಿಗಳ ಅನಂತರ ಅದರಲ್ಲಿ ಶುಕ್ಲ ಪಕ್ಷದಲ್ಲಿ ದಿನಕ್ಕೆ ಒಂದು ತುತ್ತಿನಂತೆ ಹುಣ್ಣಿಮೆ ವರೆಗೂ ಹೆಚ್ಚಿಸುತ್ತಾ, ಅನಂತರ ಕೃಷ್ಣಪಕ್ಷದಲ್ಲಿ ದಿನಕ್ಕೆ ಒಂದು ತುತ್ತಿನಂತೆ ಕಡಿಮೆ ಮಾಡುತ್ತಾ ಆಹಾರಸ್ವೀಕರಿಸುವ ವ್ರತ. ಚಂದ್ರನ ವೃದ್ಧಿಹ್ರಾಸಗಳಿಗೆ ಅನುಗುಣವಾಗಿ ಆಹಾರದ ತುತ್ತಿನ ಪ್ರಮಾಣ ಹೆಚ್ಚುಕಡಿಮೆ ಆಗುವ ಕಾರಣದಿಂದ ಚಾಂದ್ರಾಯಣ ಎಂಬ ಹೆಸರು ಇದಕ್ಕೆ ಉಕ್ತವಾಗಿದೆ (ಉಭಯಪಕ್ಷಗಳ ಏಕಾದಶಿಗಳಲ್ಲಿ ಮಾತ್ರ ಯಾವ ಆಹಾರವೂ ವಿಹಿತವಲ್ಲ). ಇದು ಒಂದು ವರ್ಷ ಅಥವಾ ಒಂದು ತಿಂಗಳು ಪೂರ್ತಿ ಆಚರಿಸಬೇಕಾದ ವಿಶಿಷ್ಟವ್ರತ. ವಿಶೇಷವಾಗಿ ದೇಹಶುದ್ಧಿ ಅಂತಃಕರಣಶುದ್ಧಿಗಳಿಗಾಗಿ ವಿಹಿತವಾದ ವ್ರತ:

ತಿಥಿವೃದ್ಧ್ಯಾ ಚರೇತ್ ಪಿಂಡಾನ್ ಶುಕ್ಲೇ ಶಿಖ್ಯಂಡಸಮ್ಮಿತಾನ್ ।
ಏಕೈಕಂ ಹ್ರಾಸಯೇತ್ ಪಿಂಡಾನೇವಂ ಚಾಂದ್ರಾಯಣಂ ಚರೇತ್ ॥
ಅಷ್ಟಾವಷ್ಟೌ ಸಮಶ್ನೀಯಾತ್ ಪಿಂಡಾನ್ ಮಧ್ಯಂದಿನೇ ಗತೇ ।
ನಿಯತಾತ್ಮಾ ಹವಿಷ್ಯಸ್ಯ ಯತಿಶ್ಚಾಂದ್ರಾಯಣಂ ಚರೇತ್ ॥ ಇತಿ ॥ (ಉ.)

ಚಂದ್ರವೃದ್ಧ್ಯಾ ಸಮಶ್ನೀಯಾತ್ ಕುಕ್ಕುಟಾಂಡಪ್ರಮಾಣತಃ ।
ದಿನೇ ದಿನೇ ಹವಿರ್ಗ್ರಾಹ್ಯಂ ಹಾನೌ ಹಾನಿಂ ಪ್ರಕಲ್ಪಯೇತ್ ।
ಏವಂ ಮಾಸೇನ ಪೂರ್ಣಂ ಸ್ಯಾದೇತತ್ ಚಾಂದ್ರಾಯಣಂ ಸ್ಮೃತಮ್ ॥

–ವರಾಹಪುರಾಣ ॥

★★

## ಶ್ರೀಹರಿಯ ನೈವೇದ್ಯ ಚಾಂದ್ರಾಯಣಾದಿಗಳಿಗಿಂತ ಮಿಗಿಲು

ಕೋಟ್ಯಯುತವಸಹಸ್ರೈಸ್ತು ಮಾಸೋಪೋಷಣಕೋಟಿಭಿಃ ।
[1]ಯತ್ಫಲಂ ಲಭ್ಯತೇ ಪುಂಭಿರ್ವಿಷ್ಣೋರ್ನೈವೇದ್ಯಭಕ್ಷಣಾತ್ ॥ ೯೫ ॥

೧. ತತ್ಫಲಂ ಲಭ್ಯತೇ ಪುಂಭಿರ್ವಿಷ್ಣುನೈವೇದ್ಯಭಕ್ಷಣಾತ್ ( ಪಾ.)

**ಅ:** ಕೋಟಿ ಚಾಂದ್ರಾಯಣವ್ರತಗಳಿಂದ, ಕೋಟಿ ಮಾಸೋಪವಾಸವ್ರತ-ಗಳಿಂದ ಪುರುಷರಿಗೆ ಯಾವ ಫಲವು ಲಭಿಸುವುದೋ, ಆ ಫಲವು ವಿಷ್ಣುವಿನ ನೈವೇದ್ಯವನ್ನು ಭಕ್ಷಿಸುವುದರಿಂದ ಲಭಿಸುವುದು.

ವಿ: ೧. ವಿಷ್ಣುನೈವೇದ್ಯಸ್ವೀಕಾರ ಕೇವಲ ಪಾಪಹರವಲ್ಲ; ತುಂಬಾ ಪುಣ್ಯಕರವೂ ಆದುದು. ಚಾಂದ್ರಾಯಣಾದಿವ್ರತಗಳು ಪುಣ್ಯಕರವೆಂದು ಪ್ರಸಿದ್ಧ; ಆದರೆ ವಿಷ್ಣುನೈವೇದ್ಯ-ಸ್ವೀಕಾರ ಅಂತಹ ಎಲ್ಲ ವ್ರತಗಳಿಗಿಂತಲೂ ಮಿಗಿಲಾದ ಶ್ರೇಷ್ಠ ಶುದ್ಧಿಹೇತು ಎಂದರ್ಥ.

೨. ಇತರದೇವತೆಗಳ ನೈವೇದ್ಯವನ್ನು ಸ್ವೀಕರಿಸುವುದು ಮಹತ್ತರವಾದ ಪಾಪಕಾರ್ಯ-ವಾಗಿ ಅದರ ಪರಿಹಾರಕ್ಕೆ ಚಾಂದ್ರಾಯಣಾದಿವ್ರತಗಳೇ ವಿಹಿತವಾದರೆ, ವಿಷ್ಣುನೈವೇದ್ಯದ ಭಕ್ಷಣೆ ಚಾಂದ್ರಾಯಣಾದಿವ್ರತಗಳ ಪುಣ್ಯಫಲವನ್ನೇ ಕೊಡುವಂತಹ ಪವಿತ್ರಕಾರ್ಯ ಎಂದು ಭಾವ.

೩. ಅಜ್ಞಾನ ಪ್ರಮಾದಾದಿಗಳಿಂದ ಅನ್ಯದೇವತೆಗಳ ನೈವೇದ್ಯವನ್ನು ಸ್ವೀಕರಿಸಿದ ಪಾಪ ವಿಷ್ಣುನೈವೇದ್ಯದ ಸ್ವೀಕಾರದಿಂದ ಪರಿಹಾರವಾಗುವುದೆಂಬ ಅರ್ಥವಿಶೇಷವನ್ನು ಸಹ ಇಲ್ಲಿ ಗುರುತಿಸಬಹುದು.

★★

## ವಿಷ್ಣುಪಾದೋದಕವು ಸಕಲತೀರ್ಥಗಳಿಗಿಂತ ಶ್ರೇಷ್ಠ

**ತ್ರಿರಾತ್ರಫಲದಾ[೧] ನದ್ಯೋ ಯಾಃ ಕಾಶ್ಚಿದಸಮುದ್ರಗಾಃ[೨] ।**
**ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೯೬ ॥**

**ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ ।**
**ವಿಷ್ಣುಪಾದೋದಕಸ್ಯೈತಾಃ[೩] ಕಲಾಂ[೪] ನಾರ್ಹಂತಿ ಷೋಡಶೀಮ್ ॥ ೯೭ ॥**

---

೧. ಅಪಿ ತ್ರಿರಾತ್ರಮನುಷ್ಠೇಯಸ್ಯ ಯಜ್ಞಸ್ಯ ಯತ್ ಫಲಂ ತತ್ಪ್ರದಾ ಇತ್ಯರ್ಥಃ ॥ (ತಾ); ತ್ರಿರಾತ್ರ್ಯುಪ-ವಾಸಫಲದಾ ಇತ್ಯರ್ಥಃ (ಉ) ॥; ವಾಯುಪುರಾಣೋಕ್ತರೀತ್ಯಾ ತ್ರಿರಾತ್ರಿಮಾಸಾನುಷ್ಠೇಯ-ಯಜ್ಞಫಲದಾ ಇತ್ಯರ್ಥಃ । (ಉಪೇ); ತ್ರಿರಾತ್ರಫಲದಾಃ ತ್ರಿರಾತ್ರೋಪವಾಸಜನ್ಯಫಲದಾಃ ॥ (ಕೋ)

೨. ತ್ರಿರಾತ್ರಯಜ್ಞಫಲದಾ ಯಾಃ ಕಾಶ್ಚಿದಸಮುದ್ರಗಾಃ । ವಾಯುಪುರಾಣ ( ಮಾಘಮಾಹಾತ್ಮ್ಯೇ)

೩. ವಿಷ್ಣುಪಾದೋದಕಸ್ಯೈತೇ( ಪಾ.)

೪. ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ ।

ಅ: ಸಮುದ್ರ ಸೇರದ ನದಿಗಳು ಮೂರುರಾತ್ರಿಗಳ ಯಜ್ಞಾದಿಗಳ ಫಲವನ್ನು ನೀಡುವವು; ಸಮುದ್ರ ಸೇರುವ ನದಿಗಳು ಒಂದು ಪಕ್ಷದ ಯಾಗದ ಫಲವನ್ನು ನೀಡುವವು; ನದಿಗಳ ಒಡೆಯನಾದ ಸಮುದ್ರವು ಒಂದು ತಿಂಗಳ ಯಾಗದ ಫಲವನ್ನು ನೀಡುವುದು; ಗೋದಾವರಿಯು ಆರು ತಿಂಗಳ ಯಾಗದ ಫಲವನ್ನು ಕೊಡುವುದು; ಗಂಗೆಯು ಒಂದು ವರ್ಷದ ಯಾಗ ಫಲವನ್ನು ಕೊಡುವುದು[೧]; ಆದರೆ ಇವು ಯಾವುವೂ ವಿಷ್ಣುಪಾದೋದಕದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸವು.

ವಿ: ೧. ವಿಷ್ಣುಪಾದೋದಕವು ಗಂಗಾದಿಸಕಲತೀರ್ಥಗಳಿಗಿಂತಲೂ ಅತ್ಯಂತಶ್ರೇಷ್ಠ ಎಂದು ಭಾವ.

೨. ಇಲ್ಲಿ ನದಿಗಳ ತಾರತಮ್ಯವು ನಿರೂಪಿತವಾಗಿರುವುದು ವಿಶೇಷ; ಸಮುದ್ರ ಸೇರದ ನದಿಗಳಿಗಿಂತ ಸಮುದ್ರ ಸೇರುವ ನದಿಗಳೂ, ಅವುಗಳಿಗಿಂತ ಸಮುದ್ರವೂ, ಅದಕ್ಕಿಂತ ಗೋದಾವರಿಯೂ, ಅದಕ್ಕಿಂತ ಗಂಗೆಯೂ ಶ್ರೇಷ್ಠ ಎಂಬುದು ಇಲ್ಲಿಯ ತಾರತಮ್ಯಕ್ರಮ; ನದಿಗಳ ತಾರತಮ್ಯದ ಬಗ್ಗೆ ವಿಶೇಷವಿವರಗಳನ್ನು ಶ್ರೀರಾಘವೇಂದ್ರಸ್ವಾಮಿಗಳು ಬ್ರಹ್ಮಾಂಡಪುರಾಣದ ಆಧಾರದಿಂದ ನಿರೂಪಿಸಿರುವ ನದೀತಾರತಮ್ಯಸ್ತೋತ್ರದಿಂದ ತಿಳಿದುಕೊಳ್ಳಬಹುದು.

೩. ಇಂತಹ ವಿಷ್ಣುಪಾದೋದಕದ ಮುಖ್ಯಫಲವನ್ನು ಪಡೆಯಲು ಸ್ವತಃ ತಾನೇ ಭಕ್ತಿಪೂರ್ವಕ ದೇವತಾಪೂಜೆ ಮಾಡಬೇಕು ಎಂಬುದು ಇಲ್ಲಿಯ ಮುಖ್ಯ ಸಂದೇಶ.

---

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾऽऽರ್ಜಿಕೀಯೇ ಶೃಣುಹ್ಯಾ ಸುಷೋಮಯಾ ॥–ಋಗ್ವೇದ (೧೦.೭೫-೫)
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು ॥
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ।
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ ॥
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ।
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ ॥ – ಸ್ಮೃತಿ

ಸರ್ವಕ್ಷೇತ್ರಮಯೋ ಯಸ್ಮಾತ್ ಸರ್ವತೀರ್ಥಮಯೋ ಯತಃ ।
ಅತೋ ಹರಿಪ್ರಿಯೋऽಸಿ ತ್ವಂ ಪೂರ್ಣಕುಂಭ ನಮೋऽಸ್ತು ತೇ ॥
(ಇವು ಶ್ರೀಜಯತೀರ್ಥರ ಪದ್ಯಮಾಲಾ ಕೃತಿಯಲ್ಲಿ ಕಲಶಪೂಜೆಗೆ ವಿಹಿತ ಮಂತ್ರಗಳು ಎಂಬುದಾಗಿ ಉಲ್ಲೇಖಿಸಲ್ಪಟ್ಟಿವೆ.)

೧. ಜಾಹ್ನವೀ ವತ್ಸರಾಖ್ಯಸ್ಯ ಯಜ್ಞಸ್ಯ ಫಲದಾ ಸ್ಮೃತಾ ॥ ವಾಯುಪುರಾಣೇ ( ಮಾಘಮಾಹಾತ್ಮ್ಯೇ)

೪. ಇಲ್ಲಿ ಸಕಲತೀರ್ಥಗಳೂ ವಿಷ್ಣುಪಾದೋದಕಗಳೇ ಆಗಿದ್ದರೂ, ಗಂಗೆ ಗೋದಾವರಿ-ಗಳಂತೂ ಸಾಕ್ಷಾತ್ ವಿಷ್ಣುಪಾದೋದ್ಭವತೀರ್ಥಗಳೇ ಆಗಿದ್ದರೂ, ಸ್ವತಃ ದೇವಪೂಜೆ ಮಾಡಿ ಸಿದ್ಧಪಡಿಸುವ ವಿಷ್ಣುಪಾದೋದಕ ಇನ್ನೂ ಶ್ರೇಷ್ಠ ಎಂದರ್ಥ.

೫. ಹಾಗೆ ವಿಷ್ಣುವಿನ ಪಾದಕ್ಕೆ ಅಭಿಷೇಕಮಾಡುವ ಕಲಶೋದಕದಲ್ಲಿ ಗಂಗಾದಿ ತೀರ್ಥಗಳನ್ನೆಲ್ಲಾ ಒಟ್ಟಾಗಿ ಆವಾಹನೆ ಮಾಡುವುದರಿಂದ ಆ ವಿಷ್ಣುಪಾದೋದಕವು ಅವೆಲ್ಲವುಗಳಿಗಿಂತಲೂ ಶ್ರೇಷ್ಠವೆನ್ನಿಸುವುದು ಸಹಜ ಎಂಬ ಯುಕ್ತಿಯನ್ನು ಗಮನಿಸಬೇಕು.

೬. ಇಲ್ಲಿ **ಫಲ** ಎಂಬುದಕ್ಕೆ ಮೂರು ರಾತ್ರಿಯ ಉಪವಾಸವ್ರತದ ಫಲ, ಮೂರುರಾತ್ರಿಯ ಯಜ್ಞದ ಫಲ ಎಂಬ ವಿವರಣೆ ವ್ಯಾಖ್ಯಾನಗಳಲ್ಲಿದೆ.

★★

## ವಿಷ್ಣುಪಾದೋದಕವು ಗಂಗಾದಿಗಳಿಗಿಂತ ಪಾವನ

**ಗಂಗಾಪ್ರಯಾಗಗಯಪುಷ್ಕರನೈಮಿಷಾಣಿ[೧]**
**ಸಂಸೇವಿತಾನಿ ಬಹುಶಃ ಕುರುಜಾಂಗಲಾನಿ ।**
**ಕಾಲೇನ ತೀರ್ಥಸಲಿಲಾನಿ ಪುನಂತಿ ಪಾಪಂ**
**ಪಾದೋದಕಂ ಭಗವತಃ ಪ್ರಪುನಾತಿ ಸದ್ಯಃ ॥ ೯೮ ॥**

**ಅ:** ಗಂಗಾ, ಪ್ರಯಾಗ, ಗಯಾ, ಪುಷ್ಕರ, ನೈಮಿಷಗಳು ಮತ್ತು ಕುರುಕ್ಷೇತ್ರ ಮೊದಲಾದ ತೀರ್ಥೋದಕಗಳು ಬಹಳವಾಗಿ ಚೆನ್ನಾಗಿ ಸೇವಿಸಿದಾಗ ಪಾಪಿಯನ್ನು ಪಾವನಗೊಳಿಸಿಯಾವು; ಆದರೆ ಶ್ರೀಹರಿಯ ಪಾದೋದಕವು ಆ ಕ್ಷಣದಲ್ಲೇ ವಿಶೇಷವಾಗಿ ಪಾವನ ಮಾಡುವುದು.

**ವಿ:** ೧. ಇದರಲ್ಲಿ ಗಂಗಾದಿತೀರ್ಥಗಳಿಗೂ ಶ್ರೀಹರಿಪಾದೋದಕಕ್ಕೂ ಇರುವ ವ್ಯತ್ಯಾಸವನ್ನು ವಿವರಿಸಿರುವರು.

೨. ಗಂಗಾದಿ ತೀರ್ಥಕ್ಷೇತ್ರಗಳು ಪಾವನಮಾಡುವುದು ನಿಶ್ಚಿತವಾದರೂ ಅವು ಅದಕ್ಕೆ ತೆಗೆದುಕೊಳ್ಳುವ ಅವಧಿ ತುಂಬಾ ಹೆಚ್ಚಿನದು. ಆದರೆ ವಿಷ್ಣುಪಾದೋದಕ ಹಾಗಲ್ಲ; ಅದು ಆ ಕೂಡಲೇ ಎಂತಹ ಪಾಪವನ್ನೂ ಸಹ ಪರಿಹರಿಸಿ ಉದ್ಧರಿಸುವುದು ಎಂದು ಭಾವ.

೩. ಇದು '**ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ । ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ।**' (೧೦/೮೩/೧೧) ಎಂಬ ಶ್ರೀಮದ್ಭಾಗವತಶ್ಲೋಕದ ವಿವರಣೆಯಂತಿರುವುದು ಗಮನಾರ್ಹ. ಅಲ್ಲಿ ಶ್ರೀಮದಾ-ಚಾರ್ಯರು ತಿಳಿಸಿರುವ ತಾತ್ಪರ್ಯವೇ ಇಲ್ಲಿಯೂ ಗ್ರಾಹ್ಯ. ಅದರಂತೆ **ಕಾಲೇನ** ಎಂಬುದಕ್ಕೆ ಉರುಕಾಲೇನ ಎಂದು ಅರ್ಥವಾಗುವುದು. ಅದಕ್ಕೆ '**ಗುರೂಪದೇಶಂ**

---

೧. '- ನೈಮಿಶಾನಿ' (ಪಾ.)

ಪ್ರಾಪಯಿತ್ವಾ' ಎಂಬ ವಿಶೇಷಾರ್ಥ ಅಲ್ಲಿ ಬಂದಿದೆ. ಎಂದರೆ ಗಂಗಾದಿತೀರ್ಥಗಳು ಸದ್ಗತಿಪ್ರದವಾಗುವುದು ಸಾಕ್ಷಾತ್ತಾಗಿ ಅಲ್ಲ; ಗುರೂಪದೇಶಕ್ಕೆ ಕಾರಣವಾಗುವ ಮೂಲಕ. ಆದರೆ ಶ್ರೀಹರಿಯ ಪಾದೋದಕ ಆ ಕೂಡಲೇ ಗುರೂಪದೇಶಕ್ಕೆ ನೆರವಾಗುವ ಮೂಲಕ ತಕ್ಷಣ ಉದ್ಧರಿಸುವುದು ಎಂದು ಭಾವ.

೪. ಇದರಿಂದ ಸಾಧನೆಯಲ್ಲಿ ತೀರ್ಥಕ್ಷೇತ್ರಗಳ ಮಹತ್ತ್ವವನ್ನೂ ಸಹ ತಿಳಿಸಿದಂತಾಗಿದೆ. ತೀರ್ಥಕ್ಷೇತ್ರಗಳು ಸದ್ಗತಿಸಾಧನವೆಂಬುದು ಜ್ಞಾನಸಾಧನವಾಗುವ ಮೂಲಕವೇ ಹೊರತು ಸಾಕ್ಷಾತ್ತಾಗಿ ಅಲ್ಲ. ಆದರೆ ಜ್ಞಾನ ಹಾಗಲ್ಲ. ಅದು ನೇರವಾಗಿಯೇ ಶ್ರೀಹರಿಯ ಅನುಗ್ರಹಕ್ಕೆ ಸಾಧನವಾಗುವ ವಿಶಿಷ್ಟಸಾಧನ ಎಂಬುದು ವಿಶೇಷ. ಶ್ರೀಮಹಾಭಾರತತಾತ್ಪರ್ಯನಿರ್ಣಯದಲ್ಲಿನ

**'ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।**
**ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ' (೧/೯೮)**

– ಎಂಬ ಶ್ಲೋಕದಲ್ಲಿ ಇದರ ಭಾವ ನಿರೂಪಿತವಾಗಿದೆ.

೫. ನಿತ್ಯ ದೇವಪೂಜೆ ಮಾಡಿ ತೀರ್ಥಪ್ರಾಶನಮಾಡುವುದು ಜ್ಞಾನಸಂಪಾದನೆಗೆ ಸಾಧನ ಎಂಬ ವಿಶೇಷಾರ್ಥವು ಇದರಿಂದ ಸೂಚಿತ.

★★

## ಸಕಲತೀರ್ಥಗಳಿಗಿಂತಲೂ ಹರಿಪಾದೋದಕವು ಮಿಗಿಲು

**ಯಾನಿ ಕಾನಿ ಚ ತೀರ್ಥಾನಿ ಬ್ರಹ್ಮಾಂಡಾಂತರ್ಗತಾನಿ ಚ ।**
**ವಿಷ್ಣುಪಾದೋದಕಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್ ॥ ೯೯ ॥**

**ಅ:** ಬ್ರಹ್ಮಾಂಡದೊಳಗೆ ಯಾವ ಯಾವ ತೀರ್ಥಗಳು ಇರುವುವೋ, ಅವೆಲ್ಲವು ಒಟ್ಟಾದರೂ ಸಹ ವಿಷ್ಣುಪಾದೋದಕದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನಿಸವು.

**ವಿ:** ಇದೂ ಸಹ ಹರಿಪಾದೋದಕದ ಹಿರಿಮೆಯನ್ನು ಸಾರುವ ಶ್ಲೋಕ ; ಗಂಗಾದಿ ಕೆಲವು ತೀರ್ಥಗಳಿಗೆ ಮಾತ್ರವಲ್ಲದೇ ಬ್ರಹ್ಮಾಂಡದೊಳಗಿನ ಸಕಲತೀರ್ಥಗಳಿಗಿಂತಲೂ ಹರಿಪಾದೋದಕವು ತುಂಬಾ ಶ್ರೇಷ್ಠವಾದುದು ಎಂದರ್ಥ.

**ಅಚೇತನಾದ್ಯತಸ್ತ್ವಂಡಾದ್ ಬ್ರಹ್ಮಾ ಸಮಜನಿ ಸ್ಫುಟಮ್ ।**
**ಅತೋ ಬ್ರಹ್ಮಾಂಡಮಿತ್ಯಾಹುರ್ವಿರಾಡ್ ಬ್ರಹ್ಮಾ ಪ್ರಕಾಶನಾತ್ ॥**
**- ಭಾಗವತತಾತ್ಪರ್ಯ (೩/೨೬/೫೪)**

★★

## ವಿಷ್ಣುಪಾದೋದಕದ ಪ್ರಾಶನ ತಾರಕ

**ಸ್ನಾನಂ ಪಾದೋದಕಂ ವಿಷ್ಣೋಃ ಪಿಬನ್ ಶಿರಸಿ [೧]ಧಾರಯನ್ ।**
**ಸರ್ವಪಾಪವಿನಿರ್ಮುಕ್ತೋ ವೈಷ್ಣವೀಂ ಸಿದ್ಧಿಮಾಪ್ನುಯಾತ್ ॥ ೧೦೦ ॥**

**ಅ:** ಶ್ರೀವಿಷ್ಣುವಿನ ಅಭಿಷೇಕ ಜಲವನ್ನು, ಪಾದೋದಕವನ್ನು ಕುಡಿಯು-ವವನು, ತಲೆಯ ಮೇಲೆ ಧರಿಸುವವನು, ಸಕಲಪಾಪಗಳಿಂದಲೂ ಸಂಪೂರ್ಣ ಬಿಡುಗಡೆ ಹೊಂದಿ ವೈಷ್ಣವೀ ಸಿದ್ಧಿಯನ್ನು ಪಡೆಯುವನು.

**ವಿ:** ೧. ಇದರಲ್ಲಿ ಶ್ರೀಹರಿಪಾದೋದಕದ ಶಿರಸಾಧಾರಣೆ ಮತ್ತು ಪ್ರಾಶನ ಎರಡೂ ಸಹ ವಿಹಿತ ಎಂಬ ವಿಷಯ ನಿರೂಪಿತವಾಗಿದೆ.

೨. ಇಲ್ಲಿ ವೈಷ್ಣವೀಸಿದ್ಧಿಯೆಂದರೆ ವಿಷ್ಣುದೀಕ್ಷಾಸಿದ್ಧಿ ಕ್ರಮೇಣ ಮೋಕ್ಷಸಿದ್ಧಿ ಎಂದರ್ಥ.

★★

## ಶ್ರೀಹರಿನಿರ್ಮಾಲ್ಯಾದಿಗಳು ಸುಗ್ರಾಹ್ಯ

**ಯಥಾ ಪಾದೋದಕಂ ಪುಣ್ಯಂ ನಿರ್ಮಾಲ್ಯಂ ಚಾನುಲೇಪನಮ್ ।**
**ನೈವೇದ್ಯಂ ಧೂಪಶೇಷಂ ಚ ಆರಾರ್ತಿಶ್ಚ ತಥಾ ಹರೇಃ ॥ ೧೦೧ ॥**

**ಅ:** ವಿಷ್ಣುವಿನ ಪಾದೋದಕದಂತೆ ಆವನ ನಿರ್ಮಾಲ್ಯ, ಗಂಧ, ನೈವೇದ್ಯ, ಧೂಪಶೇಷ ಹಾಗೂ ಮಂಗಲಾರತಿಗಳು ಸಹ ಪುಣ್ಯಕರವಾದವುಗಳು.

**ವಿ:** ೧. ವಿಷ್ಣುವಿನ ತೀರ್ಥಪಾದೋದಕಗಳಂತೆ ಆವನಿಗೆ ಸಮರ್ಪಿತವಾದ ನಿರ್ಮಾಲ್ಯ ಗಂಧಾದಿಗಳು ನೈವೇದ್ಯ ಮೊದಲಾಗಿ ಎಲ್ಲವೂ ಸಹ ಅತ್ಯಂತಪುಣ್ಯಕರ ಎಂದರ್ಥ.

೨. ಇಲ್ಲಿ ಧೂಪಶೇಷ ಎಂದರೆ ಅಂಗಾರ ಎಂದರ್ಥ.

೩. ಇದೂ ಸಹ ಶ್ರೀಮದ್ಭಾಗವತದ

**'ತ್ವಯೋಪಭುಕ್ತಸ್ರಗ್ಗಂಧವಾಸೋಲಂಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥'**

ಎಂಬ ಶ್ಲೋಕದ ವಿವರಣೆಯಂತಿದೆ.

★★

೧. 'ಧಾರಯೇತ್' (ಪಾ.)

## ಶ್ರೀಹರಿಯ ನೈವೇದ್ಯ ಅತ್ಯಂತ ಪಾವನ

**ತುಲಸ್ಯಾಸ್ತು ರಜೋಜುಷ್ಟನೈವೇದ್ಯಸ್ಯ ಚ ಭಕ್ಷಣಮ್ ।**
**ನಿರ್ಮಾಲ್ಯಂ ಶಿರಸಾ ಧಾರ್ಯಂ ಮಹಾಪಾತಕನಾಶನಮ್ ॥ ೧೦೨ ।**

**ಅ:** ತುಲಸಿಯ ಧೂಲಿನಿಂದ ಕೂಡಿದ ನೈವೇದ್ಯವನ್ನು ಭಕ್ಷಿಸಬೇಕು; ಶ್ರೀಹರಿಯ ನಿರ್ಮಾಲ್ಯವನ್ನು ತಲೆಯ ಮೇಲೆ ಧರಿಸಬೇಕು; ಇವು ಮಹಾಪಾತಕವನ್ನು ನಾಶಮಾಡುವಂತಹವು.

★★

## ಚಕ್ರಾಂಕಿತದ ದರ್ಶನಾದಿಗಳು ಸಹ ಪವಿತ್ರ

**ಭಕ್ತ್ಯಾ ವಾ ಯದಿ ವಾಽಭಕ್ತ್ಯಾ ಚಕ್ರಾಂಕಿತಶಿಲಾಂ ಪ್ರತಿ ।**
**ದರ್ಶನಂ ಸ್ಪರ್ಶನಂ ವಾಽಪಿ ಸರ್ವಪಾಪಪ್ರಣಾಶನಮ್ ॥ ೧೦೩ ॥**

**ಅ:** ಭಕ್ತಿ ಇರಲಿ ಅಥವಾ ಇಲ್ಲದಿರಲಿ, ಚಕ್ರಾಂಕಿತಶಿಲೆಯನ್ನು ನೋಡುವುದು, ಮುಟ್ಟುವುದು ಸಹ ಸರ್ವಪಾಪಪರಿಹಾರಕ.

**ವಿ:** ೧. ಇಲ್ಲಿಂದ ಮುಂದಿನ ಶ್ಲೋಕಗಳಲ್ಲಿ ಶ್ರೀಹರಿಯ ಪೂಜೆಯ ಮಹಿಮೆ ವರ್ಣಿತವಾಗಿದೆ; ಮೊದಲಿಗೆ ಚಕ್ರಾಂಕಿತಪೂಜೆಯ ಮಹತ್ತ್ವವನ್ನು ತಿಳಿಸುತ್ತಿರುವರು.

೨. ಚಕ್ರಾಂಕಿತಶಿಲೆಯ ಪೂಜೆಯಂತೆ ಅವುಗಳ ದರ್ಶನ, ಸ್ಪರ್ಶನಗಳೂ ಸಹ ತಾರಕ.

೩. ಇದರಿಂದ ಮುಟ್ಟಿ ಪೂಜೆ ಮಾಡುವ ಭಾಗ್ಯವಿಲ್ಲದವರು ಚಕ್ರಾಂಕಿತಾದಿಗಳನ್ನು ನೋಡಿಯೂ ಸಹ ಯಥೋಚಿತವಾಗಿ ಪುಣ್ಯಶಾಲಿಗಳಾಗಬಹುದು ಎಂಬ ವಿಶೇಷಾಂಶ ಸೂಚಿತ.

೪. ಸಂಸಾರಬಂಧನದ ಪರಿಹಾರಕ್ಕೆ ಸಾಧನವಾಗುವ ಭಕ್ತಿ ಹದಿನಾರು ಬಗೆ ಎಂಬ ವಿಶೇಷಾಂಶ ಪದ್ಮಪುರಾಣದಲ್ಲಿದೆ (ಉತ್ತರಖಂಡ - ೨೨೪/೨೩-೨೭):

**ಆದ್ಯಂ ತು ವೈಷ್ಣವಂ ಪ್ರೋಕ್ತಂ ಶಂಖಚಕ್ರಾಂಕನಂ ಹರೇಃ ।**
**ಧಾರಣಂ ಚೋರ್ಧ್ವಪುಂಡ್ರಾಣಾಂ ತನ್ಮಂತ್ರಾಣಾಂ ಪರಿಗ್ರಹಃ ।**
**ಅರ್ಚನಂ ಚ ಜಪೋ ಧ್ಯಾನಂ ತನ್ನಾಮಸ್ಮರಣಂ ತಥಾ ॥**
**ಕೀರ್ತನಂ ಶ್ರವಣಂ ಚೈವ ವಂದನಂ ಪಾದಸೇವನಮ್ ।**
**ತತ್ಪಾದೋದಕಸೇವಾ ಚ ತನ್ನಿವೇದಿತಭೋಜನಮ್ ॥**
**ತದೀಯಾನಾಂ ಚ ಸೇವಾ ಚ ದ್ವಾದಶೀವ್ರತನಿಷ್ಠಿತಮ್ ।**

ತುಲಸೀರೋಪಣಂ ವಿಷ್ಣೋರ್ದೇವದೇವಸ್ಯ ಶಾರ್ಙ್ಗಿಣಃ ॥
ಭಕ್ತಿಃ ಷೋಡಶಧಾ ಪ್ರೋಕ್ತಾ ಭವಬಂಧವಿಮುಕ್ತಯೇ ।

★★

## ಸಾಲಿಗ್ರಾಮದಂತೆ ಚಕ್ರಾಂಕಿತವೂ ಪೂಜ್ಯ

**ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।**
**ಉಭಯೋಃ ಸ್ನಾನತೋಯೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೦೪ ॥**

**ಅ:** ಸಾಲಿಗ್ರಾಮದಲ್ಲಿ ಸನ್ನಿಹಿತನಾದ ವಿಷ್ಣು ಹಾಗೂ ದ್ವಾರಕೆಯಲ್ಲಿ ದೊರೆಯುವ ಚಕ್ರಾಂಕಿತಗಳಲ್ಲಿ ಸನ್ನಿಹಿತನಾದ ವಿಷ್ಣು ಇವರಿಬ್ಬರ ಅಭಿಷೇಕಜಲದಿಂದ ಬ್ರಹ್ಮಹತ್ಯೆ ಪರಿಹಾರವಾಗುವುದು.

**ವಿ:** ೧. ಚಕ್ರಾಂಕಿತಗಳೊಂದಿಗೆ ಸಾಲಿಗ್ರಾಮದ ಪೂಜೆಯೂ ವಿಹಿತ ಎಂದರ್ಥ.

೨. ಇಲ್ಲಿ **ದ್ವಾರವತೀಭವಃ** ಎಂದರೆ ದ್ವಾರಕೆಯಲ್ಲಿ ದೊರೆಯುವ ಚಕ್ರಾಂಕಿತಗಳಲ್ಲಿ ಸನ್ನಿಹಿತನಾದ ವಿಷ್ಣು ಎಂದರ್ಥ.

೩. ಚಕ್ರಾಂಕಿತಸಾಲಿಗ್ರಾಮಗಳನ್ನು ಒಟ್ಟಾಗಿ ಇರಿಸಿ ಅಭಿಷೇಕಮಾಡುವುದು ವಿಧಿ. ಅದರಿಂದ ಬ್ರಹ್ಮಹತ್ಯೆ ಪರಿಹಾರವಾಗುವುದು ಎಂದು ಭಾವ.

೪. ಬ್ರಹ್ಮದೇವರಿಂದ ಪ್ರಾರಂಭಿಸಿ ಸ್ಥಾವರಗಳವರೆಗಿನ ವಸ್ತುಗಳಲ್ಲಿ ಶ್ರೀಹರಿಯ ವ್ಯಾಪ್ತಿ ಒಂದೇ ತೆರನಾಗಿರುವುದು. ಆದರೆ ಅಭಿವ್ಯಕ್ತಿಯಲ್ಲಿ ಮಾತ್ರ ತಾರತಮ್ಯವಿರುವುದು:

**'ಬ್ರಹ್ಮಾದಿಸ್ಥಾವರಾಂತೇಷು ನ ವಿಶೇಷೋ ಹರೇಃ ಕ್ವಚಿತ್ ।**
**ವ್ಯಕ್ತಿಮಾತ್ರವಿಶೇಷೇಣ ತಾರತಮ್ಯಂ ವದಂತಿ ಚ' ಇತಿ ॥**

**- ಭಾ.ತಾ.(೭/೧೫/೩೯)**

★★

## ಚಕ್ರಾಂಕಿತವಿರುವ ಮ್ಲೇಚ್ಛದೇಶವೂ ಪವಿತ್ರ

**ಮ್ಲೇಚ್ಛದೇಶೇಽಶುಚೌ ವಾಽಪಿ ಚಕ್ರಾಂಕೋ ಯತ್ರ ತಿಷ್ಠತಿ ।**
**ಯೋಜನಾನಿ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥ ೧೦೫ ॥**

**ಅ:** (ಶ್ರೀವರಾಹನು ಹೇಳುವನು:) ಎಲೈ ಭೂದೇವಿಯೇ ! ಮ್ಲೇಚ್ಛದೇಶವಾಗಿರಲೀ, ಅಶುಚಿಯಾದ ಪ್ರದೇಶವೇ ಆಗಿರಲೀ, ಚಕ್ರಾಂಕಿತವು ಎಲ್ಲಿರುವುದೋ ಅಲ್ಲಿಯ ಮೂರು ಯೋಜನ ಪ್ರದೇಶವು ನನ್ನ ಕ್ಷೇತ್ರ.

ವಿ: ೧. ಮ್ಲೇಚ್ಛದೇಶ ಮೊದಲಾದ ಅಶುಚಿಪ್ರದೇಶಗಳೂ ಸಹ ಚಕ್ರಾಂಕಿತದ ಸನ್ನಿಧಾನದಿಂದಾಗಿ ಶುದ್ಧವೆನ್ನಿಸುವವು ಎಂದರ್ಥ.

೨. ಅಶುಚಿಯಾದ ಸ್ಥಳದಲ್ಲಿ ದೇವಪೂಜೆ ಹೇಗೆ? ಎಂಬ ಪ್ರಶ್ನೆಗೂ ಇದರಲ್ಲಿ ಉತ್ತರವಿದೆ. ಚಕ್ರಾಂಕಿತದ ಸನ್ನಿಧಾನ ಸುತ್ತಲಿನ ಮೂರು ಯೋಜನಗಳನ್ನೂ ಸಹ ವೈಷ್ಣವಕ್ಷೇತ್ರವನ್ನಾಗಿ ಮಾಡುವುದರಿಂದ ಆಪತ್ಕಾಲದಲ್ಲಿ ಅಷ್ಟು ಶುಚಿಯಲ್ಲದ ಸ್ಥಳಗಳಲ್ಲಿ ಪೂಜೆ ಮಾಡುವುದು ದೋಷಕರವಲ್ಲ ಎಂಬ ಸಂದೇಶ ಇದರಿಂದ ತಿಳಿಯುವುದು.

೩. ಸುತ್ತಲಿನ ಮೂರು ಯೋಜನ ಕ್ಷೇತ್ರವೇ ವಿಷ್ಣುಕ್ಷೇತ್ರವೆನ್ನಿಸುವಾಗ ಚಕ್ರಾಂಕಿತ ಇರುವ ಸ್ಥಳ ಪರಿಶುದ್ಧಕ್ಷೇತ್ರ ಎಂಬುದು ಕೈಮುತ್ಯ ಸಿದ್ಧ ಎಂದರ್ಥ.

೪. ಇಂದಿನ ದಿನಗಳಲ್ಲಿ ಸುತ್ತಮುತ್ತಲಿನ ಪರಿಸರ ನೆರೆಹೊರೆ ಅವೈಷ್ಣವವಾಗಿದ್ದರೂ ಸಹ ಪೂಜಾದಿಕಾರ್ಯಗಳು ಲೋಪವಾಗಬಾರದು ಎಂಬ ಸಂದೇಶ ಇಲ್ಲಿದೆ.

೫. ಇಲ್ಲಿ **ಚಕ್ರಾಂಕಃ** ಎಂಬ ಏಕವಚನದಿಂದ ಒಂದು ಚಕ್ರಾಂಕಿತವಿರುವ ಸ್ಥಳವೂ ಸಹ ಪವಿತ್ರವೆನ್ನಿಸುವುದು ಎಂಬ ವಿಶೇಷಾರ್ಥ ಸೂಚಿತ.

೬. ಚಕ್ರಾಂಕಿತಗಳಲ್ಲಿನ ಚಕ್ರಗಳ ಸಂಖ್ಯೆಗಳನ್ನು ಆಧರಿಸಿ ಅಲ್ಲಿ ಸನ್ನಿಹಿತವಾದ ಮೂರ್ತಿವಿಶೇಷದ ಬಗೆ ಹಾಗೂ ಅವುಗಳ ಪೂಜೆಯ ವಿಶೇಷಫಲಗಳ ವಿವರಗಳು ಸ್ಕಂದಪುರಾಣ(ಪ್ರಭಾಸಖಂಡ, ದ್ವಾರಕಾಮಾಹಾತ್ಮ್ಯ, ೩೭ನೇ ಅಧ್ಯಾಯ, ಶ್ಲೋ. ೧೧-೧೮)ಗಳಲ್ಲಿ ಬಂದಿವೆ :

**ಭವಂತಿ ಯತ್ರ ಪಾಷಾಣಾಶ್ಚಕ್ರಾಂಕಾ ಮುಕ್ತಿದಾಯಕಾಃ।**
**ಯೈಃ ಪೂಜಿತೈರ್ಜಗನ್ನಾಥಃ ಕೃಷ್ಣಸಾನ್ನಿಧ್ಯಮಾವ್ರಜೇತ್ ॥**
**ತತ್ರೈವ ಯದಿ ಲಭ್ಯೇತ ಚಕ್ರೈರ್ದ್ವಾದಶಭಿಃ ಸಹ ॥**
**ದ್ವಾದಶಾತ್ಮಾ ಸ ವಿಜ್ಞೇಯೋ ಮೋಕ್ಷದಃ ಸರ್ವದೇಹಿನಾಮ್ ॥**
**ಏಕಚಕ್ರಾಂಕಿತೋ ಯಸ್ತು ದ್ವಾರವತ್ಯಾಂ ಸುಶೋಭನಃ ॥**
**ಸುದರ್ಶನಾಭಿಧಾನೋಽಸೌ ಮೋಕ್ಷೈಕಫಲದೋ ಹಿ ಸಃ।**
**ಲಕ್ಷ್ಮೀನಾರಾಯಣೋ ದ್ವಾಭ್ಯಾಂ ಭುಕ್ತಿಮುಕ್ತಿಫಲಪ್ರದಃ ॥**
**ತ್ರಿಭಿಸ್ತ್ರಿವಿಕ್ರಮಶ್ಚೈವ ತ್ರಿವರ್ಗಫಲದಾಯಕಃ।**
**ಶ್ರೀಪ್ರದೋ ರಿಪುಹಂತಾ ಚ ಚತುರ್ಭಿಃ ಸಂಯುತಃ ಸ ಹಿ ॥**
**ಪಂಚಭಿರ್ವಾಸುದೇವಸ್ತು ಜನ್ಮಮೃತ್ಯುಭಯಾಪಹಃ।**
**ಪ್ರದ್ಯುಮ್ನಃ ಷಡ್ಭಿರೇವಾಸೌ ಲಕ್ಷ್ಮೀಂ ಕಾಂತಿಂ ದದಾತಿ ಯಃ ॥**
**ಸಪ್ತಭಿರ್ಬಲಭದ್ರಶ್ಚ ಚಕ್ರಗೋಽತ್ರ ಪ್ರಕೀರ್ತಿತಃ।**
**ವಾಂಛಿತಶ್ಚಾಷ್ಟಭಿರ್ಭಕ್ತಿಂ ದದಾತಿ ಪುರುಷೋತ್ತಮಃ ॥**

ಸರ್ವಂ ದದ್ಯಾನ್ನವವ್ಯೂಹೋ ದುರ್ಲಭೋ ಯಃ ಸುರೈರಪಿ ।
ದಶಾವತಾರೋ ದಶಭೀ ರಾಜ್ಯದೋ ನಾತ್ರ ಸಂಶಯಃ ॥
ಏಕಾದಶಭಿರೈಶ್ವರ್ಯಂ ಚಕ್ರಗಃ ಸಂಪ್ರಯಚ್ಛತಿ ।
ನಿರ್ವಾಣಂ ದ್ವಾದಶಾತ್ಮಾ ಚ ದ್ವಾದಶಭಿರ್ದದಾತಿ ಚ ॥
ಅತ ಊರ್ಧ್ವಂ ಮಹಾಭಾಗಾಃ ಸೌಖ್ಯಮೋಕ್ಷಪ್ರದಾಯಕಾಃ ।
ಯತೋಽತ್ರ ತೇ ಚ ಪಾಷಾಣಾಃ ಕೃಷ್ಣಚಕ್ರೇಣ ಚಿತ್ರಿತಾಃ ॥[೧]

★★

## ಸಾಲಗ್ರಾಮ ಚಕ್ರಾಂಕಿತಗಳಿರುವ ಸ್ಥಳ ಕಾಶಿಗಿಂತ ಮಿಗಿಲು

**ಸಾಲಗ್ರಾಮೋದ್ಭವೋ ದೇವೋ ಶೈಲಂ ಚಕ್ರಾಂಕಮಂಡಿತಮ್ ।**
**ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ॥ ೧೦೬ ॥**

**ಅ:** ಶ್ರೀಹರಿಯು ಸನ್ನಿಹಿತನಾದ ಸಾಲಿಗ್ರಾಮ ಹಾಗೂ ಚಕ್ರಾಂಕನಗಳಿಂದ ಕೂಡಿದ ಶಿಲೆ ಇವುಗಳನ್ನು ಎಲ್ಲಿಗೆ ತೆಗೆದುಕೊಂಡು ಹೋದರೂ ಸಹ ಆ ಸ್ಥಳವೂ ಕಾಶಿಗಿಂತ ನೂರುಪಟ್ಟು ಮಿಗಿಲೆನ್ನಿಸುವುದು.

**ವಿ:** ೧. ಚಕ್ರಾಂಕನದೊಂದಿಗೆ ಸಾಲಿಗ್ರಾಮವೂ ಸಹ ವಿಶೇಷ ಪಾವಿತ್ರ್ಯಹೇತು ಎಂದರ್ಥ. ಹಿಂದಿನ ಶ್ಲೋಕದಲ್ಲಿ ವೈಷ್ಣವಕ್ಷೇತ್ರ ಎಂದು ಮಾತ್ರ ವಿವರಿಸಿದ್ದರೆ ಈ ಶ್ಲೋಕದಲ್ಲಿ ಅವೆರಡೂ ಇರುವ ಕ್ಷೇತ್ರ ಕಾಶಿಗಿಂತಲೂ ಮಿಗಿಲು ಎಂಬ ವಿಶೇಷಾಂಶ ನಿರೂಪಿತವಾಗಿದೆ.

೨. ಕಾಶಿಯು ಬಿಂದುಮಾಧವನಿಂದಾಗಿ ವೈಷ್ಣವ ಕ್ಷೇತ್ರ; ವಿಶ್ವನಾಥನಿಂದಾಗಿಯೂ ವೈಷ್ಣವಕ್ಷೇತ್ರ. ಶಿವನು ವೀರವೈಷ್ಣವನಲ್ಲವೇ? (ವೈಷ್ಣವಾನಾಂ ಯಥಾ ಶಂಭುಃ); ಅಲ್ಲಿ ಹರಿಯುವ ಗಂಗೆಯಂತೂ ಸಾಕ್ಷಾತ್ ವಿಷ್ಣುಪಾದೋದಕವೇ. ಹೀಗೆ ಕಾಶಿಯು ವಿಶೇಷ ವೈಷ್ಣವಕ್ಷೇತ್ರ ಎಂಬ ವಿಶೇಷಾಂಶವೂ ಇದರಿಂದ ಸೂಚಿತ.

★★

## ಸಾಲಗ್ರಾಮ ಚಕ್ರಾಂಕಿತಗಳೆರಡೂ ಒಟ್ಟಾಗಿಯೇ ಪೂಜ್ಯ

**ಸಾಲಗ್ರಾಮೋದ್ಭವೋ ದೇವೋ ದೇವೋ ದ್ವಾರವತೀಭವಃ ।**
**ಉಭಯೋಃ ಸಂಗಮೋ ಯತ್ರ ಮುಕ್ತಿಸ್ತತ್ರ ನ ಸಂಶಯಃ ॥ ೧೦೭ ॥**

---

೧. ವಿವರಗಳಿಗೆ 'ದ್ವಾರಕಾಮಾಹಾತ್ಮ್ಯ' (ಶ್ರೀವಿದ್ಯಾಮಾನ್ಯಪ್ರಕಾಶನ, ಪಲಿಮಾರುಮಠ, ಉಡುಪಿ) ಕೃತಿಯನ್ನು ನೋಡಬಹುದು.

ಅ: ಸಾಲಿಗ್ರಾಮದಲ್ಲಿ ಸನ್ನಿಹಿತನಾದ ವಿಷ್ಣು ಮತ್ತು ದ್ವಾರಕೆಯಲ್ಲಿನ ಚಕ್ರಾಂಕಿತಗಳಲ್ಲಿ ಸನ್ನಿಹಿತನಾದ ವಿಷ್ಣು ಇವರಿಬ್ಬರ ಸಂಗಮವು ಎಲ್ಲೋ ಅಲ್ಲಿಯೇ ಮುಕ್ತಿ; ಸಂಶಯವಿಲ್ಲ.

ವಿ: ೧. ಪ್ರತ್ಯೇಕವಾಗಿ ಸಾಲಿಗ್ರಾಮ ವಿಶೇಷಪುಣ್ಯಕರ; ಅದರಂತೆ ಪ್ರತ್ಯೇಕವಾಗಿಯೇ ಚಕ್ರಾಂಕಿತವೂ ಪುಣ್ಯಕರ. ಅವೆರಡೂ ಜೊತೆಯಾದರಂತೂ ಇನ್ನೂ ವಿಶೇಷವಾದ ಪುಣ್ಯ ಎಂದು ಭಾವ.

೨. ಇದರಿಂದ ಸಾಲಿಗ್ರಾಮಗಳೊಂದಿಗೆ ಚಕ್ರಾಂಕಿತಗಳನ್ನೂ ಸಹ ಪೂಜಿಸಲೇಬೇಕು ಎಂಬ ವಿಶೇಷಾರ್ಥವೂ ಸೂಚಿತ.

೩. ಒಂದು ಸಾಲಿಗ್ರಾಮಕ್ಕೆ ಎರಡು ಚಕ್ರಾಂಕಿತಗಳಂತೆ ಪೂಜೆ ವಿಹಿತ ಎಂಬ ವಿಶೇಷಾಂಶ ಪಂಚರಾತ್ರದಲ್ಲಿದೆ: 'ಚಕ್ರಾಂಕಮಿಥುನಂ ಪೂಜ್ಯಂ ಸಾಲಿಗ್ರಾಮಂ ಪ್ರತಿ ಪ್ರತಿ' ಇತಿ ॥

೪. ಸಾಲಿಗ್ರಾಮ ಚಕ್ರಾಂಕಿತಗಳೊಂದಿಗೆ ಕೃಷ್ಣವಿಗ್ರಹ, ವಿಷ್ಣುಪಾದ ಹಾಗೂ ಸುದ-ರ್ಶನಗಳನ್ನೂ ಸಹ ಪ್ರತಿನಿತ್ಯ ಪೂಜಿಸಲೇಬೇಕು ಎಂಬ ವಿಶೇಷವಿಧಿ ಪಂಚರಾತ್ರದಲ್ಲಿದೆ:

'ಸುದರ್ಶನಂ ಕೃಷ್ಣಮೂರ್ತಿರ್ದ್ವಿಚಕ್ರಾಂಕಿತ ಇತ್ಯಪಿ ।
ಚತುರ್ಣಾಂ ಯೋಗತಸ್ತೀರ್ಥಂ ಸಾಲಗ್ರಾಮಸ್ಯ ನಾನ್ಯಥಾ ॥'

೫. ಆಪತ್ಕಾಲದಲ್ಲಿ ಎರಡು ಚಕ್ರಾಂಕಿತಗಳು ಹಾಗೂ ಸಾಲಗ್ರಾಮಗಳು ಮಾತ್ರವೇ ಇದ್ದರೂ ಪೂಜೆ ವಿಹಿತ ; ಅವೆರಡೂ ಶ್ರೀಹರಿಯ ಎರಡು ಕಣ್ಣುಗಳಿದ್ದಂತೆ ಎಂಬ ಮಾತು ಸಹ ಪಂಚರಾತ್ರದಲ್ಲಿ ಬಂದಿದೆ :

'ಚಕ್ರಾಂಕಿತದ್ವಯೇನಾಪಿ ಸಾಲಗ್ರಾಮಸ್ಯ ಯೋಗತಃ ।
ಅಪಿ ವಾ ಸ್ಯಾತ್ ಕ್ವಚಿತ್ ತೀರ್ಥಂ ಚಕ್ಷುಷೀ ಚ ಯತೋ ಹರೇಃ ॥'

★★

## ಶ್ರೀಹರಿಯನ್ನು ಧ್ಯಾನಿಸುವವನಿಗೆ ಇತರ ಕ್ಷೇತ್ರಗಳು ಅನಗತ್ಯ

**ಹರಿಣಾ ಮುಕ್ತಿದಾನೀಹ ಮುಕ್ತಿಸ್ಥಾನಾನಿ ಸರ್ವಶಃ ।**
**ಸ ಯಸ್ಯ ಸರ್ವಭಾವೇಷು ತಸ್ಯ ತೈಃ ಕಿಂ ಪ್ರಯೋಜನಮ್ ॥ ೧೦೮ ॥**

ಅ: ಮುಕ್ತಿಸ್ಥಾನಗಳೆಂದು ಪ್ರಸಿದ್ಧವಾದ ಕ್ಷೇತ್ರಗಳು ಮುಕ್ತಿಸ್ಥಾನವೆನ್ನಿಸಿರುವುದು ಅಲ್ಲಿಯ ಶ್ರೀಹರಿಯ ಸನ್ನಿಧಾನದಿಂದಾಗಿ; ಆ ಶ್ರೀಹರಿಯೇ ಯಾರ ಮನಸ್ಸಿನಲ್ಲಿ ತುಂಬಿರುವನೋ ಅಂತಹವನಿಗೆ ಅವುಗಳಿಂದಾಗುವ ಪ್ರಯೋಜನವೇನು?

ವಿ: ೧. ತೀರ್ಥಕ್ಷೇತ್ರಗಳು ಮುಕ್ತಿಸಾಧನ ಎನ್ನಿಸಲು ಅವುಗಳಲ್ಲಿನ ಶ್ರೀಹರಿಯ ಸನ್ನಿಧಾನವೇ ಕಾರಣ ಎಂಬ ಪ್ರಮೇಯ ಇಲ್ಲಿ ನಿರೂಪಿತವಾಗಿದೆ.

೨. ಮುಕ್ತಿಸಾಧನವಾದ ಇತರ ಸಕಲದ್ರವ್ಯಗಳೂ ಸಹ ಹರಿಸ್ಮರಣೆ ಹರಿಧ್ಯಾನಗಳ ಮಟ್ಟಕ್ಕೆ ಸರಿದೂಗಲಾರವು ಎಂದರ್ಥ. ಎಂದರೆ ಯಾಂತ್ರಿಕವಾಗಿ ತೀರ್ಥಕ್ಷೇತ್ರಾದಿಗಳನ್ನು ಸಂದರ್ಶಿಸುವುದಕ್ಕಿಂತ ಭಕ್ತಿಪೂರ್ವಕ ಮನಸ್ಸಿನಲ್ಲಿ ಶ್ರೀಹರಿಯನ್ನು ಸ್ಮರಿಸುವುದೂ, ಧ್ಯಾನಿಸುವುದೂ ತುಂಬಾ ಶ್ರೇಷ್ಠ ಎಂದರ್ಥ:

**ಅಗ್ನೌ ಕ್ರಿಯಾವತಾಂ ವಿಷ್ಣುರ್ಯೋಗಿನಾಂ ಹೃದಯೇ ಹರಿಃ ।**
**ಪ್ರತಿಮಾಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್ ॥ - ಬ್ರಹ್ಮಸೂತ್ರಭಾಷ್ಯ**

★★

## ನಾಮೋಚ್ಚಾರಣೆಯು ಯಾವ ನೆಪದಿಂದ ನಡೆದರೂ ಶ್ಲಾಘ್ಯ

**ಹರಿರ್ಯಾತಿ ಹರಿರ್ಯಾತಿ ದಸ್ಯುವ್ಯಾಜೇನ ಯೋ ವದೇತ್ ।**
**ಸೋಽಪಿ ಸದ್ಗತಿಮಾಪ್ನೋತಿ ಗತಿಂ ಸುಕೃತಿನೋ ಯಥಾ ॥ ೧೦೯ ॥**

**ಅ:** ಕಳ್ಳನು ಓಡುತ್ತಿರುವುದನ್ನು ನೋಡಿ 'ಹರಿಯು ಹೋಗುತ್ತಿರುವನು, ಹರಿಯು ಹೋಗುತ್ತಿರುವನು' ಎಂದು ಯಾವನು ನುಡಿಯುವನೋ, ಅವನೂ ಸಹ, ಪುಣ್ಯಶಾಲಿಗಳು ಸದ್ಗತಿಯನ್ನು ಪಡೆಯುವಂತೆ, ಉತ್ತಮಗತಿಯನ್ನೇ ಪಡೆಯುವನು.

ವಿ: ೧. ಕಳ್ಳನೊಬ್ಬ ಓಡಿಹೋಗುತ್ತಿರುವುದನ್ನು ನೋಡಿ, 'ಕಳ್ಳ ಹೋಗುತ್ತಿದ್ದಾನೆ, ಕಳ್ಳ ಹೋಗುತ್ತಿದ್ದಾನೆ' ಎಂದು ತಿಳಿಸಲು 'ಹರಿಯು ಹೋಗುತ್ತಿದ್ದಾನೆ' ಎಂದು ನುಡಿಯುವ ಮಾತೂ ಸಹ ಸದ್ಗತಿಗೆ ಸಾಧಕ ಎಂದರ್ಥ.

೨. ಸಂಸ್ಕೃತದಲ್ಲಿ '**ಹರಿ**' ಎಂಬುದಕ್ಕೆ ಹತ್ತು ಅರ್ಥಗಳಿದ್ದು ಅದರಲ್ಲಿ ಕಳ್ಳ ಎಂಬುದೂ ಒಂದು ಅರ್ಥ. ಇದರಿಂದ **ಹರಿರ್ಯಾತಿ** ಎಂಬುದಕ್ಕೆ 'ಕಳ್ಳ ಓಡಿಹೋಗುತ್ತಿರುವನು' ಎಂದರ್ಥವಾಗುವುದು. ಇದರಿಂದ ಹರಿಸ್ಮರಣೆ ಮಾಡಿದ ಪುಣ್ಯ ಒದಗುವುದರಿಂದ ಸದ್ಗತಿ ಲಭಿಸುವುದು ಎಂದು ತಾತ್ಪರ್ಯ.

೩. ಮೇಲ್ನೋಟಕ್ಕೆ ಇದು ಕೇವಲ ನೆಪದಿಂದಲೂ ಹರಿಯನ್ನು ಸ್ಮರಿಸುವುದು ತಾರಕ ಎಂಬಂತೆ ಕಾಣುವುದು; ವಸ್ತುಸ್ಥಿತಿ ಹಾಗಲ್ಲ. ಆದರೆ ಹರಿಸ್ಮರಣೆಗೆ ಕಳ್ಳ ಹೋಗುವುದೂ ಮೊದಲಾದ ಪ್ರತಿಯೊಂದೂ ಸಹ ನೆವವೆನ್ನಿಸಿದಾಗ ಅದು ಸದ್ಗತಿ ಹೇತು ಎಂದು ತಾತ್ಪರ್ಯ. ಈ ವಿಶೇಷಾಂಶ ಈಗಾಗಲೇ ಬಂದಿದೆ (ಶ್ಲೋ. ೧೨).

೪. ಹರಿಕಥಾಮೃತಸಾರದಲ್ಲಿನ ಈ ಕೆಳಗಿನ ಪದ್ಯ ಇದರ ವಿವರಣೆಯಂತಿದೆ :

**ಸರಿತು ಪ್ರವಹಗಳಲ್ಲಿ ದಿವ್ಯಾಂ-**
**ಬರದಿ ಪತ್ರಾದಿಯಲಿ ಹರ್ಷಾ-**
**ಮರ್ಷವಿಸ್ಮೃತಿಯಿಂದಾಗಲಿ ಒಮ್ಮೆ ಬಾಯ್ದೆರೆದು ।**
**ಹರಿ ಹರೀ ಹರಿಯೆಂಬ ಎರಡ-**
**ಕ್ಷರ ನುಡಿದಮಾತ್ರದಲಿ ದುರಿತಗ-**
**ಳಿರದೆ ಪೋಪವು ತೂಲರಾಶಿಯೊಳನಲ ಪೊಕ್ಕಂತೆ ॥**

**- ನಾಮಸ್ಮರಣಸಂಧಿ(೧೩/೨)**

★★

## ಸರ್ವೋತ್ತಮತ್ವೇನ ಅನ್ಯದೇವತೆಗಳ ಆರಾಧನೆ ನಿಷಿದ್ಧ

**ವಾಸುದೇವಂ ಪರಿತ್ಯಜ್ಯ ಯೋಽನ್ಯಂ [೧] ದೇವಮುಪಾಸತೇ ।**
**ತ್ಯಕ್ತ್ವಾಽಮೃತಂ ಸ ಮೂಢಾತ್ಮಾ ಭುಂಕ್ತೇ ಹಾಲಾಹಲಂ ವಿಷಮ್ ॥೧೧೦॥**

**ಅ:** ವಾಸುದೇವನಾದ ಶ್ರೀಹರಿಯನ್ನು ಬಿಟ್ಟು ಯಾವನು ಬೇರೊಬ್ಬ ದೇವತೆಯನ್ನು ಆರಾಧಿಸುವನೋ ಅವನು ಮೂರ್ಖ; ಅಮೃತವನ್ನು ತೊರೆದು ಹಾಲಾಹಲವಿಷವನ್ನು ಕುಡಿಯುವಂತಹ ಅವಿವೇಕಿ.

**ವಿ:** ೧. ಶ್ರೀಹರಿಯನ್ನು ತೊರೆದು ಅನ್ಯದೇವತೆಗಳನ್ನು ಸರ್ವೋತ್ತಮತ್ವೇನ ಆರಾಧಿಸುವುದು ಅಮೃತವನ್ನು ಬಿಟ್ಟು ಹಾಲಾಹಲವಿಷವನ್ನು ಕುಡಿಯುವಂತೆ ಅನರ್ಥಪ್ರದ ಎಂದರ್ಥ; ಹಾಲಾಹಲವು ಕಲಿಸ್ವರೂಪವಾದ್ದರಿಂದ ಅಜ್ಞಾನಮಿಥ್ಯಾಜ್ಞಾನಗಳ ಪ್ರಾಪ್ತಿ ಎಂದೂ ಸೂಚಿತ :

**ತದಾ ಜಗದ್ಗ್ರಾಸಿ ವಿಷಂ ಸಮುತ್ಥಿತಂ ತ್ವದಾಜ್ಞಯಾ ವಾಯುರಧಾತ್ ಕರೇ ನಿಜೇ ।**
**ಕಲೇಃ ಸ್ವರೂಪಂ ತದತೀವ ದುಃಸಹಂ ವರಾದ್ವಿಧಾತುಃ ಸಕಲೈಶ್ಚ ದುಃಸ್ಪೃಶಮ್ ।**

**- ಮಹಾಭಾರತತಾತ್ಪರ್ಯನಿರ್ಣಯ (೧೦/೧೩,೧೪)**

೨. ಅಮೃತ ಮತ್ತು ಹಾಲಾಹಲ ಎರಡೂ ಸಹ ಕ್ಷೀರಸಮುದ್ರಮಥನಕಾಲದಲ್ಲಿಯೇ ಹುಟ್ಟಿರುವವು; ಅದರಲ್ಲಿ ಹಾಲಾಹಲವು ಮಾರಕವಾದರೆ, ಅಮೃತವು ತಾರಕ ಎಂಬುದು ವಿಶೇಷ; ಇದರಂತೆ ಅಮೃತದಂತಹ ಯಥಾರ್ಥಜ್ಞಾನ ಹಾಗೂ ವಿಷದಂತಹ ಮಿಥ್ಯಾಜ್ಞಾನಗಳೂ ಸಹ ಶಾಸ್ತ್ರವೆಂಬ ಕ್ಷೀರಸಾಗರದಿಂದಲೇ ಉಂಟಾಗುವವು ಎಂಬುದು ವಿಶೇಷ. ದುರ್ಭಾಷ್ಯಗಳಿಂದ ತಿಳಿಯುವ ಶಾಸ್ತ್ರಾರ್ಥವು ವಿಷದಂತೆ ಹೇಯ; ಸದ್ಭಾಷ್ಯಗಳಿಂದ ತಿಳಿಯುವ ಶಾಸ್ತ್ರಾರ್ಥವು ಅಮೃತದಂತೆ ಗ್ರಾಹ್ಯ ಎಂದು ತಿಳಿಯಬೇಕು.

---

೧. 'ದೈವಮುಪಾಸತೇ' (ಪಾ.)

೩. ವಿವೇಕಿಯಾದವನು ಅನರ್ಥಕ್ಕೆ ಕಾರಣವಾಗುವುದನ್ನು ತೊರೆದು ಪುರುಷಾರ್ಥಕ್ಕೆ ಸಾಧನವಾಗುವುದನ್ನು ಆರಾಧಿಸಬೇಕು; ಶ್ರೀಹರಿಯು ಅಶೇಷಪುರುಷಾರ್ಥಪ್ರದನಾದ್ದರಿಂದ ಸರ್ವೋತ್ತಮನಾದ ಅವನನ್ನೇ ಆರಾಧಿಸಬೇಕೇ ಹೊರತು ಇತರರನ್ನಲ್ಲ.

೪. ಇತರದೇವತೆಗಳನ್ನು ಆರಾಧಿಸುವುದು ಶಾಸ್ತ್ರವಿಹಿತವೇ ಆಗಿದೆ. ಆದರೆ ಅವರನ್ನು ಸರ್ವೋತ್ತಮತ್ವೇನ ಆರಾಧಿಸದೆ ತಾರತಮ್ಯಕ್ರಮದಲ್ಲಿ ಉಪಾಸನೆ ಮಾಡಬೇಕು ಎಂಬುದು ಶಾಸ್ತ್ರಗಳ ಸಂದೇಶ: **'ರಮಾಬ್ರಹ್ಮಾದಯಸ್ತಸ್ಯ ಪರಿವಾರತಯೈವ ತು', (ಸದಾಚಾರಸ್ಮೃತಿ); 'ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾ ಪ್ರಧಾನತಃ' (ಅನುವ್ಯಾಖ್ಯಾನ).**

೫. ರಾವಣಾದಿಗಳು ಶ್ರೀಹರಿಯನ್ನು ತೊರೆದು ಇತರ ಬ್ರಹ್ಮಾದಿದೇವತೆಗಳನ್ನು ಸರ್ವೋತ್ತಮತ್ವೇನ ಆರಾಧಿಸಿ ಸರ್ವನಾಶವನ್ನು ಕಂಡದ್ದು ರಾಮಾಯಣಾದಿಗಳಲ್ಲಿ ಸುಪ್ರಸಿದ್ಧವಾದ ವಿಚಾರ.

೬. ಮನುಷ್ಯನೊಬ್ಬ ಅಮೃತವನ್ನು ತೊರೆದು ವಿಷವನ್ನು ಕುಡಿಯುವುದು ಹೇಗೋ ಹಾಗೆ ಹರಿಯನ್ನು ಬಿಟ್ಟು ಇತರ ದೇವತೆಗಳನ್ನು ಉಪಾಸನೆ ಮಾಡುವವನು ಆಗುವನು.

೭. ಶ್ರೀಹರಿಯನ್ನು ತ್ಯಜಿಸುವುದು ಎಂದರೆ ಅವನ ಅಸ್ತಿತ್ವವನ್ನು ನಿರಾಕರಿಸುವುದು, ಅವನಿಗೆ ಸಮರಾಗಲೀ ಅಧಿಕರಾಗಲೀ ಉಂಟೆಂದು ತಿಳಿಯುವುದು, ಅವನೊಂದಿಗೆ ಇತರರಿಗೆ ಐಕ್ಯವನ್ನು ತಿಳಿಯುವುದು, ರಮಾಬ್ರಹ್ಮಾದಿದೇವತೆಗಳಲ್ಲಿ ತಾರತಮ್ಯವನ್ನು ತಿಳಿಯದಿರುವುದು, ಶಾಸ್ತ್ರತತ್ತ್ವಗಳಲ್ಲಿ ಸಂದೇಹಪಡುವುದು, ಜಗತ್ತನ್ನು ಮಿಥ್ಯೆಯೆಂದು ತಿಳಿಯುವುದು, ಶ್ರೀಹರಿಯನ್ನು ಸ್ಮರಿಸದಿರುವುದು, ಅವನ ಭಕ್ತರನ್ನು ನಿಂದಿಸುವುದು, ನಿಷಿದ್ಧಕರ್ಮಗಳನ್ನು ಆಚರಿಸುವುದು, ವಿಹಿತಕರ್ಮಗಳನ್ನು ತ್ಯಜಿಸುವುದು, ಅಯೋಗ್ಯರಿಗೆ ತತ್ತ್ವೋಪದೇಶಮಾಡುವುದು ಎಂಬುದಾಗಿ ಅನೇಕಬಗೆ ಎಂಬ ವಿವರ ಐತರೇಯಭಾಷ್ಯದಲ್ಲಿ ನಿರೂಪಿತವಾಗಿದೆ. ಒಟ್ಟಾಗಿ ತ್ಯಾಗ ನಾಲ್ಕು ಬಗೆಯದು ಎಂಬ ವಿಶೇಷಾಂಶ ಅಲ್ಲಿದೆ:

**ಮುಖ್ಯತ್ಯಾಗೋ ಹರೇರೇಷಃ ಯನ್ನಾಸ್ತೀತಿ ವದೇದಮುಮ್ ।**
**ಸಮಂ ವಾ ಹ್ಯಧಿಕಂ ವಾ ಬ್ರೂಯಾದೈಕ್ಯಮಥಾಪಿ ವಾ ॥ (ಉಪೇ)**
**ರಮಾಬ್ರಹ್ಮಾದಿಕಾನಾಂ ಚ ತಾರತಮ್ಯಾನಭಿಜ್ಞತಾ ।**
**ಸಂಶಯಶ್ಚೋಕ್ತತತ್ತ್ವೇಷು ಜಗನ್ಮಿಥ್ಯಾತ್ವದರ್ಶನಮ್ ॥**
**ಅಸ್ಮೃತಿರ್ವಾಸುದೇವಸ್ಯ ತದ್ಭಕ್ತಾನಾಂ ಚ ನಿಂದನಮ್ ।**
**ದ್ವಿತೀಯ ಏಷ ತ್ಯಾಗಸ್ತು ವಿಷ್ಣಾವೇವ ಪ್ರಕೀರ್ತಿತಃ ॥**
**ನಿಷಿದ್ಧಕರ್ಮಕರಣಂ ವಿಹಿತಸ್ಯ ಚ ವರ್ಜನಮ್ ।**
**ತ್ಯಾಗಸ್ತೃತೀಯೋಽಥ ಹರೇಶ್ಚತುರ್ಥೋಽಯೋಗ್ಯಪೂರುಷೇ ।**
**ಉಪದೇಶಃ ಕೇಶವಸ್ಯ ಯಥಾಶಬ್ದೋದಿತಃ ಕ್ರಮಾತ್ ॥**

## ಶ್ರೀಹರಿಯನ್ನು ಬಿಡುವುದು ಅಮೃತವನ್ನು ತೊರೆದಂತೆ

**ತ್ಯಕ್ತ್ವಾಽಮೃತಂ ಯಥಾ ಕಶ್ಚಿದನ್ಯಪಾನಂ[೧] ಪಿಬೇನ್ನರಃ ।**
**ತಥಾ ಹರಿಂ ಪರಿತ್ಯಜ್ಯ [೨]ಚಾನ್ಯಂ ದೇವಮುಪಾಸತೇ ॥ ೧೧೧ ॥**

**ಅ:** ಶ್ರೀಹರಿಯನ್ನು ಬಿಟ್ಟು ಇತರದೇವತೆಗಳನ್ನು ಆರಾಧಿಸುವುದು ಅಮೃತವನ್ನು ತೊರೆದು ಮದ್ಯವನ್ನು ಪಾನಮಾಡುವಂತೆಯೇ ಸರಿ.

**ವಿ:** ೧. ಇಲ್ಲಿ **ಅನ್ಯಪಾನ** ಎಂದರೆ ನಿಷಿದ್ಧವಾದ ಪಾನ; ಯೋಗ್ಯರಲ್ಲದವರು ಕುಡಿಯುವ ದ್ರವ; ಒಟ್ಟಾಗಿ ಮದ್ಯ ಎಂದು ಅರ್ಥ.

೨. ಸುರಾಪಾನ ನರಕಹೇತು ಎಂಬುದು ಶ್ರೀಮದ್ಭಾಗವತದಲ್ಲಿ ನಿರೂಪಿತವಾಗಿದೆ. ಇದರಿಂದ ಅನ್ಯದೇವತೆಗಳನ್ನು ಸರ್ವೋತ್ತಮತ್ವೇನ ಆರಾಧಿಸುವುದು ನರಕಹೇತು ಎಂದಾಗುವುದು :

> **ಯಸ್ತು ಹ ವೈ ವಿಪ್ರೋ ರಾಜನ್ಯೋ ವೈಶ್ಯೋ ವಾ ಸೋಮಪೀಥಸ್ತತ್ಕಲತ್ರಂ ವಾ ಸುರಾಂ ವ್ರತಸ್ಥೋಽಪಿ ವಾ ಪಿಬತಿ ಪ್ರಮಾದತಸ್ತೇಷಾಂ ನಿರಯಂ ನೀತಾನಾಮುರಸಿ ಪದಾಽಽಕ್ರಮ್ಯಾಸ್ಯೇ ವಹ್ನಿನಾ ದ್ರವಮಾಣಂ ಕಾರ್ಷ್ಣಾಯಸಂ ನಿಕ್ಷಿಪಂತಿ ॥** - ಭಾಗವತ (೫/೨೬/೨೯)

★★

## ಇತರರನ್ನು ಹಿಡಿಯುವುದು ಪರಧರ್ಮವನ್ನು ಪಾಲಿಸಿದಂತೆ

**ಸ್ವಧರ್ಮಂ ತು ಪರಿತ್ಯಜ್ಯ ಪರಧರ್ಮಂ [೩]ಯಥಾ ಚರೇತ್ ।**
**ತಥಾ ಹರಿಂ ಪರಿತ್ಯಜ್ಯ [೪]ಯೋಽನ್ಯಂ ದೇವಮುಪಾಸತೇ ॥ ೧೧೨ ॥**

**ಅ:** ಶ್ರೀಹರಿಯನ್ನು ಬಿಟ್ಟು ಇತರ ದೇವತೆಗಳನ್ನು ಸರ್ವೋತ್ತಮತ್ವೇನ ಉಪಾಸನೆ ಮಾಡುವುದು ಸ್ವಧರ್ಮವನ್ನು ಪರಿತ್ಯಜಿಸಿ ಪರಧರ್ಮವನ್ನು ಆಚರಿಸುವಂತೆಯೇ ಸರಿ.

**ವಿ:** ಸ್ವಧರ್ಮತ್ಯಾಗ ಹಾಗೂ ಪರಧರ್ಮಕರಣಗಳು ಅನರ್ಥಹೇತು ಎಂಬ ವಿವರ ಭಗವದ್ಗೀತೆಯಲ್ಲಿ ಬಂದಿದೆ. 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ'

---

೧. ಅನ್ಯಪಾನಂ ನಿಷಿದ್ಧಂ ಸುರಾದಿಲಕ್ಷಣಂ ಪೇಯಮ್ । (ತಾ)
ಅನ್ಯಪಾನಮನ್ಯೇಷಾಂ ಚಾಂಡಾಲಾದೀನಾಂ ಪಾನಂ ಪೇಯಂ ಮದ್ಯಂ ಯಥಾ ನಿಂದ್ಯಮ್ ॥
(ಉಪೇ) ಅನ್ಯೈರ್ನೀಚೈರ್ಪಾನಂ ಪೇಯಂ ಮದ್ಯಾದಿ ..... (ಸ್ಟ.ಕೃ).
೨. 'ಯೋಽನ್ಯಂ' (ಪಾ.)
೩. ಚರೇದ್ಯಥಾ (ಪಾ.)
೪. 'ಚಾಽನ್ಯಂ' (ಪಾ.)

(೩-೩೫). ಸ್ವಧರ್ಮದಲ್ಲಿ ಸಾಯುವುದೇ ಮೇಲು; ಪರಧರ್ಮದ ಆಚರಣೆ ಭಯಕ್ಕೆ ಕಾರಣ. ಶ್ರೀಹರಿಪೂಜೆ ಸರ್ವರಿಗೂ ಸ್ವಧರ್ಮ; ಅದನ್ನು ಬಿಡುವುದು ಅತ್ಯಂತ ಅಧರ್ಮ ಎಂದರ್ಥ:

'ಗಂಗಾಯಾಂ ತೃಷಿತೋ ದೂರಂ ಮೃಗತೃಷ್ಣಾಂ ಹಿ ಗಚ್ಛತಿ ।
ಯಥೈವಂ ಹೃದಿಸಂಸ್ಥಂ ತಂ ಹರಿಂ ಧ್ಯಾನಾದಿಕರ್ಮಭಿಃ ॥
ಅಪಹಾಯಾಸ್ಯ ಕರ್ಮಾಣಿ ಕೃತ್ವಾ ಸಂಸಾರತಾಪಿತಃ ।
ಅಂತತಸ್ತಮ ಏವಾಸೌ ಯಾತಿ ವಿಷ್ಣೋರನಾದರಾತ್ ॥ - ವಿಷ್ಣುತೀರ್ಥೀಯ

★★

## ಶ್ರೀಹರಿಯನ್ನು ತೊರೆಯುವುದು ಗೋವನ್ನು ತೊರೆದಂತೆ

ಗಾಂ ಚ ತ್ಯಕ್ತ್ವಾ ವಿಮೂಢಾತ್ಮಾ [೧]ಗಾರ್ದಭೀಂ ವಂದತೇ ಯಥಾ ।
ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೩ ॥

ಅ: ಶ್ರೀಹರಿಯನ್ನು ತೊರೆದು ಇತರ ದೇವತೆಗಳನ್ನು ಆರಾಧಿಸುವ ಮೂರ್ಖ-ಸ್ವಭಾವದವನು, ಗೋವನ್ನು ಪರಿತ್ಯಜಿಸಿ ಕತ್ತೆಯನ್ನು ವಂದಿಸುವವನಂತೆಯೇ ಸರಿ.

★★

## ಶ್ರೀಹರಿಯನ್ನು ಮರೆಯುವುದು ಗಂಗೆಯನ್ನು ತೊರೆದಂತೆ

ವಾಸುದೇವಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ।
ತೃಷಿತೋ ಜಾಹ್ನವೀತೀರೇ ಕೂಪಂ ಖನತಿ ದುರ್ಮತಿಃ ॥ ೧೧೪ ॥

ಅ: ವಾಸುದೇವನನ್ನು ಬಿಟ್ಟು ಇನ್ನೊಬ್ಬ ದೇವತೆಯನ್ನು ಉಪಾಸನೆ ಮಾಡುವವನು ಬಾಯಾರಿದವನು ಗಂಗಾತೀರದಲ್ಲಿ ಭಾವಿತೋಡುವಂತಹ ಮಂಕುಬುದ್ಧಿಯವನೇ ಸರಿ.

ವಿ: ೧. ಹಿಂದಿನ ಶ್ಲೋಕದಲ್ಲಿ ಹರಿಯನ್ನು ಬಿಟ್ಟವನನ್ನು ಗೋವನ್ನು ಬಿಟ್ಟು ಕತ್ತೆಯನ್ನು ವಂದಿಸುವವನಿಗೆ ಹೋಲಿಸಿದರೆ, ಈ ಶ್ಲೋಕದಲ್ಲಿ ಗಂಗೆಯನ್ನು ಬಿಟ್ಟು ಭಾವಿತೋಡುವ ಮೂರ್ಖನಿಗೆ ಹೋಲಿಸಿರುವರು.

೨. ಗೋ ಮತ್ತು ಗಂಗೆಗಳು ಎರಡು ಪವಿತ್ರವಸ್ತುಗಳಾದರೆ, ಕತ್ತೆ ಅಪವಿತ್ರ ವಸ್ತು. ಭಾವಿತೋಡುವುದು ಹೆಚ್ಚು ಶ್ರಮದಾಯಕವಾದ ಕಾರ್ಯ. ಪವಿತ್ರವನ್ನು ಬಿಟ್ಟು ಅಪವಿತ್ರವನ್ನು ಆರಿಸಿಕೊಳ್ಳುವವನು, ಅನಾಯಾಸದ ಕಾರ್ಯವನ್ನು ತೊರೆದು ಬಹು-ಶ್ರಮದ ಕಾರ್ಯವನ್ನು ಮಾಡುವವನು ಮೂರ್ಖನೆಂಬುದು ಲೋಕಪ್ರಸಿದ್ಧವೇ ಆಗಿದೆ.

★★

---

೧. ರಾಸಭೀಂ ( ಪಾ.)

**ಇತರರನ್ನು ಹಿಡಿಯುವುದು ಗಂಗೆಯನ್ನು ಬಿಟ್ಟು ಕೂಪೋದಕ ಕುಡಿದಂತೆ**

**ಯಥಾ ಗಂಗೋದಕಂ ತ್ಯಕ್ತ್ವಾ ಪಿಬೇತ್ ಕೂಪೋದಕಂ ನರಃ ।**
**ತಥಾ ಹರಿಂ ಪರಿತ್ಯಜ್ಯ ಯೋಽನ್ಯಂ ದೇವಮುಪಾಸತೇ ॥ ೧೧೫ ॥**

ಅ: ಶ್ರೀಹರಿಯನ್ನು ಬಿಟ್ಟು ಇತರದೇವತೆಗಳನ್ನು ಆರಾಧಿಸುವ ಮಾನವನು ಗಂಗೋದಕವನ್ನು ಬಿಟ್ಟು ಕೂಪೋದಕವನ್ನು ಕುಡಿಯುವವನಂತೆಯೇ ಸರಿ.

★★

**ಹರಿಯನ್ನು ತೊರೆಯುವುದು ತಾಯಿಯನ್ನು ತ್ಯಜಿಸಿದಂತೆ**

**ಸ್ವಮಾತರಂ ಪರಿತ್ಯಜ್ಯ [೧]ಶ್ವಪಾಕೀಂ ವಂದತೇ ಯಥಾ ।**
**ತಥಾ ಹರಿಂ ಪರಿತ್ಯಜ್ಯ ಚಾನ್ಯಂ ದೇವಮುಪಾಸತೇ ॥ ೧೧೬ ॥**

ಅ: ಶ್ರೀಹರಿಯನ್ನು ಬಿಟ್ಟು ಇತರದೇವತೆಯನ್ನು ಸರ್ವೋತ್ತಮತ್ವೇನ ಆರಾಧಿಸುವವನು, ತನ್ನ ತಾಯಿಯನ್ನು ಬಿಟ್ಟು ನಾಯಿ ಬೇಯಿಸಿ ತಿನ್ನುವವಳನ್ನು ವಂದಿಸುವವನಂತೆಯೇ ಸರಿ.

ವಿ: ೧. ಹೆತ್ತ ತಾಯಿಯನ್ನು ತೊರೆದು ನಾಯಿ ಬೇಯಿಸಿ ತಿನ್ನುವಂತಹ ಕೀಳುವ್ಯಕ್ತಿಯನ್ನು ವಂದಿಸುವವನು ಹೇಗೋ, ಹಾಗೆ ಹರಿಯ ಹೊರತು ಇತರ ದೇವತೆಗಳನ್ನು ಸರ್ವೋತ್ತಮನೆಂದು ಉಪಾಸನೆ ಮಾಡುವವನು ನಿಂದ್ಯನಾಗುವನು.

೨. ಇಷ್ಟು ಶ್ಲೋಕಗಳಲ್ಲಿ ಹರಿಪೂಜೆಯೇ ತಾರಕ ಅನ್ಯದೇವತಾ ಪೂಜೆ ಮಾರಕ ಎಂಬ ವಿಚಾರ ನಿರೂಪಿತವಾಗಿದೆ.

೩. ಹಿಂದೆ ಹೇಳಿದಂತೆ ಶಾಸ್ತ್ರಗಳಲ್ಲಿ ಇತರ ದೇವತಾಪೂಜೆ ನಿಷಿದ್ಧವಾಗಿಲ್ಲ; ಆದರೆ ಸರ್ವೋತ್ತಮತ್ವೇನ ತಿಳಿದು ಇತರ ದೇವತೆಗಳನ್ನು ಆರಾಧಿಸುವುದು ಮಾತ್ರ ನಿಷಿದ್ಧ. ಆದ್ದರಿಂದ ಇಲ್ಲಿ ಪ್ರತಿಯೊಂದು ಶ್ಲೋಕದಲ್ಲೂ ಹರಿಪೂಜೆ ಎಂಬುದಕ್ಕೆ ಸರ್ವೋತ್ತಮತ್ವೇನ ಹರಿಪೂಜೆ ಎಂದೂ, ಅನ್ಯದೇವತಾಪೂಜೆ ಎಂಬುದಕ್ಕೆ ಸರ್ವೋತ್ತಮತ್ವೇನ ಅನ್ಯದೇವತಾಪೂಜೆ ಎಂದೂ ವಿಶೇಷಾಂಶವನ್ನು ತಿಳಿಯಬೇಕು :

**'ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈ ತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥' (ಶ್ವೇತಾಶ್ವತರೋಪನಿಷತ್)**

★★

**ದೇಹದಲ್ಲಿ ಆರೋಗ್ಯವಿದ್ದಾಗ ಒಳಿತನ್ನು ಸಾಧಿಸಿಕೊಳ್ಳಬೇಕು**

**ಯಾವತ್ ಸ್ವಸ್ಥಮಿದಂ ಪಿಂಡಂ ನೀರುಜಂ ಕರಣಾನ್ವಿತಮ್ ।**
**ತಾವತ್ ಕುರುಷ್ವಾತ್ಮಹಿತಂ ಪಶ್ಚಾತ್ ತಾಪೇನ ತಪ್ಯಸೇ ॥ ೧೧೭ ॥**

---

೧. ಶ್ವಮಾಂಸಪಾಕಿನೀಂ ಸ್ತ್ರಿಯಮ್ (ಉ)॥; ಶ್ವಮಾಂಸಪಾಕಿನೀಂ ಚಂಡಾಲಾದಿಸ್ತ್ರಿಯಮಿತ್ಯರ್ಥಃ (ಉಪೇ) ॥

**ಅ:** ಈ ದೇಹ ಆರೋಗ್ಯದಿಂದಿರುವಾಗಲೇ, ಇಂದ್ರಿಯ ದೃಢವಾಗಿರುವಾಗಲೇ ನಿನ್ನ ಒಳಿತನ್ನು ಸಾಧಿಸಿಕೋ ; ಇಲ್ಲವಾದಲ್ಲಿ ಪಶ್ಚಾತ್ತಾಪದಿಂದ ಬೇಯುವಿ.

**ವಿ:** ೧. ಹರಿಪೂಜೆಯನ್ನು ಮುಂದೊಮ್ಮೆ ಮಾಡುವೆ ಎಂದು ಆಲಸ್ಯಮಾಡುವವರಿಗೆ ಇಲ್ಲಿ ಎಚ್ಚರಿಕೆ ನೀಡಲಾಗಿದೆ. ದೇಹದಲ್ಲಿ ಆರೋಗ್ಯ ಇದ್ದು ಇಂದ್ರಿಯಗಳೆಲ್ಲ ಸಮರ್ಥ-ವಾಗಿರುವಾಗ ಹರಿಪೂಜೆಯನ್ನು ಮಾಡಿ ಬಾಳನ್ನು ಸಾರ್ಥಕಪಡಿಸಿಕೊಳ್ಳಬೇಕು ಎಂದರ್ಥ.

೨. ವಯಸ್ಸು ಹೆಚ್ಚಿದಂತೆ ಆರೋಗ್ಯ ಕುಂಠಿತವಾಗಿ ಇಂದ್ರಿಯಗಳ ಪಾಟವವೂ ಸಹ ಕುಗ್ಗುವುದು. ಆಗ ದೇವಪೂಜೆಮಾಡಲು ಸಾಧ್ಯವಾಗುವುದು ಕಷ್ಟ ಅದರಿಂದ ಪಶ್ಚಾತ್ತಾಪ ಪಡುವಂತಾಗುವುದು. ಅಂತಹ ಪಶ್ಚಾತ್ತಾಪದಿಂದ ಯಾವ ಪ್ರಯೋಜನವೂ ಇಲ್ಲವಾಗುವುದರಿಂದ ಚಿಕ್ಕವಯಸ್ಸಿನಲ್ಲೇ ಶ್ರೀಹರಿಪೂಜೆಗೆ ತೊಡಗಬೇಕು ಎಂದರ್ಥ.

★★

## ದೇಹದಲ್ಲಿ ಆರೋಗ್ಯವಿರುವಾಗಲೇ ಹರಿಪೂಜೆ ವಿಹಿತ

**ಯಾವತ್ ಸ್ವಾಸ್ಥ್ಯಂ ಶರೀರೇಷು ಕರಣೇಷು ಚ ಪಾಟವಮ್ ।**
**ತಾವದರ್ಚಯ ಗೋವಿಂದಮಾಯುಷ್ಯಂ ಸಾರ್ಥಕಂ ಕುರು । ೧೧೮ ।**

**ಅ:** ದೇಹಗಳಲ್ಲಿ ಸ್ವಾಸ್ಥ್ಯವಿದ್ದಾಗ, ಇಂದ್ರಿಯಗಳಲ್ಲಿ ಪಾಟವವಿದ್ದಾಗ, ಗೋವಿಂದನನ್ನು ಆರಾಧಿಸು; ಆಯುಷ್ಯವನ್ನು ಸಾರ್ಥಕಪಡಿಸಿಕೋ.

**ವಿ:** ೧. ಹಿಂದಿನ ಶ್ಲೋಕದಲ್ಲಿ ಆತ್ಮಹಿತವನ್ನು ಸಾಧಿಸಿಕೋ ಎಂದಿದ್ದರೆ, ಇಲ್ಲಿ ಗೋವಿಂದನನ್ನು ಆರಾಧಿಸು ಎಂದಿರುವರು. ಇದರಿಂದ ಆತ್ಮಹಿತ ಮಾಡಿಕೊಳ್ಳುವುದು ಎಂದರೆ ಶ್ರೀಹರಿಯನ್ನು ಆರಾಧಿಸುವುದು ಎಂಬ ವಿವರಣೆ ದೊರೆಯುವುದು.

೨. ಹರಿಪೂಜೆಯೇ ಜೀವನದ ಸಾರ್ಥಕ್ಯ ಎಂದರ್ಥ. ಶ್ರೀಜಗನ್ನಾಥದಾಸರ **'ಫಲವಿದು ಬಾಳ್ದುದಕೆ'** ಎಂಬ ಕೃತಿ ಇದರ ವಿವರಣೆಯಂತಿರುವುದನ್ನು ಗಮನಿಸಬೇಕು.

★★

## ಇಂದ್ರಿಯಗಳು ದೃಢವಾಗಿರುವಾಗಲೇ ಹರಿಯನ್ನು ಅರ್ಚಿಸಬೇಕು

**ಸ್ಮರ್ಯತಾಂ ತು ಹೃಷೀಕೇಶೋ ಹೃಷೀಕೇಷು ದೃಢೇಷು ಚ ।**
**ಅದೃಢೇಷು ಹೃಷೀಕೇಷು ಹೃಷೀಕೇಶಂ ಸ್ಮರಂತಿ ಕೇ ॥ ೧೧೯ ॥**

**ಅ:** ಹೃಷೀಕೇಶನಾದ ಶ್ರೀಹರಿಯನ್ನು ಇಂದ್ರಿಯಗಳು ದೃಢವಾಗಿರುವಾಗಲೇ ಸ್ಮರಿಸಬೇಕು; ಇಂದ್ರಿಯಗಳು ಶಿಥಿಲವಾದಾಗ ಇಂದ್ರಿಯೇಶನಾದ ಅವನನ್ನು ಹೇಗೆ ತಾನೇ ಸ್ಮರಿಸಲಾದೀತು?

ವಿ: ೧. ಈ ಪದ್ಯದಲ್ಲಿ ಇಂದ್ರಿಯಪಾಟವದ ಮಹಿಮೆಯನ್ನು ತಿಳಿಸಿರುವರು. ಇಂದ್ರಿಯದಾರ್ಢ್ಯವಿದ್ದಾಗ ಶ್ರೀಹರಿಸ್ಮರಣೆ ಸಾಧ್ಯವಾಗುವಂತೆ ದಾರ್ಢ್ಯತಪ್ಪಿದಾಗ ಸಾಧ್ಯವಾಗದು ಎಂವರ್ಥ.

೨. **ಹೃಷೀಕಗಳು** ಎಂದರೆ ಇಂದ್ರಿಯಗಳು ಎಂದರ್ಥ. **ಹೃಷಿಕೇಶ** ಎಂದರೆ ಇಂದ್ರಿಯ-ಗಳ ಒಡೆಯನಾದ ಶ್ರೀಹರಿ ಎಂದರ್ಥ. ಶ್ರೀಹರಿಯು ಇಂದ್ರಿಯಗಳ ಒಡೆಯ-ನಾದ್ದರಿಂದಲೇ ಸಕಲೇಂದ್ರಿಯಗಳನ್ನೂ ಸಹ ಅವನ ಪೂಜೆಗೆ ವಿನಿಯೋಗಿಸಬೇಕು ಎಂಬ ಇಲ್ಲಿಯ ಸ್ವಾರಸ್ಯ ಗಮನಾರ್ಹ.

೩. ಇದು ಶ್ರೀಮದ್ಭಾಗವತದಲ್ಲಿಯ '**ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನ್ ಇಹ**' ಎಂಬ ಪ್ರಹ್ಲಾದನ ಸಂದೇಶದ ವಿವರಣೆಯಂತಿದೆ.

೪. '**ಕಣ್ಣು ಕೈಕಾಲ್ಕಿವಿ ನಾಲಿಗೆಯಿರಲಿಕ್ಕೆ ಮಣ್ಣು ಮುಕ್ಕಿ ಮರುಳಾಗುವರೆ । ಮಾನವ ಜನ್ಮ ದೊಡ್ಡದು ಇದು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ**' ಎಂಬ ಶ್ರೀಪುರಂದರ-ದಾಸರ ಮಾತು ಇದರ ವಿವರಣೆಯಂತಿರುವುದು ಗಮನಾರ್ಹ :

**ರತಿಃ ಪರಾತ್ಮನಿ ಹರೌ ಅನ್ಯತ್ರಾರತಿರೇವ ಚ ।**
**ಪುಮರ್ಥಸಾಧನಂ ಜ್ಞೇಯಂ ನಾತೋಽನ್ಯನ್ಮುಖ್ಯಮಿಷ್ಯತೇ ॥**

– **ಭಾಗವತತಾತ್ಪರ್ಯ (೪/೨೨/೨೦)**

★★

**ವಿಷ್ಣುಚಿಂತನೆ ತಾರಕ – ವಿಷಯಚಿಂತನೆ ಮಾರಕ**

**ಯಾವಚ್ಚಿಂತಯತೇ ಜಂತುರ್ವಿಷಯಾನ್ ವಿಷಸನ್ನಿಭಾನ್ ।**
**ತಾವಚ್ಚೇತ್ ಸ್ಮರತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥ ೧೨೦ ॥**

**ಅ:** ವಿಷಸದೃಶವಾದ ವಿಷಯಗಳನ್ನು ಚಿಂತಿಸುವಷ್ಟು ಕಾಲ ಶ್ರೀಹರಿಯನ್ನು ಸ್ಮರಿಸಿದಲ್ಲಿ ಯಾವ ಜೀವಿ ತಾನೇ ಸಂಸಾರಬಂಧನದಿಂದ ಬಿಡುಗಡೆ ಹೊಂದಲಾರ?

ವಿ: ೧. ಜೀವಿಯು ಎಷ್ಟುಕಾಲ ಶ್ರೀಹರಿಯನ್ನು ಸ್ಮರಿಸಬೇಕು ಎಂಬ ಪ್ರಶ್ನೆಗೆ ಮಾರ್ಮಿಕವಾದ ಉತ್ತರ ಇಲ್ಲಿದೆ. ಜೀವಿಯು ವಿಷಯವಾರ್ತೆಯನ್ನು ಎಷ್ಟು ಚಿಂತಿಸುವನೋ ಅಷ್ಟು ಸಮಯವಾದರೂ ಶ್ರೀಹರಿಯನ್ನು ಚಿಂತಿಸಿದರೆ ಸದ್ಗತಿ ಹೊಂದುವುದು ಖಚಿತ ಎಂದರ್ಥ.

೨. ವಿಷಯಗಳ ಚಿಂತನೆ ಅನರ್ಥಕರ ಎಂಬುದನ್ನು 'ವಿಷಸನ್ನಿಭಾನ್' ಎಂಬ ಪದದಿಂದ ತಿಳಿಸಿರುವರು ಎಂದರೆ ವಿಷಯಗಳ ಚಿಂತನೆ ವಿಷಪಾನದಂತೆ ಅನರ್ಥಕರ

ಎಂದು ಭಾವ. 'ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರುಮಾನಸ-ಮೀಶಪದೇ' ಎಂಬ ದ್ವಾದಶಸ್ತೋತ್ರದ ಮಾತು ಇದರ ವಿವರಣೆಯಂತಿದೆ.

'ಸುಖವದ್ದೂರತೋ ದೃಶ್ಯಂ ತತ್ಕಾಲೇ ದುಃಖಮೇವ ಯತ್ ।
ಮೃಗತೃಷ್ಣೇತ್ಯತಃ ಪ್ರಾಹುರ್ಭೋಗಂ ವೈಷಯಿಕಂ ಬುಧಾಃ ॥'
ಇತಿ ಶಬ್ದನಿರ್ಣಯೇ ॥ - ಭಾ.ತಾ. (೪/೨೯/೨೦)

★★

## ಹರಿವಾರ್ತೆಯು ತಾರಕ - ಲೋಕವಾರ್ತೆಯು ಮಾರಕ

**ಯಾವತ್ ಪ್ರಲಪತೇ ಜಂತುರ್ಲೋಕವಾರ್ತಾದಿಭಿಃ ಸದಾ ।**
**[1]ತಾವಚ್ಚೇದ್ವಂದತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ । ೧೨೧।**

ಅ: ಲೋಕವಾರ್ತೆಯನ್ನು ಹರಟುವಷ್ಟು ಕಾಲ ವಿಷ್ಣುವನ್ನು ಸ್ತುತಿಸಿದಲ್ಲಿ ಯಾವ ಜೀವಿ ತಾನೇ ಬಂಧನದಿಂದ ಪಾರಾಗನು?

ವಿ: ೧. ಇಲ್ಲಿ ಹಿಂದಿನ ಶ್ಲೋಕದಲ್ಲಿ ಬಂದಿರುವ ವಿಷಯಚಿಂತನೆಯ ಸ್ವರೂಪದ ಬಗ್ಗೆ ವಿವರಣೆ ಇದೆ; ಲೋಕವಾರ್ತಾದಿಗಳಿಂದ ಕಾಲಕಳೆಯುವುದೂ ಸಹ ಅಂತಹ ವಿಷಯಚಿಂತನೆಯೇ ಆಗಿದೆ ಎಂದರ್ಥ.

೨. ವಿಷಯದ ಚಿಂತನೆಯನ್ನು ತೊರೆದು ವಿಷ್ಣುವಿನ ಚಿಂತನೆಯನ್ನು ಮಾಡಿ ಆಯುಷ್ಯವನ್ನು ಸಾರ್ಥಕ ಮಾಡಿಕೊಂಡು ಸದ್ಗತಿಯನ್ನು ಹೊಂದಬೇಕೆಂಬುದು ಈ ಎಲ್ಲ ಶ್ಲೋಕಗಳ ಒಟ್ಟು ಭಾವ.

★★

## ಏಕಾದಶೀ ನಿರ್ಣಯದ ಅಗತ್ಯ

### ಸೂತಃ

**[2]ಜ್ಞಾತ್ವಾ ವಿಪ್ರಾಸ್ತಿಥಿಂ ಸಮ್ಯಗ್ ದೈವಜ್ಞೈಃ ಸಮುದೀರಿತಾಮ್ ।**
**ಕರ್ತವ್ಯ ಉಪವಾಸಸ್ತು ಹ್ಯನ್ಯಥಾ ನರಕಂ ವ್ರಜೇತ್ ॥ ೧೨೨ ॥**

ಅ : ವಿಪ್ರರು ಜ್ಯೋತಿಷಿಗಳು ತಿಳಿಸುವ ತಿಥಿಯನ್ನು ಚೆನ್ನಾಗಿ ತಿಳಿದು ಉಪವಾಸ-ವನ್ನು ಆಚರಿಸಬೇಕು; ಇಲ್ಲವಾದಲ್ಲಿ ನರಕಹೊಂದುವುದು ನಿಶ್ಚಿತ.

---

೧. ತಾವಚ್ಚೇತ್ಸ್ಮರತೇ ( ಪಾ.)
೨. ನಾರದೀಯಪುರಾಣ ಉತ್ತರಭಾಗ (೨/೩೬); ಜ್ಞಾತ್ವಾ ವಿಪ್ರೈಸ್ತಿಥಿಂ ( ಪಾ.)

ವಿ: ೧. ಈ ಪದ್ಯದಲ್ಲಿ ಇಂದ್ರಿಯಪಾಟವದ ಮಹಿಮೆಯನ್ನು ತಿಳಿಸಿರುವರು. ಇಂದ್ರಿಯದಾರ್ಢ್ಯವಿದ್ದಾಗ ಶ್ರೀಹರಿಸ್ಮರಣೆ ಸಾಧ್ಯವಾಗುವಂತೆ ದಾರ್ಢ್ಯತಪ್ಪಿದಾಗ ಸಾಧ್ಯವಾಗದು ಎಂದರ್ಥ.

೨. **ಹೃಷೀಕಗಳು** ಎಂದರೆ ಇಂದ್ರಿಯಗಳು ಎಂದರ್ಥ. **ಹೃಷೀಕೇಶ** ಎಂದರೆ ಇಂದ್ರಿಯ-ಗಳ ಒಡೆಯನಾದ ಶ್ರೀಹರಿ ಎಂದರ್ಥ. ಶ್ರೀಹರಿಯು ಇಂದ್ರಿಯಗಳ ಒಡೆಯ-ನಾದ್ದರಿಂದಲೇ ಸಕಲೇಂದ್ರಿಯಗಳನ್ನೂ ಸಹ ಅವನ ಪೂಜೆಗೆ ವಿನಿಯೋಗಿಸಬೇಕು ಎಂಬ ಇಲ್ಲಿಯ ಸ್ವಾರಸ್ಯ ಗಮನಾರ್ಹ.

೩. ಇದು ಶ್ರೀಮದ್ಭಾಗವತದಲ್ಲಿಯ '**ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನ್ ಇಹ**' ಎಂಬ ಪ್ರಹ್ಲಾದನ ಸಂದೇಶದ ವಿವರಣೆಯಂತಿದೆ.

೪. '**ಕಣ್ಣು ಕೈಕಾಲ್ಕಿವಿ ನಾಲಿಗೆಯಿರಲಿಕ್ಕೆ ಮಣ್ಣು ಮುಕ್ಕಿ ಮರುಳಾಗುವರೆ । ಮಾನವ ಜನ್ಮ ದೊಡ್ಡದು ಇದು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ**' ಎಂಬ ಶ್ರೀಪುರಂದರ-ದಾಸರ ಮಾತು ಇದರ ವಿವರಣೆಯಂತಿರುವುದು ಗಮನಾರ್ಹ :

**ರತಿಃ ಪರಾತ್ಮನಿ ಹರೌ ಅನ್ಯತ್ರಾರತಿರೇವ ಚ ।**
**ಪುಮರ್ಥಸಾಧನಂ ಜ್ಞೇಯಂ ನಾತೋಽನ್ಯನ್ಮುಖ್ಯಮಿಷ್ಯತೇ ॥**

**- ಭಾಗವತತಾತ್ಪರ್ಯ (೪/೨೨/೨೦)**

★★

**ವಿಷ್ಣುಚಿಂತನೆ ತಾರಕ - ವಿಷಯಚಿಂತನೆ ಮಾರಕ**

**ಯಾವಚ್ಚಿಂತಯತೇ ಜಂತುರ್ವಿಷಯಾನ್ ವಿಷಸನ್ನಿಭಾನ್ ।**
**ತಾವಚ್ಚೇತ್ ಸ್ಮರತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ ॥ ೧೨೦ ॥**

**ಅ**: ವಿಷಸದೃಶವಾದ ವಿಷಯಗಳನ್ನು ಚಿಂತಿಸುವಷ್ಟು ಕಾಲ ಶ್ರೀಹರಿಯನ್ನು ಸ್ಮರಿಸಿದಲ್ಲಿ ಯಾವ ಜೀವಿ ತಾನೇ ಸಂಸಾರಬಂಧನದಿಂದ ಬಿಡುಗಡೆ ಹೊಂದಲಾರ?

ವಿ: ೧. ಜೀವಿಯು ಎಷ್ಟುಕಾಲ ಶ್ರೀಹರಿಯನ್ನು ಸ್ಮರಿಸಬೇಕು ಎಂಬ ಪ್ರಶ್ನೆಗೆ ಮಾರ್ಮಿಕವಾದ ಉತ್ತರ ಇಲ್ಲಿದೆ. ಜೀವಿಯು ವಿಷಯವಾರ್ತೆಯನ್ನು ಎಷ್ಟು ಚಿಂತಿಸುವನೋ ಅಷ್ಟು ಸಮಯವಾದರೂ ಶ್ರೀಹರಿಯನ್ನು ಚಿಂತಿಸಿದರೆ ಸದ್ಗತಿ ಹೊಂದುವುದು ಖಚಿತ ಎಂದರ್ಥ.

೨. ವಿಷಯಗಳ ಚಿಂತನೆ ಅನರ್ಥಕರ ಎಂಬುದನ್ನು 'ವಿಷಸನ್ನಿಭಾನ್' ಎಂಬ ಪದದಿಂದ ತಿಳಿಸಿರುವರು ಎಂದರೆ ವಿಷಯಗಳ ಚಿಂತನೆ ವಿಷಪಾನದಂತೆ ಅನರ್ಥಕರ

ಎಂದು ಭಾವ. 'ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರುಮಾನಸ-ಮೀಶಪದೇ' ಎಂಬ ದ್ವಾದಶಸ್ತೋತ್ರದ ಮಾತು ಇದರ ವಿವರಣೆಯಂತಿದೆ.

'ಸುಖವದ್ದೂರತೋ ದೃಶ್ಯಂ ತತ್ಕಾಲೇ ದುಃಖಮೇವ ಯತ್ ।
ಮೃಗತೃಷ್ಣೇತ್ಯತಃ ಪ್ರಾಹುರ್ಭೋಗಂ ವೈಷಯಿಕಂ ಬುಧಾಃ ॥'

ಇತಿ ಶಬ್ದನಿರ್ಣಯೇ ॥ - ಭಾ.ತಾ. (೪/೨೯/೨೦)

★★

## ಹರಿವಾರ್ತೆಯು ತಾರಕ - ಲೋಕವಾರ್ತೆಯು ಮಾರಕ

**ಯಾವತ್ ಪ್ರಲಪತೇ ಜಂತುರ್ಲೋಕವಾರ್ತಾದಿಭಿಃ ಸದಾ ।**
**[೧]ತಾವಚ್ಚೇದ್ವಂದತೇ ವಿಷ್ಣುಂ ಕೋ ನ ಮುಚ್ಯೇತ ಬಂಧನಾತ್ । ೧೨೧।**

ಅ: ಲೋಕವಾರ್ತೆಯನ್ನು ಹರಟುವಷ್ಟು ಕಾಲ ವಿಷ್ಣುವನ್ನು ಸ್ತುತಿಸಿದಲ್ಲಿ ಯಾವ ಜೀವಿ ತಾನೇ ಬಂಧನದಿಂದ ಪಾರಾಗನು?

ವಿ: ೧. ಇಲ್ಲಿ ಹಿಂದಿನ ಶ್ಲೋಕದಲ್ಲಿ ಬಂದಿರುವ ವಿಷಯಚಿಂತನೆಯ ಸ್ವರೂಪದ ಬಗ್ಗೆ ವಿವರಣೆ ಇದೆ; ಲೋಕವಾರ್ತಾದಿಗಳಿಂದ ಕಾಲಕಳೆಯುವುದೂ ಸಹ ಅಂತಹ ವಿಷಯಚಿಂತನೆಯೇ ಆಗಿದೆ ಎಂದರ್ಥ.

೨. ವಿಷಯದ ಚಿಂತನೆಯನ್ನು ತೊರೆದು ವಿಷ್ಣುವಿನ ಚಿಂತನೆಯನ್ನು ಮಾಡಿ ಆಯುಷ್ಯವನ್ನು ಸಾರ್ಥಕ ಮಾಡಿಕೊಂಡು ಸದ್ಗತಿಯನ್ನು ಹೊಂದಬೇಕೆಂಬುದು ಈ ಎಲ್ಲ ಶ್ಲೋಕಗಳ ಒಟ್ಟು ಭಾವ.

★★

## ಏಕಾದಶೀ ನಿರ್ಣಯದ ಅಗತ್ಯ

**ಸೂತಃ**

**[೨]ಜ್ಞಾತ್ವಾ ವಿಪ್ರಾಸ್ತಿಥಿಂ ಸಮ್ಯಗ್ ದೈವಜ್ಞೈಃ ಸಮುದೀರಿತಾಮ್ ।**
**ಕರ್ತವ್ಯ ಉಪವಾಸಸ್ತು ಹ್ಯನ್ಯಥಾ ನರಕಂ ವ್ರಜೇತ್ ॥ ೧೨೨ ॥**

ಅ : ವಿಪ್ರರು ಜ್ಯೋತಿಷಿಗಳು ತಿಳಿಸುವ ತಿಥಿಯನ್ನು ಚೆನ್ನಾಗಿ ತಿಳಿದು ಉಪವಾಸ-ವನ್ನು ಆಚರಿಸಬೇಕು; ಇಲ್ಲವಾದಲ್ಲಿ ನರಕಹೊಂದುವುದು ನಿಶ್ಚಿತ.

---

೧. ತಾವಚ್ಚೇತ್ಸ್ಮರತೇ ( ಪಾ.)
೨. ನಾರದೀಯಪುರಾಣ ಉತ್ತರಭಾಗ (೨/೩೬); ಜ್ಞಾತ್ವಾ ವಿಪ್ರೈಸ್ತಿಥಿಂ ( ಪಾ.)

ವಿ: ೧. ಈ ಶ್ಲೋಕದಿಂದ ಪ್ರಾರಂಭಿಸಿ ೧೮೬ನೆಯ ಶ್ಲೋಕದವರೆಗಿನ ಒಟ್ಟು ೬೪ ಶ್ಲೋಕಗಳಲ್ಲಿ ಏಕಾದಶ್ಯುಪವಾಸದ ಬಗ್ಗೆ ಸಮಗ್ರವಿವರಗಳನ್ನು ನೀಡಿರುವರು.

೨. ಏಕಾದಶಿ ಉಪೋಷಣೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಆ ತಿಥಿಯ ಖಚಿತ ಪರಿಜ್ಞಾನ ಎಂಬುದು ಇಲ್ಲಿಯ ಮುಖ್ಯ ಸಂದೇಶ.

೩. ಏಕಾದಶಿಯು ಮಹಾವ್ರತವಾದ್ದರಿಂದ ಅದನ್ನು ಅತ್ಯಂತ ಶಾಸ್ತ್ರವಿಹಿತ-ರೀತಿಯಿಂದಲೇ ಆಚರಿಸಬೇಕು. ಏಕಾದಶೀತಿಥಿಯ ನಿರ್ಣಯವನ್ನು ಸರಿಯಾಗಿ ಜ್ಯೋತಿಃಶ್ಶಾಸ್ತ್ರಪಾರಂಗತರಾದ ಜ್ಞಾನಿಗಳನ್ನು ಕೇಳಿ ಅದರಂತೆ ಆಚರಿಸಬೇಕು ಎಂದರ್ಥ[೧].

೪. ತಪ್ಪಾಗಿ ಏಕಾದಶ್ಯುಪವಾಸವನ್ನು ಆಚರಿಸುವುದು ತುಂಬಾ ಅನರ್ಥಕರ ಎಂಬ ವಿವರ ಮುಂದೆ ಬಂದಿದೆ. ಆದ್ದರಿಂದಲೇ ಜ್ಞಾನಿಗಳಿಂದ ಸರಿಯಾಗಿ ಕೇಳಿ ತಿಳಿದು ಏಕಾದಶೀತಿಥಿಯನ್ನು ಆಚರಿಸಿ ಪುಣ್ಯಭಾಗಿಗಳಾಗಬೇಕು; ತಪ್ಪಾಗಿ ಏಕಾದಶ್ಯುಪವಾಸ-ವನ್ನು ಆಚರಿಸಿದಲ್ಲಿ ನರಕಾದ್ಯನರ್ಥ ತಪ್ಪಿದ್ದಲ್ಲ ಎಂಬ ಎಚ್ಚರವನ್ನು ಇಲ್ಲಿ ನೀಡಿರುವರು. ಅದರ ಬಗ್ಗೆ ಸಹ ವಿವರಗಳು ಮುಂದೆ ಬಂದಿವೆ.

★★

## ದಶಮೀವಿದ್ಧವಾದ ಏಕಾದಶಿಯು ಉಪೋಷಣೆಗೆ ಅರ್ಹವಲ್ಲ

**ಕ್ಷಯೇ ವಾಽಪ್ಯಥವಾ ವೃದ್ಧೌ ಸಂಪ್ರಾಪ್ತೇ ವಾ ದಿನಕ್ಷಯೇ ।**
**ಉಪೋಷ್ಯಾ ದ್ವಾದಶೀ ಪುಣ್ಯಾ ಪೂರ್ವವಿದ್ಧಾಂ ಪರಿತ್ಯಜೇತ್[೨] ॥ ೧೨೩ ॥**

ಅ: ತಿಥಿಕ್ಷಯ ಅಥವಾ ತಿಥಿವೃದ್ಧಿ ಹಾಗೂ ದಿನಕ್ಷಯ ಒದಗಿದಾಗ ಪೂರ್ವ-ವಿದ್ಧವಾದ ಏಕಾದಶಿಯನ್ನು ತೊರೆದು ಪುಣ್ಯಕರವಾದ ದ್ವಾದಶಿಯಂದೇ ಉಪವಾಸ ಆಚರಿಸಬೇಕು.

ವಿ: ೧. ಏಕಾದಶಿಯು ದಶಮಿಯಿಂದ ವಿದ್ಧವಾದಾಗ ಅದು ಉಪವಾಸಕ್ಕೆ ಅರ್ಹ-ವೆನ್ನಿಸುವುದಿಲ್ಲ. ಅಂತಹ ಪ್ರಸಂಗ ಒದಗುವುದು ದಿನಕ್ಷಯಾದಿ ಸಂದರ್ಭಗಳಲ್ಲಿ. ಇದನ್ನು ನಿಪುಣರಾದ ಜ್ಯೋತಿಶ್ಶಾಸ್ತ್ರಜ್ಞರಿಂದ ತಿಳಿದು ಸರಿಯಾಗಿ ಆಚರಿಸಬೇಕು ಎಂದರ್ಥ.

೨. [೩]ತಿಥಿಕ್ಷಯ ಎಂದರೆ, ಮೂರುತಿಥಿಗಳು ಒಂದೇ ದಿನದಲ್ಲಿ ಒದಗುವುದು ಎಂದರ್ಥ:

---

೧. ಸಾಮ್ಯೇ ಸೌರಃ ಕ್ಷಯೇ ಬ್ರಾಹ್ಮಂ ತಿಥಿವೃದ್ಧೌ ಪರಾಶರಃ ॥ ಇತಿ ॥ ಪರಾಶರಃ ಆರ್ಯಭಟ ಇತ್ಯರ್ಥಃ ॥ (ಉ)

೨. ವಿವರ್ಜಯೇತ್ ( ಪಾ.)
ನಾರದೀಯ ಪುರಾಣ ಉತ್ತರಭಾಗ (೨/೨೫)

೩.. ಕ್ಷಯ ಇತಿ ॥ ನವಮೀ ಹ್ಯಷ್ಟಪಂಚಾಶದ್‌ಘಟಿಕಾಃ, ದಶಮೀ ಷಟ್‌ಪಂಚಾಶದ್‌ಘಟಿಕಾ, ಏಕಾದಶೀ ಪಂಚಾಶದಿತ್ಯಾದಿರೂಪೇಣ ಕ್ಷಯೇ ವಾ । ನವಮೀ ಚತುಃಪಂಚಾಶತ್, ದಶಮೀ ಷಟ್‌ಪಂಚಾಶತ್,

೩. ವೃದ್ಧಿಕ್ಷಯಗಳ ವಿವರ ಹೀಗಿದೆ[೧] :

**ಏಕಾತಿದ್ವಾದಶೀವೃದ್ಧೌ ನೋ ಚೇತ್ ವೃದ್ಧೌ ತು ಷೋಡಶ।**
**ದ್ವ್ಯೇಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ವಿದಮ್।**
**ಅತಿವೃದ್ಧಾಷ್ಟಯುಗಂ ವೃದ್ಧಾವಷ್ಟ ಸಮೇ ಚತುಃ।**
**ದ್ವ್ಯೇಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ತ್ವಿದಮ್।**

**- ಶ್ರೀಮದಾನಂದತೀರ್ಥಭಗವತ್ಪಾದಕೃತ - ತಿಥಿನಿರ್ಣಯ**

★★

## ವಿದ್ಧೈಕಾದಶಿಯಂದು ಉಪವಾಸವು ಸಂತತಿ ಸಂಪತ್ತುಗಳ ವಿನಾಶಕ್ಕೆ ಕಾರಣ

**ಪೂರ್ವವಿದ್ಧಾಂ ಪ್ರಕುರ್ವಾಣೋ ನರೋ ಧರ್ಮಾನ್ ನಿಕೃಂತತಿ।**
**ಸಂತತೇಸ್ತು ವಿನಾಶಾಯ ಸಂಪದೋ ಹರಣಾಯ ಚ[೨] ॥ ೧೨೪ ॥**

ಅ: ದಶಮೀವಿದ್ಧವಾದ ಏಕಾದಶಿಯಂದು ಉಪವಾಸವ್ರತವನ್ನು ಆಚರಿಸುವ ಮಾನವನ ಧರ್ಮಗಳು ಹಾಳಾಗುವವು; ಅದು ಸಂತತಿಯ ವಿನಾಶಕ್ಕೂ ಸಂಪತ್ತಿನ ಕ್ಷಯಕ್ಕೂ ಕಾರಣವಾಗುವುದು.

ವಿ: ಇಲ್ಲಿ ಪೂರ್ವವಿದ್ಧ ಎಂದರೆ ಏಕಾದಶಿಯ ಹಿಂದಿನ ತಿಥಿಯಾದ ದಶಮೀತಿಥಿಯಿಂದ ವಿದ್ಧವಾದ ಎಂದರ್ಥ; ಇದರ ಬಗ್ಗೆ ವಿವರಗಳು ಮುಂದೆ ವಿಶೇಷವಾಗಿ ಬಂದಿವೆ.

★★

---

ಏಕಾದಶ್ಯಷ್ಟಪಂಚಾಶದಿತಿ ವೃದ್ಧೌ ವಾ ॥ ನವಮ್ಯಾಂ ದಶಮ್ಯಾಮೇಕಾದಶ್ಯಾಂ ವಾ ಉಪರಿವಿಲೇಖನೇನ ದಿನತ್ರಯಸಂಸ್ಪರ್ಶೇನ ದ್ವಿತಿಥ್ಯಂತದಿನಕ್ಷಯೇ ಪ್ರಾಪ್ತೇ ವಾ ದಶಮೀವೇಧವಶೇನ ಏಕಾದಶೀಂ ಪರಿತ್ಯಜ್ಯ ಪುಣ್ಯಾ ದ್ವಾದಶ್ಯೈವೋಪೋಷ್ಯೇತ್ಯರ್ಥಃ। ದಿನಕ್ಷಯ ಲಕ್ಷಣಂ ಚೋಕ್ತಂ ಪಾದ್ಮೇ -

ದ್ವೌ ತಿಥ್ಯಂತಾವೇಕರಾತ್ರೇ ಯಸ್ಮಿನ್ ಸ ಸ್ಯಾದ್ದಿನಕ್ಷಯಃ।
ಏಕಸ್ಮಿನ್ ವಾಸರೇ ತ್ವಹ್ನಿ ತಿಥೀನಾಂ ತ್ರಿತಯಂ ಯದಾ ॥
ತದಾ ದಿನಕ್ಷಯಃ ಪ್ರೋಕ್ತಸ್ತತ್ರ ಸಾಹಸ್ರಿಕಂ ಫಲಮ್ ॥ ಇತಿ ॥ (ಸ್ಮೃ.ಕೃ)

- ಕ್ಷಯೇ ಏಕಾದಶ್ಯಾಃ ಪೂರ್ವತಿಥೀನಾಂ ಉತ್ತರತಿಥೀನಾಂ ಕ್ಷಯೇ ವಾ ವೃದ್ಧೌ ವಾ । ಅರುಣೋದಯಕಾಲೇ ದಶಮೀವೇಧೇ ಸತಿ ತಥಾ ದಿನಕ್ಷಯೇ ತಿಥಿತ್ರಯಯೋಗೇನ ಅರುಣೋದಯೇ ದಶಮೀ, ಅನಂತರಂ ಏಕಾದಶೀ, ತತ್ಪ್ರಭಾತಸಮಯೇ ದ್ವಾದಶೀ ಯದಾ, ತದಾ ದಿನಕ್ಷಯತಿಥಿರಿತಿ ॥ (ಸ್ಮೃ.ಕೃ)

೧. ಇವು ಶ್ರೀವಾದಿರಾಜಸ್ವಾಮಿಗಳ ಏಕಾದಶೀನಿರ್ಣಯಕೃತಿಯಲ್ಲಿ 'ತ್ರಿವಿಕ್ರಮಪಂಡಿತಾಚಾರ್ಯವಚನ' ಎಂಬುದಾಗಿ ಉದಾಹೃತವಾಗಿ ವ್ಯಾಖ್ಯಾನಿಸಲ್ಪಟ್ಟಿದೆ.

೨. ನಾರದೀಯಪುರಾಣ - ಉತ್ತರಭಾಗ (೨/೩೭)

## ಕಲಾಮಾತ್ರವೇಧವೂ ಏಕಾದಶಿಗೆ ನಿಷಿದ್ಧ

**ಕಲಾವೇಧೇಽಪಿ ವಿಪ್ರೇಂದ್ರ ದಶಮ್ಯೈಕಾದಶೀಂ ತ್ಯಜೇತ್ ।**
**ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭ ಇವ ಸಂತ್ಯಜೇತ್[೧] । ೧೨೫ ।**

**ಅ:** ಎಲೈ ವಿಪ್ರಶ್ರೇಷ್ಠನೇ ! ಮದ್ಯದ ಹನಿಯಿಂದ ಕೂಡಿದ ಗಂಗೋದಕವನ್ನು ಹೇಗೆ ತೊರೆಯಬೇಕೋ ಹಾಗೆ, ಏಕಾದಶಿಯು ದಶಮಿಯಿಂದ ಕಲಾಮಾತ್ರ ವೇಧಹೊಂದಿದ್ದರೂ ಸಹ ಅದನ್ನು ತ್ಯಜಿಸಬೇಕು.

ವಿ: ೧. ಗಂಗೋದಕಕ್ಕೆ ಒಂದು ಹನಿ ಮದ್ಯ ಸೋಕಿದರೂ ಸಹ ಅದೆಲ್ಲಾ ನಿಷಿದ್ಧ-ವೆನಿಸುವಂತೆ ಶುದ್ಧವಾದ ಏಕಾದಶೀತಿಥಿಗೆ ದಶಮಿಯ ಸ್ವಲ್ಪ ಸಂಪರ್ಕ ಒದಗಿದರೂ ಸಹ ಅದನ್ನು ತೊರೆಯಬೇಕು ಎಂದರ್ಥ.

೨. ಈ ಮೂಲಕ ಒಂದು ಬಿಂದುವಿನಷ್ಟು ಸುರಾಪಾನ ಮಾಡುವುದೂ ಸಹ ಅನರ್ಥಹೇತು ಎಂಬ ವಿಶೇಷಾಂಶವೂ ಸಹ ನಿರೂಪಿತ ಎಂದು ತಿಳಿಯಬೇಕು.

೩. **ಕಲಾ** ಎಂದರೆ ಕಾಲಗಣನೆಯ ಅತ್ಯಂತ ಸೂಕ್ಷ್ಮವಾದ ಘಟಕ; ಇಲ್ಲಿ ಅತ್ಯಲ್ಪ ಎಂಬ ಅರ್ಥ ವಿವಕ್ಷಿತ; ವಿವರಗಳನ್ನು ಮುಂದೆ ನೀಡಲಾಗಿದೆ(ಶ್ಲೋಕ. ೧೬೧).

★★

## ದಶಮೀದೂಷಿತವಾದ ಏಕಾದಶಿಯು ಅಗ್ರಾಹ್ಯ

**ಶ್ವದೃತೌ ಪಂಚಗವ್ಯಂ ಚ ದಶಮ್ಯಾ ದೂಷಿತಾಂ ತ್ಯಜೇತ್ ।**
**ಏಕಾದಶೀಂ ದ್ವಿಜಶ್ರೇಷ್ಠಾಃ ಪಕ್ಷಯೋರುಭಯೋರಪಿ[೨] ॥ ೧೨೬ ॥**

ಅ: ಎಲೈ ದ್ವಿಜಶ್ರೇಷ್ಠರೆ ! ನಾಯಿಯ ಚರ್ಮದ ಚೀಲದಲ್ಲಿನ ಪಂಚಗವ್ಯವನ್ನು ಹೇಗೋ ಹಾಗೆ ದಶಮೀದೂಷಿತವಾದ ಏಕಾದಶಿಯನ್ನು ಉಭಯಪಕ್ಷಗಳಲ್ಲೂ ತೊರೆಯಬೇಕು.

ವಿ: ೧. ಪಂಚಗವ್ಯ ತುಂಬಾ ಪಾವನವಾದುದು; ಆದರೆ ಅದನ್ನು ನಾಯಿಯ ಚರ್ಮದ ಚೀಲದಲ್ಲಿ ತಂದರೆ ಅತ್ಯಂತ ಅಶುದ್ಧವೆನ್ನಿಸಿ ಹೇಯವೆನಿಸುವುದು. ಅದರಂತೆ ಏಕಾದಶಿಯೂ ಸಹ ಪರಿಶುದ್ಧವಾದರೂ ಅದಕ್ಕೆ ದಶಮಿಯ ಸಂಪರ್ಕವಾದರೆ ತ್ಯಾಜ್ಯವೆನ್ನಿಸುವುದು ಎಂದರ್ಥ.

---

೧. ನಾರದೀಯಪುರಾಣ – ಉತ್ತರಭಾಗ (೨/೩೮)
೨. ನಾರದೀಯಪುರಾಣ – ಉತ್ತರಭಾಗ (೨/೩೯)

೨. ಪಂಚಗವ್ಯವು ತುಂಬಾಶ್ರೇಷ್ಠ; ನಾಯಿಯ ಚರ್ಮವು ಅತ್ಯಂತ ನಿಷಿದ್ಧ ಎಂಬ ಪ್ರಮೇಯವಿಶೇಷವೂ ಇಲ್ಲಿ ನಿರೂಪಿತ.

೩. ಇಲ್ಲಿ **ಪಕ್ಷಯೋರುಭಯೋರಪಿ** ಎಂಬುದಕ್ಕೆ ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ ಎಂಬ ಎರಡು ಪಕ್ಷಗಳಲ್ಲೂ ಎಂದರ್ಥ.

೪. ಎಂದರೆ ಶುಕ್ಲಪಕ್ಷ ಮತ್ತು ಕೃಷ್ಣಪಕ್ಷ ಎರಡು ಪಕ್ಷದ ಏಕಾದಶಿಗಳೂ ಸಹ ದಶಮೀಸಂಪರ್ಕದಿಂದ ಸಂಪೂರ್ಣ ಮುಕ್ತವಾಗಿರಬೇಕು ಎಂದರ್ಥ. ಇದರಿಂದ ಶುಕ್ಲಪಕ್ಷಕ್ಕೆ ಮಾತ್ರ ವೇಧವನ್ನು ಗಮನಿಸಬೇಕು, ಕೃಷ್ಣಪಕ್ಷಕ್ಕಲ್ಲ ಎಂಬ ಕೆಲವರ ಅಭಿಪ್ರಾಯ ತಪ್ಪು ಎಂದು ಸಿದ್ಧವಾಗುವುದು.

★★

## ವಿದ್ಧೈಕಾದಶಿಯ ಉಪವಾಸ ಅಪಾತ್ರರಿಗೆ ಶ್ರಾದ್ಧಭೋಜನ ನೀಡಿದಂತೆ ಅನರ್ಥಕರ

**ತಸ್ಮಾದ್ವಿಪ್ರಾ ನ ವಿದ್ಧಾ ಹಿ ಕರ್ತವ್ಯೈಕಾದಶೀ ಕ್ವಚಿತ್ ।**
**ವಿದ್ಧಾ ಹಂತಿ ಪುರಾಪುಣ್ಯಂ ಶ್ರಾದ್ಧಂ ಚ ವೃಷಲೀಪತಿಃ[೧] ॥ ೧೨೭ ॥**

**ಅ:** ಎಲೈ ವಿಪ್ರರೇ ! ಆದ್ದರಿಂದ ವಿದ್ಧವಾದ ಏಕಾದಶಿಯನ್ನು ಎಂದೂ ಆಚರಿಸಬಾರದು; ಅದು ಹಿಂದಿನ ಎಲ್ಲ ಪುಣ್ಯವನ್ನೂ ಸಹ ವೃಷಲೀಪತಿಯು ಶ್ರಾದ್ಧವನ್ನು ಹೇಗೋ ಹಾಗೆ ಹಾಳುಮಾಡುವುದು.

**ವಿ:** ೧. ವಿದ್ಧೈಕಾದಶಿಯ ಆಚರಣೆ ಮುಂಚೆ ಮಾಡಿದ ಎಲ್ಲ ಪುಣ್ಯಗಳನ್ನೂ ಸಹ ನಾಶಪಡಿಸುವಷ್ಟು ಮಹಾಪಾತಕ ಎಂದರ್ಥ.

೨. ಇದರಲ್ಲಿ ವೃಷಲೀಪತಿಯನ್ನು ಶ್ರಾದ್ಧಕ್ಕೆ ಆಹ್ವಾನಿಸಿದಲ್ಲಿ ಆ ಶ್ರಾದ್ಧ ವ್ಯರ್ಥವಾಗುವದು ಎಂಬ ಪ್ರಮೇಯ ವಿಶೇಷವೂ ನಿರೂಪಿತವಾಗಿದೆ.

೩. **ವೃಷಲೀಪತಿ**[೨] ಎಂಬುದಕ್ಕೆ ಹತ್ತುವರ್ಷಮೀರಿದ ಕನ್ಯೆಯನ್ನು ವಿವಾಹವಾದವನು, ಶೂದ್ರಸ್ತ್ರೀಯನ್ನು ವಿವಾಹವಾದವನು, ಸ್ವಧರ್ಮದಿಂದ ಪತಿತನಾದವನು ಎಂಬ ಅನೇಕ ಅರ್ಥಗಳು ಶಾಸ್ತ್ರಗಳಲ್ಲಿ ಬಂದಿವೆ :

**ಅಷ್ಟವರ್ಷಾ ಭವೇತ್ ಕನ್ಯಾ ನವವರ್ಷಾ ತು ರೋಹಿಣೀ ।**
**ದಶವರ್ಷಾ ಭವೇದ್ ಗೌರೀ ಅತ ಊರ್ಧ್ವಂ ರಜಸ್ವಲಾ ॥**
**ತತ್ಪತಿರ್ವೃಷಲೀಪತಿರಿತ್ಯಾಹುರ್ವೇದವಾದಿನಃ ॥ - (ಉ)**

★★

---

೧. ನಾರದೀಯಪುರಾಣ - ಉತ್ತರಭಾಗ (೨/೪೫)
೨. ವೃಷಲೀಪತಿಃ - ಶೂದ್ರಸ್ತ್ರೀಗಾಮೀ ವಿಪ್ರಃ ರಜಸ್ವಲಕನ್ಯಾಪತಿರ್ವಾ ।(ಸ್ಮೃ.ಕೃ)

## ವಿದ್ಧೈಕಾದಶೀ ಉಪವಾಸದಿಂದ ಸಕಲಸತ್ಕರ್ಮಗಳೂ ವ್ಯರ್ಥ

**ಜಪ್ತಂ ದತ್ತಂ ಹುತಂ ಸ್ನಾತಂ ತಥಾ ಪೂಜಾ ಕೃತಾ ಹರೇಃ।**
**ತತ್ ಸರ್ವಂ ವಿಲಯಂ ಯಾತಿ ತಮಃ ಸೂರ್ಯೋದಯೇ ಯಥಾ ॥೧೨೮॥**

ಅ: (ವಿದ್ಧೈಕಾದಶಿಯಂದು ಉಪವಾಸ ಮಾಡಿದಲ್ಲಿ) ಜಪ, ದಾನ, ಹೋಮ, ಸ್ನಾನ ಮತ್ತು ಮಾಡಿದ ಶ್ರೀಹರಿಯ ಪೂಜೆ ಎಲ್ಲವೂ ಸಹ ಸೂರ್ಯನು ಹುಟ್ಟುತ್ತಲೇ ಕತ್ತಲೆಯು ಹೇಗೋ ಹಾಗೆ ನಾಶಹೊಂದುವವು.

ವಿ:ವಿದ್ಧೈಕಾದಶಿಯಂದು ಉಪವಾಸಮಾಡಿದಲ್ಲಿ ಸಾವಿರಾರು ಜನ್ಮಗಳಲ್ಲಿ ಮಾಡಿದ ಜಪ, ದಾನ ಮೊದಲಾದ ಸಮಸ್ತಪುಣ್ಯಕಾರ್ಯಗಳೂ ಸಹ ಹಾಳಾಗುವವು ಎಂದರ್ಥ :

ಯತ್ತು ಜನ್ಮಸಹಸ್ರೇಣ ಸದಾ ಪುಣ್ಯಾರ್ಜಿತಂ ಫಲಮ್ ।
ಅರುಣೋದಯವಿದ್ಧಾಯಾ ಉಪವಾಸಾದ್ವ್ಯಪೋಹತಿ ।
ನಿವಾರಿತಸ್ತು ವಿದ್ವದ್ಭಿರ್ಜನ್ಮಕೋಟಿಯುತಂ ಫಲಮ್ ।
- ವಿಷ್ಣುತೀರ್ಥೀಯದಲ್ಲಿ ಉದಾಹೃತವಾದ ಸ್ಕಾಂದವಚನ

**

## ಏಕಾದಶಿಯು ವಿದ್ಧವಾದಾಗ ದ್ವಾದಶಿಯಂದೇ ಉಪವಾಸ

**ಏಕಾದಶ್ಯಾಂ ಯದಾ ಬ್ರಹ್ಮನ್ ದಿನಕ್ಷಯತಿಥಿರ್ಭವೇತ್ ।**
**ಉಪೋಷ್ಯಾ ದ್ವಾದಶೀ [೧] ತತ್ರ ತ್ರಯೋದಶ್ಯಾಂ ತು ಪಾರಣಮ್ ॥ ೧೨೯ ॥**

ಅ: ಬ್ರಾಹ್ಮಣನೇ ! ಏಕಾದಶಿಯಂದು ದಿನಕ್ಷಯತಿಥಿಯು ಒದಗಿದಾಗ ದ್ವಾದಶಿಯಂದು ಉಪವಾಸವನ್ನು ಆಚರಿಸಿ, ತ್ರಯೋದಶಿಯಂದು ಪಾರಣೆ ಮಾಡಬೇಕು.

ವಿ: ೧. ದಿನಕ್ಷಯ ಮೊದಲಾದ ಕಾರಣಗಳಿಂದಾಗಿ ಏಕಾದಶಿಯು ದಶಮೀವಿದ್ಧ-ವಾದಾಗ ಆ ಬಾರಿ ಏಕಾದಶಿಯಂದು ಉಪವಾಸ ಮಾಡದೇ ದ್ವಾದಶಿಯಂದು ಉಪವಾಸವನ್ನು ಆಚರಿಸಿ ತ್ರಯೋದಶಿಯಂದು ಪಾರಣೆ ಮಾಡಬೇಕು ಎಂದರ್ಥ.

೨. ದಶಮೀವಿದ್ಧ ಏಕಾದಶಿಯನ್ನು ಆಚರಿಸಬಾರದು ಎಂದರೆ ಆ ಪಕ್ಷದಲ್ಲಿ ಉಪವಾಸವೇ ಲೋಪವಾಗುವುದು ಎಂದರ್ಥವಲ್ಲ. ಅಂತಹ ಪ್ರಸಂಗದಲ್ಲಿ ಏಕಾದಶಿ

---

೧. ಶುದ್ಧಾ( ಪಾ.); ಪುಣ್ಯಾ ( ಪಾ.)

ತಿಥಿಯಿದ್ದ ದಿನ ಉಪವಾಸ ಮಾಡುವ ಬದಲು ದ್ವಾದಶಿಯಂದು ಉಪವಾಸ ಮಾಡಿ ತ್ರಯೋದಶಿಯಂದು ಪಾರಣೆ ಮಾಡಬೇಕು ಎಂದರ್ಥ.

★★

## ಏಕಾದಶೀತಿಥಿಯ ನಿರ್ಣಯದ ಬಗ್ಗೆ ವಿಶೇಷ

**ಪ್ರತಿಪತ್ಪ್ರಭೃತಯಃ ಸರ್ವಾ ಉದಯಾದುದಯಾದ್ರವೇಃ ।**
**ಸಂಪೂರ್ಣಾ ಇತಿ ವಿಜ್ಞೇಯಾ ಹರಿವಾಸರವರ್ಜಿತಾಃ ॥ ೧೩೦ ॥**

ಅ: ಪಾಡ್ಯ ಮೊದಲಾದ ಎಲ್ಲ ತಿಥಿಗಳೂ ಸೂರ್ಯೋದಯದಿಂದ ಸೂರ್ಯೋದಯದವರೆಗೆ ಸಂಪೂರ್ಣ ಎಂದು ತಿಳಿಯಬೇಕು; ಏಕಾದಶಿಯು ಮಾತ್ರ ಹಾಗಲ್ಲ.

ವಿ: ೧. ಪಾಡ್ಯ ಮೊದಲಾದ ತಿಥಿಗಳ ಗಣನೆಗೆ ಸೂರ್ಯೋದಯ ಮುಖ್ಯ ಆಧಾರವಾದರೆ ಏಕಾದಶಿಗೆ ಮಾತ್ರ ಹಾಗಲ್ಲ ಎಂದರ್ಥ.

೨. ಈ ಮಾತಿನ ಮೂಲಕ ಶ್ರೀಮದಾಚಾರ್ಯರು ಇತರ ತಿಥಿಗಳ ನಿರ್ಣಯದ ಬಗ್ಗೆ ಸಹ ಬೆಳಕು ಚೆಲ್ಲಿರುವರು ಎಂಬ ವಿಶೇಷವನ್ನು ಗಮನಿಸಬೇಕು.

೩. ಏಕಾದಶೀತಿಥಿಯ ನಿರ್ಣಯ ಇತರ ತಿಥಿಗಳ ನಿರ್ಣಯಕ್ಕಿಂತ ಭಿನ್ನ ರೀತಿಯದು ಎಂಬ ವಿಶೇಷಾಂಶ ಇಲ್ಲಿದೆ.

★★

## ಅರುಣೋದಯಕಾಲದಲ್ಲಿ ದಶಮಿವೇಧ ನಿಷಿದ್ಧ

**ಅರುಣೋದಯವೇಲಾಯಾಂ[೧] ದಶಮೀ ಯದಿ ದೃಶ್ಯತೇ ।**
**ನ ತತ್ರೈಕಾದಶೀ ಕಾರ್ಯಾ ಧರ್ಮಕಾಮಾರ್ಥನಾಶಿನೀ ॥ ೧೩೧ ॥**

ಅ: ಅರುಣೋದಯ ಸಮಯದಲ್ಲಿ ದಶಮೀತಿಥಿಯು ಕಂಡಲ್ಲಿ ಅಂದು ಏಕಾದಶಿಯನ್ನು ಆಚರಿಸಕೂಡದು; ಅದು ಧರ್ಮ, ಅರ್ಥ ಮತ್ತು ಕಾಮಗಳ ನಾಶಕ್ಕೆ ಕಾರಣವಾಗುವುದು.

ವಿ: ಇಲ್ಲಿ ಹಿಂದೆ ಹೇಳಿದಂತೆ ಏಕಾದಶಿಯನ್ನು ಆಚರಿಸಕೂಡದು ಎಂದರೆ ಅಂದು ಏಕಾದಶೀ ಉಪವಾಸವನ್ನು ಆಚರಿಸದೇ ಮಾರನೆಯ ದಿನವೇ ಆಚರಿಸಬೇಕು ಎಂದರ್ಥ:

---

೧. ಅರುಣೋದಯಕಾಲೇ ತು ( ಪಾ.) ಯದಿ ವಿದ್ಧ್ಯತೇ ( ಪಾ.)

ದಶಮೀಮಿಶ್ರಿತಾಂ ತ್ಯಕ್ತ್ವಾ ವಿದ್ಧಾಯಾಮರುಣೋದಯೇ ।
ಉಪೋಷ್ಯೈಕಾದಶೀಂ ಶುದ್ಧಾಂ ದ್ವಾದಶೀಂ ವಾಽಪಿ ವೈಷ್ಣವಃ ॥
- ವೃದ್ಧಹಾರೀತಸ್ಮೃತಿ (೫/೩೪೦)

★★

## ಅರುಣೋದಯವೇಧವಿದ್ಧಾಗ ಏಕಾದಶಿಯ ಆಚರಣೆ ಪಾಪಸಾಧನ

**ಅರುಣೋದಯವೇಲಾಯಾಂ ದಶಮೀ ಯದಿ ದೃಶ್ಯತೇ ।**
**ಪಾಪಮೂಲಂ ತದಾ [೧]ಜ್ಞೇಯಮೇಕಾದಶ್ಯುಪವಾಸನಮ್ ॥ ೧೩೨ ॥**

ಅ: ಅರುಣೋದಯ ಸಮಯದಲ್ಲಿ ದಶಮಿಯು ಕಂಡಲ್ಲಿ ಆಗ ಏಕಾದಶಿ ಉಪವಾಸವನ್ನು ಆಚರಿಸುವುದು ಪಾಪಕ್ಕೆ ಸಾಧನ ಎಂದು ತಿಳಿಯಬೇಕು.

★★

## 'ಅರುಣೋದಯ'ದ ಅರ್ಥ

**ಚತಸ್ರೋ ಘಟಿಕಾಃ ಪ್ರಾತರರುಣೋದಯ ಉಚ್ಯತೇ ।**
**ಯತೀನಾಂ ಸ್ನಾನಕಾಲೋಽಯಂ ಗಂಗಾಂಭಃ ಸದೃಶಂ ಜಲಮ್ ೧೩೩**

ಅ: ಸೂರ್ಯೋದಯದ ಮುಂಚಿನ ನಾಲ್ಕು ಘಳಿಗೆಗಳ ಕಾಲ ಅರುಣೋದಯ ಎನ್ನಿಸುವುದು. ಅದು ಸನ್ಯಾಸಿಗಳ ಸ್ನಾನಕ್ಕೆ ವಿಹಿತವಾದ ಕಾಲ; ಆಗಿನ ನೀರು ಗಂಗೋದಕಕ್ಕೆ ಸಮಾನ.

ವಿ: ೧. ಹಿಂದಿನ ಎರಡು ಶ್ಲೋಕಗಳಲ್ಲಿ ಏಕಾದಶೀತಿಥಿಯು ಅರುಣೋದಯ-ಕಾಲದಿಂದಲೇ ಗ್ರಾಹ್ಯ ಎಂಬ ವಿಷಯವನ್ನು ತಿಳಿಸಿ ಈ ಶ್ಲೋಕದಲ್ಲಿ ಅರುಣೋದಯ ಕಾಲದ ಬಗ್ಗೆ ವಿವರಣೆ ನೀಡಿರುವರು.

೨. ಅರುಣೋದಯಕಾಲವೆಂದರೆ ಸೂರ್ಯೋದಯದ ನಾಲ್ಕುಘಳಿಗೆಗಳ ಮುಂಚಿನ ಕಾಲ ಎಂದರ್ಥ. ಎಂದರೆ ಹಿಂದಿನ ದಿನದ ೫೬ಘಳಿಗೆಗಳ ಅನಂತರದ ಕಾಲ ಎಂದರ್ಥ. ಸೂರ್ಯೋದಯದ ಮುಂಚಿನ ನಾಲ್ಕು ಘಳಿಗೆಗಳ ಕಾಲ ಎಂದರೆ ೧ಗಂಟೆ ೩೬ನಿಮಿಷಗಳ ಕಾಲ ಎಂದರ್ಥ (೧ಘಳಿಗೆ= ೨೪ನಿಮಿಷಗಳು).

೩. ಅರುಣೋದಯಕಾಲದಲ್ಲಿ ಉದಕದಲ್ಲಿ ಗಂಗಾಸನ್ನಿಧಾನ ಇರುವುದರಿಂದ ಆಗ ಮಾಡುವ ಸ್ನಾನ ಗಂಗಾಸ್ನಾನದ ಫಲಕ್ಕೆ ಸಾಟಿ ಎಂಬ ವಿಶೇಷಾಂಶ ಇಲ್ಲಿದೆ.

---

೧. ಜ್ಞೇಯಮೇಕಾದಶ್ಯುಪವಾಸಿನಾಮ್ ( ಪಾ.)

೪. ಗೃಹಸ್ಥಾದಿಗಳಿಗೆ ಅರುಣೋದಯಕಾಲವು ಏಳಲಿಕ್ಕೆ ವಿಹಿತವಾದ ಕಾಲವಾದರೆ ಸನ್ಯಾಸಿಗಳಿಗೆ ಅದು ಸ್ನಾನಕ್ಕೆ ವಿಹಿತವಾದ ಕಾಲ ಎಂಬುದು ವಿಶೇಷ. ಎಂದರೆ ಯತಿಗಳು ಅರುಣೋದಯದ ಮುನ್ನವೇ ಎಚ್ಚೆತ್ತು ಶೌಚಾದಿಗಳನ್ನು ಪೂರೈಸಿ ಅರುಣೋದಯ-ಕಾಲದಲ್ಲಿ ಸ್ನಾನಕ್ಕೆ ಅಣಿಯಾಗಿರಬೇಕು ಎಂದರ್ಥ.

೫. ಈ ಬಗ್ಗೆ ವ್ಯಾಖ್ಯಾನಕಾರರು ಉಲ್ಲೇಖಿಸಿರುವ ತ್ರಿವಿಕ್ರಮಪಂಡಿತಾಚಾರ್ಯರ ವಚನಗಳು ಹೀಗಿವೆ :

**ಅತ್ರೈವಾರ್ಥೇ ಸಂಪ್ರದಾಯಶಿಷ್ಟವಚನಮ್ -**
**ಏಕಾತಿದ್ವಾದಶೀವೃದ್ಧೌ ನೋ ಚೇದ್ ವೃದ್ಧೌ ತು ಷೋಡಶ ।**
**ದ್ವೈಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ತ್ವಿದಮ್ ॥ ಇತಿ ಔತ್ತರೇಯಾಃ ॥**
**ಅತಿವೃದ್ಧಾವಷ್ಟಯುಗಂ ವೃದ್ಧಾವಷ್ಟ ಸಮೇ ಚತುಃ ।**
**ದ್ವೈಕಲಿಪ್ತೀ ಸಮೇ ಹ್ರಾಸೇ ಚತುಷ್ಕಾದುತ್ತರಂ ತ್ವಿದಮ್ ॥**
**- ಇತಿ ಪಂಡಿತಾಚಾರ್ಯವಚನಾಂತರಮ್ ॥ (ಉ)**

★★

## ಸಂಪೂರ್ಣೈಕಾದಶೀಯಂದೇ ಉಪವಾಸ

**ಉದಯಾತ್ ಪ್ರಾಗ್ ಯದಾ ವಿಪ್ರಾ ಮುಹೂರ್ತದ್ವಯಸಂಯುತಾ ।**
**ಸಂಪೂರ್ಣೈಕಾದಶೀ ನಾಮ [೧]ತತ್ರೈವೋಪವಸೇದ್ಗೃಹೀ ॥ ೧೩೪ ॥**

**ಅ:** ಸೂರ್ಯೋದಯದ ಮುಂಚಿನ ಎರಡು ಮುಹೂರ್ತಗಳಿಂದ ಕೂಡಿದ ಕಾಲದಲ್ಲಿ ಏಕಾದಶಿಯು ಇದ್ದಲ್ಲಿ ಅದನ್ನು ಸಂಪೂರ್ಣೈಕಾದಶಿ ಎನ್ನುವರು. ಗೃಹಸ್ಥನು ಅಂದೇ ಉಪವಾಸ ಮಾಡಬೇಕು.

ವಿ: ೧. ಎಂದರೆ ಅರುಣೋದಯಕಾಲಕ್ಕೆ ಏಕಾದಶೀತಿಥಿ ಇದ್ದಲ್ಲಿ ಅದು ಸಂಪೂರ್ಣೈ-ಕಾದಶೀ ಎನ್ನಿಸುವುದರಿಂದ ಅದು ಉಪವಾಸಕ್ಕೆ ವಿಹಿತವಾದದ್ದು ಎಂದರ್ಥ.

೨. ಇಲ್ಲಿ 'ಗೃಹೀ' ಎಂಬ ಪದದಿಂದ ವಟು, ವಾನಪ್ರಸ್ಥ ಮತ್ತು ಯತಿಗಳೂ ಸಹ ಉಪಲಕ್ಷಿತರು. ಏಕಾದಶೀತಿಥಿಯ ನಿರ್ಣಯ ಸಕಲವೈಷ್ಣವರಿಗೂ ಒಂದೇ ಬಗೆ-ಯಾದುದು. ಇದರಲ್ಲಿ ಆಶ್ರಮಭೇದವಾಗಲೀ, ವರ್ಣಭೇದವಾಗಲೀ ಸರ್ವಥಾ ಇಲ್ಲ ಎಂದು ತಿಳಿಯಬೇಕು.

★★

---

೧. ತತ್ರೈವೋಪವಸೇದ್ ವ್ರತೀ (ಪಾ)

## ಅರುಣೋದಯವಿದ್ಧವಾದ ಏಕಾದಶಿಯು ಸಂದಿಗ್ಧೈಕಾದಶಿ

**ಉದಯಾತ್ ಪ್ರಾಕ್ ತ್ರಿಘಟಿಕಾವ್ಯಾಪಿನ್ಯೈಕಾದಶೀ ಯದಾ ।**
**[೧]ಸಂದಿಗ್ಧೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ ॥ ೧೩೫ ॥**

**ಅ:** ಸೂರ್ಯೋದಯಕ್ಕಿಂತ ಮುಂಚಿನ ಮೂರುಘಳಿಗೆಗಳ ಕಾಲದಲ್ಲಿ ಏಕಾದಶಿ ಇದ್ದಲ್ಲಿ ಅದನ್ನು ಸಂದಿಗ್ಧೈಕಾದಶೀ ಎನ್ನುವರು; ಧರ್ಮಾರ್ಥಗಳನ್ನು ಬಯಸುವವರು ಅಂದು ಉಪವಾಸ ಮಾಡಕೂಡದು.

**ವಿ:** ಇಲ್ಲಿ **ತ್ರಿಘಟಿಕಾವ್ಯಾಪಿನೀ** ಎಂದರೆ ಸೂರ್ಯೋದಯದ ಮುಂಚಿನ ಮೂರು ಗಳಿಗೆಗಳಲ್ಲಿ ಏಕಾದಶೀತಿಥಿ ಇದ್ದು ಅದರ ಮುಂಚಿನ ಗಳಿಗೆಯಲ್ಲಿ ದಶಮಿತಿಥಿ ಇದ್ದರೆ ಅದು ಸಂದಿಗ್ಧೈಕಾದಶೀ ಎನ್ನಿಸುವುದು. ಮೊದಲ ಒಂದು ಗಳಿಗೆ ದಶಮಿ ಸಂಪರ್ಕವಿರುವುದರಿಂದ ಅದು ಉಪವಾಸಕ್ಕೆ ನಿಷಿದ್ಧ; ಅದರಿಂದಾಗಿ ಪುಣ್ಯ ಹಾಗೂ ಸಂಪತ್ತು ನಾಶವಾಗುವುದು ಎಂದರ್ಥ.

★★

## ಏಕಾದಶಿಯು ವಿದ್ಧವಾದಾಗ ದ್ವಾದಶಿಯ ಉಪವಾಸ ನೂರಾರು ಯಜ್ಞಗಳ ಪುಣ್ಯಕ್ಕೆ ಸಮಾನ

**ಪುತ್ರಪೌತ್ರವಿವೃದ್ಧ್ಯರ್ಥಂ[೨] ದ್ವಾದಶ್ಯಾಮುಪವಾಸನಮ್ ।**
**ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಮ್ ॥ ೧೩೬ ॥**

**ಅ:** ಅಂದು ಪುತ್ರಪೌತ್ರರ ಅಭಿವೃದ್ಧಿಗೋಸ್ಕರವಾಗಿ ದ್ವಾದಶಿಯಂದೇ ಉಪವಾಸ ಆಚರಿಸಬೇಕು; ತ್ರಯೋದಶಿಯಂದು ಪಾರಣ ಮಾಡಬೇಕು; ಅದು ನೂರು ಅಶ್ವಮೇಧಯಾಗಗಳ ಪುಣ್ಯಕ್ಕೆ ಸಮ.

**ವಿ:** ೧. ಏಕಾದಶಿಯು ಹೀಗೆ ವಿದ್ಧವಾಗಿ ಸಂದಿಗ್ಧೈಕಾದಶೀ ಎನ್ನಿಸಿದಾಗ ದ್ವಾದಶಿಯಂದು ಉಪವಾಸ ತ್ರಯೋದಶಿಯಂದು ಪಾರಣೆ ಕರ್ತವ್ಯ ಎಂದರ್ಥ; ಹಾಗೆ ಮಾಡುವುದು ಪುತ್ರಪೌತ್ರಾದಿಗಳ ಅಭಿವೃದ್ಧಿಗೂ ಸಾಧನ ಎಂಬುದು ವಿಶೇಷ.

೨. ಇಲ್ಲಿ '**ಕ್ರತುಶತಂ ಪುಣ್ಯಂ**' ಎಂಬುದಕ್ಕೆ ನೂರು ಅಶ್ವಮೇಧಯಾಗಗಳ ಎಂದರ್ಥ. ಕ್ರತು ಎಂಬುದು ಯಜ್ಞಸಾಮಾನ್ಯವಾಚಕವಾದರೂ **ಅಶ್ವಮೇಧಃ ಕ್ರತುಃ ಶ್ರೇಷ್ಠಃ** ಎಂಬ ಮಾತಿನಿಂದ ಅಶ್ವಮೇಧಯಾಗವೇ ಇಲ್ಲಿ ಕ್ರತುಶಬ್ದದಿಂದ ವಾಚ್ಯ. ಎಂದು ತಿಳಿಯಬೇಕು.

---

೧. ಸಂಕೀರ್ಣೈಕಾದಶೀ............. ಧರ್ಮಾರ್ಥನಾಶನೀ( ಪಾ.)

೨. ಪುತ್ರರಾಜ್ಯವಿವೃದ್ಧ್ಯರ್ಥಮ್ ( ಪಾ.)

೩. ಇದರಿಂದ ವಿದ್ಧೈಕಾದಶಿಯನ್ನು ತೊರೆದು ದ್ವಾದಶಿಯಂದು ಉಪವಾಸ ಮಾಡುವ ಪ್ರಸಂಗ ಒದಗುವುದು ಒಂದು ಪರ್ವಕಾಲದಂತೆ ಶ್ರೇಷ್ಠ ಎಂಬ ವಿಶೇಷಾಂಶ ಸೂಚಿತ.

★★

## ಸಂಕೀರ್ಣೈಕಾದಶಿಯು ಸಹ ಉಪವಾಸಕ್ಕೆ ನಿಷಿದ್ಧ

**ಉದಯಾತ್ ಪ್ರಾಗ್ ದ್ವಿಘಟಿಕಾ ವ್ಯಾಪಿನ್ಯೈಕಾದಶೀ ಯದಾ ।**
**ಸಂಕೀರ್ಣೈಕಾದಶೀ ನಾಮ ವರ್ಜ್ಯಾ ಧರ್ಮಾರ್ಥಕಾಂಕ್ಷಿಭಿಃ ॥ ೧೩೭ ॥**

ಅ: ಸೂರ್ಯೋದಯಕ್ಕಿಂತ ಮುಂಚೆ ಎರಡು ಘಳಿಗೆಗಳ ಕಾಲ ಏಕಾದಶಿಯು ಇದ್ದಲ್ಲಿ ಅದು ಸಂಕೀರ್ಣೈಕಾದಶೀ ಎನ್ನಿಸುವುದು; ಧರ್ಮ ಅರ್ಥಗಳನ್ನು ಬಯಸುವವರು ಅದನ್ನು ತೊರೆಯಬೇಕು.

★★

## ಏಕಾದಶಿಯು ವಿದ್ಧವಾದಾಗ ದ್ವಾದಶಿಯಂದು ಉಪವಾಸ ಅಭ್ಯುದಯಹೇತು

**ಪುತ್ರರಾಜ್ಯವಿವೃದ್ಧ್ಯರ್ಥಂ ದ್ವಾದಶ್ಯಾಮುಪವಾಸನಮ್ ।**
**ತತ್ರ ಕ್ರತುಶತಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಮ್ ॥ ೧೩೮ ॥**

ಅ: ಪುತ್ರರಾಜ್ಯಗಳ ಅಭಿವೃದ್ಧಿಗೋಸ್ಕರ ಆಗಲೂ ಸಹ ದ್ವಾದಶಿಯಂದೇ ಉಪವಾಸ ತ್ರಯೋದಶಿಯಂದೇ ಪಾರಣೆ ಕರ್ತವ್ಯ; ಅದು ನೂರು ಅಶ್ವಮೇಧ-ಯಾಗಗಳ ಪುಣ್ಯಕ್ಕೆ ಸಮ.

ವಿ: ೧. ಸಂದಿಗ್ಧೈಕಾದಶಿಯಂತೆ ಸಂಕೀರ್ಣೈಕಾದಶಿಯೂ ಸಹ ಉಪವಾಸಕ್ಕೆ ನಿಷಿದ್ಧ ಎಂದರ್ಥ.

೨. ಕ್ರತು ಎಂದರೆ ಹಿಂದೆ ಹೇಳಿದಂತೆ ಅಶ್ವಮೇಧಾದಿಶ್ರೇಷ್ಠಯಾಗಗಳು ಎಂದರ್ಥ.

★★

## ಗಾಂಧಾರಿಯ ನೂರುಮಕ್ಕಳು ಸಾಯಲು ಕಾರಣ

**ದಶಮೀಶೇಷಸಂಯುಕ್ತಾ ಗಾಂಧಾರ್ಯಾ ಸಮುಪೋಷಿತಾ ।**
**ತಸ್ಯಾಃ ಪುತ್ರಶತಂ ನಷ್ಟಂ ತಸ್ಮಾತ್ ತಾಂ ಪರಿವರ್ಜಯೇತ್ ॥ ೧೩೯ ॥**

ಅ: ಗಾಂಧಾರಿಯು (ಒಮ್ಮೆ) ದಶಮೀಶೇಷದಿಂದ ಕೂಡಿದ್ದ ಏಕಾದಶಿಯಂದು ಉಪವಾಸವನ್ನು ಆಚರಿಸಿದಳು; ಆದರಿಂದಾಗಿ ಅವಳ ನೂರು ಪುತ್ರರೂ ನಾಶಹೊಂದಿದರು. ಆದ್ದರಿಂದ ಅಂದು ಉಪವಾಸವನ್ನು ಮಾಡಕೂಡದು.

ವಿ: ೧. ದಶಮೀವಿದ್ಧ ಏಕಾದಶಿಯಂದು ಉಪವಾಸ ಪುತ್ರನಾಶಕ್ಕೆ ಕಾರಣ ಎಂಬ ವಿಶೇಷಾಂಶ ಇಲ್ಲಿದೆ.

೨. ಗಾಂಧಾರಿಯಂತಹ ಉತ್ತಮ ಸ್ತ್ರೀಯು ಹಾಗೆ ನಿಷಿದ್ಧವಾದ ಏಕಾದಶಿಯಂದು ಉಪವಾಸ ಮಾಡಿದ್ದರಿಂದ ಅವಳ ಪುತ್ರರೆಲ್ಲರೂ ನಾಶ ಹೊಂದಿದರು ಎಂಬ ವಿಶೇಷ ವಿವರ ಇಲ್ಲಿದೆ. ಇಲ್ಲಿಯ ಪುತ್ರಶಬ್ದದಿಂದ ಉಪಲಕ್ಷಣಯಾ ಪುತ್ರಿಯಾದ ದುಶ್ಶಲೆಯೂ ಗ್ರಾಹ್ಯ. ಅವಳಪತಿಯಾದ ಜಯದ್ರಥನು ಹತನಾದ್ದರಿಂದ ಅವಳೂ ಹತಪ್ರಾಯಳೇ. ಹೀಗೆ ಗಾಂಧಾರಿಯ ವಂಶ ಕೊನೆಗೆ ನಿರ್ವಂಶವೇ ಆಯಿತು.

೩. ವಿದ್ಧೈಕಾದಶಿಯಂದು ಉಪವಾಸ ಮಾಡದಿರುವುದು ಪುತ್ರಪೌತ್ರಾದಿ ಅಭಿವೃದ್ಧಿಗೆ ಸಾಧನವಾದರೆ, ಉಪವಾಸ ಮಾಡುವುದು ಪುತ್ರಾದಿಗಳಿಗೆ ನಾಶಕರ ಎಂದರ್ಥ. ಇಲ್ಲಿ ನಾಶ ಎಂದರೆ ಮರಣ, ರೋಗಾದ್ಯುಪದ್ರವ, ದಾರಿದ್ರ್ಯ ಮೊದಲಾದವುಗಳು ಎಂದರ್ಥ.

೪. ಗಾಂಧಾರಿಯ ಅನರ್ಥಕ್ಕೆ ಹೀಗೆ ಅವಳು ತಪ್ಪಾಗಿ ಉಪವಾಸವನ್ನು ಆಚರಿಸಿದ್ದು ಕಾರಣ ಎಂದು ತಿಳಿಸುವ ಈ ಶ್ಲೋಕ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಪೂರಕವಾಗಿರುವುದು ಗಮನಾರ್ಹ.

೫. ದುರ್ಯೋಧನಾದಿಗಳ ನಾಶಕ್ಕೆ ಸ್ವರೂಪತಃ ಅವರು ಅಯೋಗ್ಯರಾಗಿದ್ದದ್ದೂ ಮಹಾಪಾತಕಿಗಳಾಗಿದ್ದದ್ದೂ ಮುಖ್ಯಕಾರಣ; ಅಂತಹವರನ್ನು ಮಕ್ಕಳನ್ನಾಗಿ ಪಡೆಯಲು ಗಾಂಧಾರಿಗೆ ಇಂತಹ ಪಾಪ ಕಾರಣವಾಯಿತು. ಎಂದು ತಿಳಿಯಬೇಕು.

೬. ಕೌರವರ ವಿನಾಶಕ್ಕೆ ಅನೇಕ ಕಾರಣಗಳು; ಅದರಲ್ಲಿ ಇದೂ ಒಂದು ಎಂದು ತಿಳಿಯಬೇಕು: **'ನಹಿ ಏಕಸ್ಯ ಏಕಮೇವ ಕಾರಣಮ್'**(ಕಥಾಕ್ಷಣ ಟೀಕಾ).

೭. ತಪ್ಪಾಗಿ ಏಕಾದಶ್ಯುಪವಾಸ ಆಚರಿಸಿದ್ದು ಗಾಂಧಾರಿಗೆ ಪುತ್ರನಾಶಕ್ಕೆ ಕಾರಣವಾಯಿತು; ಏಕಾದಶಿಯನ್ನು ಸರ್ವಥಾ ಆಚರಿಸದ ಪಾತಕವಂತೂ ಸರ್ವನಾಶಕ್ಕೇ ಕಾರಣ ಎಂಬ ಅರ್ಥವು ಇಲ್ಲಿ ಸೂಚಿತ ಎಂದು ತಿಳಿಯಬೇಕು.

## ವೇಧ ಅತ್ಯಲ್ಪವೇ ಆಗಿದ್ದರೂ ಏಕಾದಶಿಯು ತ್ಯಾಜ್ಯ

**ಅಪೀಷದ್ದಶಮೀವಿದ್ಧಾ ತದಾ ತಾಂ ಪರಿವರ್ಜಯೇತ್[೧] ।**
**ಸುರಾಬಿಂದುಸಮಾಯುಕ್ತಾಂ ಪ್ರವದಂತಿ ಮನೀಷಿಣಃ ॥ ೧೪೦ ॥**

**ಅ:** ದಶಮಿಯ ಸಂಪರ್ಕ ಸ್ವಲ್ಪವೇ ಇದ್ದರೂ ಆ ಏಕಾದಶಿಯನ್ನು ಪರಿತ್ಯಾಗ ಮಾಡಬೇಕು. ಅದು ಸುರೆಯ ಬಿಂದುವಿನಿಂದ ಕೂಡಿದ ಅಮೃತದಂತೆ ಎಂದು ಜ್ಞಾನಿಗಳು ಹೇಳುವರು.

---

೧. ನಾರದೀಯೇ - ಉತ್ತರಭಾಗ (೨/೨೯)

ವಿ: ೧. ಇದು ೧೨೫ನೇ ಶ್ಲೋಕದ ವಿವರಣೆಯಂತಿರುವುದು ಗಮನಾರ್ಹ. ಬಿಂದುಮಾತ್ರ ಸುರೆ ಅಪಾರವಾದ ಅಮೃತವನ್ನು ಕಲುಷಿತಗೊಳಿಸುವಂತೆ ದಶಮೀ ತಿಥಿಯ ಅತ್ಯಲ್ಪಸಂಪರ್ಕವೂ ಸಹ ಏಕಾದಶೀತಿಥಿಯನ್ನು ಉಪವಾಸಕ್ಕೆ ಅನರ್ಹವಾಗಿಸುವುದು ಎಂದು ಭಾವ.

೨. ಇದರಿಂದ ಒಂದು ಬಿಂದುವಿನಷ್ಟು ಸುರೆಯನ್ನು ಕುಡಿಯುವುದೂ ಸಹ ಮಹಾಪಾತಕ ಎಂಬ ಭಾವವೂ ಸೂಚಿತ.

## ವಿವಾದವಿದ್ದಾಗ ದ್ವಾದಶಿಯಂದೇ ಉಪವಾಸ

**[೧]ಬಹ್ವಾಗಮವಿರೋಧೇಷು ಬ್ರಾಹ್ಮಣೇಷು ವಿವಾದಿಷು ।**
**ಉಪೋಷ್ಯಾ ದ್ವಾದಶೀ ತತ್ರ[೨] ತ್ರಯೋದಶ್ಯಾಂ ತು ಪಾರಣಮ್ ॥ ೧೪೧ ॥**

ಅ: ಬಹುಶಾಸ್ತ್ರಗಳಲ್ಲಿ ಪರಸ್ಪರ ವಿರೋಧ ಬಂದಾಗ, ಬ್ರಾಹ್ಮಣರಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ ದ್ವಾದಶಿಯಂದು ಉಪವಾಸವನ್ನು ಆಚರಿಸಿ, ತ್ರಯೋದಶಿಯಂದು ಪಾರಣೆ ಮಾಡಬೇಕು.

ವಿ: ೧. ದಶಮೀವಿದ್ಧವಾದ ಏಕಾದಶಿಯ ಉಪವಾಸವು ಹೀಗೆ ಅತ್ಯಂತ ಅನರ್ಥಕರ ಎಂದು ನಿರೂಪಿಸಿದ ಮೇಲೆ 'ಏಕಾದಶಿಯ ನಿರ್ಣಯ ಹೇಗೆ?' ಎಂಬ ಪ್ರಶ್ನೆಗೆ ಉತ್ತರ ಇಲ್ಲಿದೆ.

೨. ಏಕಾದಶಿಯು ಶುದ್ಧವಾಗಿರಬೇಕು ಎಂಬುದು ನಿಯಮ. ಕೆಲವೊಮ್ಮೆ ಶಾಸ್ತ್ರಗಳಲ್ಲೇ ಭಿನ್ನಾಭಿಪ್ರಾಯ ವ್ಯಕ್ತವಾದಾಗ ಜ್ಯೋತಿಃಶಾಸ್ತ್ರಜ್ಞರಾದ ವಿಪ್ರರಲ್ಲೇ ಒಮ್ಮತ ಮೂಡದಾದಾಗ ವೇಧನಿರ್ಣಯ ಅಸಾಧ್ಯವೆನ್ನಿಸುವುದುಂಟು. ಅಂತಹ ಸಮಯದಲ್ಲಿ ವೇಧವಿದೆ ಎಂದು ಭಾವಿಸಿ, ಅಂದು ಏಕಾದಶಿ ಉಪವಾಸವನ್ನಾಚರಿಸದೇ ದ್ವಾದಶಿಯಂದೇ

---

೧. ಬಹ್ವಾಗಮೈಃ ಜ್ಯೋತಿಃಶಾಸ್ತ್ರೈಃ ವಿರುದ್ಧೇಷು ಬ್ರಾಹ್ಮಣೇಷು ನಿರ್ಣಯಾದರ್ಶನೇನ ವಿವಾದಿಷು -(ಉಪೇ ); ಬಹವೋ ಆಗಮಾಃ ಏಷು ತೇ ಬಹ್ವಾಗಮಾಃ ಬಹುಶಾಸ್ತ್ರವಿಚಾರಜ್ಞಾಃ ತೇಷು ವಿರೋಧೇಷು ವಿರೋಧೇನ ವದತ್ಸು। ಬ್ರಾಹ್ಮಣೇಷು ಗಣಕಬ್ರಾಹ್ಮಣೇಷು ವಿವಾದಿಷು ಸತ್ಸು। ತತ್ರ ತಸ್ಮಿನ್ ಸಮಯೇ ಸೂರ್ಯಸಿದ್ಧಾಂತೇನ ತಿಥಿಂ ಜ್ಞಾತ್ವಾ ಆರ್ಯಭಟಂ ಸಂಯೋಜ್ಯ ವಿದ್ಧಾಂ ಪರಿತ್ಯಜ್ಯ ದ್ವಾದಶೀ ಉಪೋಷ್ಯಾ ಭವತಿ। ತ್ರಯೋದಶ್ಯಾಂ ತು ಪಾರಣಂ ಕುರ್ಯಾದಿತಿ ॥ (ಕೋ); ನಾನಾವಿಧಜ್ಯೋತಿಃಶಾಸ್ತ್ರವಿರೋಧೇನ ನಾನಾವಿಧಸ್ಮೃತಿವಿರೋಧೇನ ವಾ ವ್ರತನಿಷ್ಠಬ್ರಾಹ್ಮಣೇಷು ವಿವಾದಿಷು ಸತ್ಸು ಏಕಾದಶೀವ್ರತಂ ಕಥಂ ಕಾರ್ಯಮಿತ್ಯತ್ರ ದ್ವಾದಶ್ಯುಪವಾಸಃ ಕಾರ್ಯ ಇತ್ಯಾಹ - ಬಹ್ವಾಗಮೇತಿ ॥ ಬಹೂನಾಂ ನಾನಾವಿಧಾನಾಂ ಆಗಮಾನಾಂ ಸ್ಮೃತೀನಾಂ ವಿರೋಧೇನ ಪರಸ್ಪರಂ ವಿರೋಧೇನ ಬ್ರಾಹ್ಮಣೇಷು ಉಪವಾಸಪರೇಷು ಉಪವಾಸಃ ಕರ್ತವ್ಯ ನ ಕರ್ತವ್ಯ ಇತಿ ವಿವಾದಂ ಕುರ್ವತ್ಸು ತದಾ ದ್ವಾದಶೀ ವ್ರತಸ್ಥೈಃ ಸರ್ವೈರುಪೋಷ್ಯಾ ॥ (ಸ್ಮೃ.ಕೃ)

೨. ಪುಣ್ಯಾ ( ಪಾ.) - ನಾರದೀಯಪುರಾಣ - ಉತ್ತರಭಾಗ (೨/೩೦)

ಉಪವಾಸವನ್ನಾಚರಿಸಿ ತ್ರಯೋದಶಿಯಂದು ಪಾರಣೆ ಮಾಡಬೇಕು ಎಂಬುದು ಇಲ್ಲಿಯ ಸಂದೇಶ :

**ಬಹೂನಾಂ ದಶಮೀವಿಘಟಿಕಾಗಣಿತಶಾಸ್ತ್ರಾಣಾಂ ವಿರೋಧೇಷು ಸತ್ಸಂಪ್ರದಾಯ-ಪ್ರವರ್ತಕೇಷು ಬ್ರಾಹ್ಮಣೇಷು ವೇಧವಿಷಯಂ ವಿವಾದಿಷು ಸತ್ಸು॥ (ವಾ)**

**ಬಹುವಾಕ್ಯವಿರೋಧೇನ ಸಂದೇಹೋ ಜಾಯತೇ ಯದಾ ।**
**ಉಪೋಷ್ಯಾ ದ್ವಾದಶೀ ಪುಣ್ಯಾ ತ್ರಯೋದಶ್ಯಾಂ ತು ಪಾರಣಮ್ ॥**

**ಇತಿ ಸ್ಕಾಂದೇ (ಉ)**

**ಬಹುವಾಕ್ಯವಿರೋಧೇನ ಸಂದೇಹೋ ಜಾಯತೇ ಸದಾ ।**
**ದ್ವಾದಶೀ ತು ತದಾ ಗ್ರಾಹ್ಯಾ ತ್ರಯೋದಶ್ಯಾಂ ತು ಪಾರಣಮ್ ॥**

**- ಇತಿ ಕಾಲಹೇಮಾದ್ರೌ ।**

**ಸಂದಿಗ್ಧೇಷು ಚ ವಾಕ್ಯೇಷು ದ್ವಾದಶ್ಯಾಂ ಸಮುಪೋಷಯೇತ್ ।**
**ವಿವಾದೇಷು ಚ ಸರ್ವೇಷು ದ್ವಾದಶ್ಯಾಂ ಸಮುಪೋಷಣಮ್ ॥**
**ಪಾರಣಂ ಚ ತ್ರಯೋದಶ್ಯಾಮಾಜ್ಞೇಯಂ ಮಾಮಕೀ ಮುನೇ ॥**

**- ಇತಿ ಮಾರ್ಕಂಡೇಯೇ ।**

೩. ಜ್ಞಾನಿಗಳಲ್ಲಿ ದಶಮೀವೇಧದ ಬಗ್ಗೆ ಗೊಂದಲ ಹುಟ್ಟಿದಾಗ, ವೇಧವು ಸಂಭಾವಿತ ಎಂಬ ಶಂಕೆ ಒದಗಿದಾಗಲೂ ಅಂದು ಏಕಾದಶೀ ಉಪವಾಸವನ್ನು ತೊರೆದು ದ್ವಾದಶಿಯಂದೇ ಉಪವಾಸ ವಿಹಿತ ಎಂಬ ಅತ್ಯಂತ ಮುಖ್ಯವಾದ ಪ್ರಮೇಯ ಇಲ್ಲಿ ನಿರೂಪಿತವಾಗಿದೆ.

೪. ದಶಮಿವೇಧದ ಸಂದೇಹವೂ ಸಹ ಏಕಾದಶಿಯ ಉಪವಾಸಕ್ಕೆ ಪ್ರತಿಬಂಧಕ ಎಂಬುದು ಇಲ್ಲಿಯ ಸೂಕ್ಷ್ಮಪ್ರಮೇಯ. ವೇಧನಿಶ್ಚಿತವಾಗದೆ ಸಂದಿಗ್ಧವಾದಾಗಲೂ ಅದನ್ನು ತೊರೆಯುವುದೇ ಸುರಕ್ಷಿತಮಾರ್ಗ ಎಂಬುದು ಇಲ್ಲಿಯ ಆಶಯ.

೫. ಇಲ್ಲಿಯ ಬ್ರಾಹ್ಮಣರಲ್ಲಿನ ವಿವಾದ ಎಂಬ ಮಾತಿಗೆ ದೈವಜ್ಞರಾದ ಬ್ರಾಹ್ಮಣರಲ್ಲಿನ ವಿವಾದ ಎಂಬ ಅರ್ಥವು ವಿವಕ್ಷಿತ. ಅದರಂತೆ ಸೂರ್ಯಸಿದ್ಧಾಂತ, ಆರ್ಯಭಟ, ದೃಗ್ಗಣಿತ ಮೊದಲಾದ ವಿಭಿನ್ನ ಬಗೆಯ ಗಣಿತಪ್ರಕಾರಗಳಲ್ಲಿ ಯಾವ ಪ್ರಕಾರದಿಂದಾದರೂ ಸರಿಯೇ ವೇಧ ಪ್ರಸಕ್ತವೆಂದಾದಲ್ಲಿ ಏಕಾದಶಿಯಂದು ಉಪವಾಸ ಮಾಡದೇ ಮಾರನೆಯ ದಿನವೇ ಉಪವಾಸವನ್ನು ಆಚರಿಸಬೇಕು ಎಂಬ ಭಾವವನ್ನೂ ಸಹ ಗುರುತಿಸಬಹುದು. ಇದರಿಂದ ಇತ್ತೀಚಿನ ದಿನಗಳಲ್ಲಿ ಹುಟ್ಟಿರುವ ಗೊಂದಲಕ್ಕೆ ಸಹ ಸೂಕ್ತ ಉತ್ತರ ದೊರಕಿದಂತಾಗುವುದು.

೬. ಸಾಮಾನ್ಯವಾಗಿ ಆರ್ಯಮಾನ ಅಧಿಕಸಿದ್ಧಾಂತವೆಂದು ಗೃಹೀತವಾಗಿದ್ದು ಪ್ರಾಚೀನವ್ಯಾಖ್ಯಾನಕಾರರೆಲ್ಲಾ ಆರ್ಯಮಾನದ ರೀತಿಯಲ್ಲೇ ವೇಧನಿರ್ಣಯ ವಿಹಿತ ಎಂದು ನಿರೂಪಿಸಿರುವರು. ಆದರೆ ಇತ್ತೀಚಿನ ದಿನಗಳಲ್ಲಿ ಆರ್ಯಮಾನ ಪುನಃ

ಸಂಸ್ಕಾರಹೊಂದಿಲ್ಲವಾದ್ದರಿಂದ ಅದನ್ನೇ ಅಧಿಕಸಿದ್ಧಾಂತವೆಂದು ಒಪ್ಪುವುದು ಕಷ್ಟವೆನ್ನಿಸುತ್ತಿದೆ. ಕೆಲವೊಮ್ಮೆ ದೃಗ್ಗಣಿತಪಂಚಾಂಗದಂತೆ ವೇಧ ಒದಗುವುದು ಇದಕ್ಕೆ ನಿದರ್ಶನ. ಆರ್ಯಮಾನದ ಗಣಿತವೂ ಸಹ ಎಲ್ಲ ಮತಗಳಿಗೂ ಏಕ ರೂಪವಾಗಿಲ್ಲ ಎಂಬುದು ಮತ್ತೊಂದು ಗೊಂದಲ. ಪುನಃ ಸಂಸ್ಕೃತವಾದಲ್ಲಿ ಆರ್ಯಮಾನದ ರೀತಿಯಿಂದಲೇ ವೇಧನಿರ್ಣಯ ಸೂಕ್ತ ಎಂಬಲ್ಲಿ ಎರಡು ಮಾತಿಲ್ಲ. ಆದರೆ ಅದು ಈಗ ನಡೆದಿಲ್ಲವಾದ್ದರಿಂದ ಸಹಜವಾಗಿಯೇ ವೇಧನಿರ್ಣಯ ಆರ್ಯಮಾನದಿಂದಲೇ ಎಂಬುದನ್ನು ಕೆಲವರು ಒಪ್ಪುವುದಿಲ್ಲ. ಈ ಹಿನ್ನೆಲೆಯಲ್ಲಿ ಶ್ರೀಮದಾಚಾರ್ಯರು ಇಲ್ಲಿ ನೀಡಿರುವ ನಿರ್ಣಯ ಸಾರ್ವಕಾಲಿಕವಾಗಿದ್ದು ಯಾವುದೇ ಮಾನದ ರೀತಿಯಲ್ಲಿ ವೇಧ ಒದಗಿದರೂ ಅಂದು ಉಪವಾಸವು ನಿಷಿದ್ಧ ಎಂಬ ಪಕ್ಷವೇ ಸುರಕ್ಷಿತ ಎನ್ನಿಸುವುದು.

೭. ಶ್ರೀಮದಾಚಾರ್ಯರು ಏಕಾದಶಿಯ ಬಗ್ಗೆ ಖಚಿತವಾಗಿ ನಿರ್ದಿಷ್ಟಮಾನವನ್ನು ಸೂಚಿಸಿ ಏತಕ್ಕೆ ನಿರ್ಣಯ ಮಾಡಲಿಲ್ಲ? ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ಅದಕ್ಕೆ ಉತ್ತರ ಹೀಗಿದೆ. ತಿಥಿಯ ಮಾನಗಳು ಯಾವುದೇ ಮಾನವನ್ನನುಸರಿಸಿದರೂ ಸಹ ಎಂದೂ ಒಂದೇ ತೆರನಾಗಿರುವುದಿಲ್ಲ. ಎಂದರೆ, ಸೂರ್ಯಚಂದ್ರರ ಗತಿಯಲ್ಲಾಗುವ ಬದಲಾವಣೆಗೆ ತಕ್ಕಂತೆ ತಿಥಿಗಳಲ್ಲಿಯೂ ಸಹ ಬದಲಾವಣೆ ಅನಿವಾರ್ಯ. ಸಾಮಾನ್ಯವಾಗಿ ನಿರ್ದಿಷ್ಟವರ್ಷಗಳಲ್ಲಿ ಒಮ್ಮೆ ಆಯಾಯ ಮಾನವನ್ನು ಪರಿಷ್ಕರಿಸಬೇಕು ಎಂಬ ವಿಚಾರದಲ್ಲಿ ಗಣಿತಜ್ಞರಲ್ಲಿ ವಿವಾದವೇ ಇಲ್ಲ; ಎಂದರೆ ಯಾವುದೇ ನಿರ್ದಿಷ್ಟಮಾನವನ್ನು ತಿಳಿಸಿದರೂ ಕಾಲಕಾಲಕ್ಕೆ ಯೋಗ್ಯಸಂಸ್ಕಾರವಾಗದಿದ್ದಲ್ಲಿ ಅದು ಸೀಮಿತ ಅವಧಿಗೆ ಮಾತ್ರ ಅನ್ವಯವಾಗುವುದೇ ಹೊರತು ಶಾಶ್ವತಪರಿಹಾರವಾಗಲಾರದು. ಅದಕ್ಕೆಂದೇ ಸಾರ್ವಕಾಲಿಕವಾದ ನಿರ್ಣಯವನ್ನು ನೀಡ ಹೊರಟ ಶ್ರೀಮದಾಚಾರ್ಯರು ಹೀಗೆ ಅದಕ್ಕೆ ಅತ್ಯಂತ ಖಚಿತವಾದ ಪರಿಹಾರವನ್ನೇ ನೀಡಿರುವರು ಎಂದು ತಿಳಿಯಬೇಕು.

★★

## ಶ್ರವಣದ್ವಾದಶಿಯಂದು ಸಹ ಉಪವಾಸವು ಕರ್ತವ್ಯ

**ಏಕಾದಶ್ಯಾಂ ತು ವಿದ್ಧಾಯಾಂ ಸಂಪ್ರಾಪ್ತೇ ಶ್ರವಣೇ ತಥಾ ।**
**ಉಪೋಷ್ಯಾ ದ್ವಾದಶೀ ಪುಣ್ಯಾ ಪಕ್ಷಯೋರುಭಯೋರಪಿ ॥ ೧೪೨ ॥**

ಅ: ಏಕಾದಶಿಯು ವಿದ್ಧವಾದಾಗಲೂ, ಹಾಗೆಯೇ ದ್ವಾದಶಿಯಂದು ಶ್ರವಣನಕ್ಷತ್ರ ಒದಗಿದಾಗಲೂ ಉಭಯಪಕ್ಷಗಳಲ್ಲೂ ಸಹ ಪುಣ್ಯಕರವಾದ ದ್ವಾದಶಿಯಂದು ಉಪವಾಸವು ವಿಹಿತ.

ವಿ: ೧. ದಶಮೀವಿದ್ಧವಾದಾಗ ಆ ಬಾರಿ ಏಕಾದಶಿಯಂದು ಉಪವಾಸವನ್ನು ಆಚರಿಸದೇ ದ್ವಾದಶಿಯಂದು ಉಪವಾಸ ಆಚರಿಸಬೇಕು. ಅದರಂತೆ ದ್ವಾದಶಿಯಂದು ಶ್ರವಣನಕ್ಷತ್ರವಿದ್ದಲ್ಲಿ ದ್ವಾದಶಿಯಂದು ಸಹ ಉಪವಾಸ ಎಂಬುದು ಇದರ ಭಾವ.

೨. ದ್ವಾದಶಿಯಂದು ಉಪವಾಸದ ಪ್ರಸಕ್ತಿ ಈ ಎರಡು ಪ್ರಸಂಗಗಳಲ್ಲಿ ಎಂದರ್ಥ. ದಶಮೀವಿದ್ಧವಾದಾಗ ದ್ವಾದಶೀ ಉಪವಾಸದ ಆಚರಣೆ ವಿಹಿತ. ಅದರಂತೆ ದ್ವಾದಶಿಯಂದು ಶ್ರವಣನಕ್ಷತ್ರವಿದ್ದಾಗಲೂ ಉಪವಾಸ ವಿಹಿತ. ದಶಮೀ ವಿದ್ಧವಾದಾಗ ದ್ವಾದಶಿಯಂದು ಮಾತ್ರ ಉಪವಾಸ ವಿಹಿತವಾದರೆ, ದಶಮೀ ವಿದ್ಧವಾಗದೇ ದ್ವಾದಶಿಯಂದೇ ಶ್ರವಣನಕ್ಷತ್ರವಿದ್ದಾಗ ಆ ಬಾರಿ ಏಕಾದಶಿ ಉಪೋಷಣದೊಂದಿಗೆ ದ್ವಾದಶಿಯಂದೂ ಸಹ ಉಪೋಷಣ ವಿಹಿತ ಎಂಬುದು ವಿಶೇಷ; ಎಂದರೆ ಈ ಪ್ರಸಂಗದಲ್ಲಿ ಎರಡು ಉಪವಾಸಗಳ ಆಚರಣೆ ಕರ್ತವ್ಯ ಎಂದಾಗುವುದು.

೩. ದ್ವಾದಶಿಯಂದು ಶ್ರವಣನಕ್ಷತ್ರ ಯೋಗದಿಂದ ಉಪವಾಸ ವಿಹಿತವಾದಾಗ ಅಂದಿನ ಶ್ರವಣನಕ್ಷತ್ರದ ಮಾನದ ಬಗ್ಗೆ ಸಂಪ್ರದಾಯಭೇದವಿದೆ. 'ಶ್ರವಣವು ಮಧ್ಯಾಹ್ನವ್ಯಾಪಿನಿಯಾಗಿರಬೇಕು; ಅರುಣೋದಯಕಾಲದಲ್ಲಿ ಅಭಿಜಿತ್ ಸ್ಪರ್ಶರಹಿತ-ವಾಗಿರಬೇಕು' ಎಂಬುದು ಮುಖ್ಯವಿಧಿ. ಇಲ್ಲಿಯ ಮಧ್ಯಾಹ್ನ ಅಭಿಜಿತ್ ಮೊದಲಾದ-ವುಗಳ ಅರ್ಥವಿವರಣೆಯಲ್ಲಿ ಮತಭೇದವಿದೆ. ಇದರಿಂದಾಗಿ ಮಾಧ್ವಮಠಗಳಲ್ಲಿ ಉಪವಾಸದ ಆಚರಣೆಯಲ್ಲಿ ವ್ಯತ್ಯಾಸ ಕಂಡುಬರುವುದು:

**ಉತ್ತರಾಷಾಢಕಣಿಕಾ ಕಲಾ ಯಾವನ್ನ ದೃಶ್ಯತೇ ।**
**ಸಾ ಜಯಂತೀ ಪರಿತ್ಯಾಜ್ಯಾ ಶುನಾ ಸ್ಪೃಷ್ಟಂ ಹವಿರ್ಯಥಾ ।**
**ಉತ್ತರಾಷಾಢಮಿಲಿತಶ್ರವಣದ್ವಾದಶೀವ್ರತಮ್ ।**
**ಸುರಾಬಿಂದುಭಿರಾಸಿಕ್ತತೀರ್ಥವಚ್ಚೋಭಯಂ ತ್ಯಜೇತ್ ॥ (ಸಂಗ್ರಹ)**
**ದ್ವಾದಶೀಶ್ರವಣೋಪೇತಾ ಅಬಿಜಿತ್ಸ್ಪರ್ಶಸಂಯುತಾ ।**
**ಅರುಣೋದಯಕಾಲೇ ತು ನೈವೋಪೋಷ್ಯಾ ಮನೀಷಿಭಿಃ ॥ ಕೂರ್ಮವಚನ ॥**
**ಅರುಣೋದಯವೇಲಾಯಾಂ ಅಭಿಜಿತ್ಸ್ಪರ್ಶನಂ ಯದಿ ।**
**ಶ್ರೋಣಾ ಚೇತ್ಷಷ್ಟಿಘಟಿಕಾ ನೋಪೋಷ್ಯಾ ವಿಷ್ಣುತತ್ಪರೈಃ ॥**
**- ಧರ್ಮಸಂಹಿತಾ (ಕೋ)**

೪. ಇದರಂತೆ ಅತಿರಿಕ್ತದ್ವಾದಶಿಯಂದೂ ಸಹ ಉಪವಾಸವು ವಿಹಿತ ಎಂಬ ವಿಶೇಷಾಂಶ ಮುಂದೆ ಬಂದಿದೆ (ಶ್ಲೋ. ೧೬೧). ಆ ಪ್ರಸಂಗದಲ್ಲೂ ಎರಡು ಉಪವಾಸಗಳು ಎಂಬುದು ಮತ್ತೊಂದು ವಿಶೇಷ.

★★

### ದ್ವಾದಶಿಯಂದು ಸಕಾಲಕ್ಕೆ ಪಾರಣೆ ಮಹಾಪುಣ್ಯಕರ

**ಉಪರಾಗಸಹಸ್ರಾಣಿ ವ್ಯತೀಪಾತಾಯುತಾನಿ ಚ ।**
**ಅಮಾಲಕ್ಷಂ ತು ದ್ವಾದಶ್ಯಾಃ ಕಲಾಂ ನಾರ್ಹಂತಿ ಷೋಡಶೀಮ್ ॥ ೧೪೩ ॥**

**ಅ:** ಸಾವಿರಾರು ಗ್ರಹಣಗಳಾಗಲಿ, ಹತ್ತು ಸಾವಿರ ವ್ಯತೀಪಾತಗಳಾಗಲಿ, ಲಕ್ಷ ಅಮಾ-ವಾಸ್ಯೆಗಳಾಗಲಿ, ದ್ವಾದಶೀವ್ರತದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗಲಾರವು.

ವಿ ೧. ಇಲ್ಲಿ ದ್ವಾದಶೀವ್ರತ ಎಂದರೆ ಏಕಾದಶೀವ್ರತ ಎಂದೇ ಅರ್ಥ. ದಶಮೀ, ಏಕಾದಶೀ, ದ್ವಾದಶೀ ಈ ದಿನತ್ರಯಗಳು ಒಟ್ಟಾಗಿ ಏಕಾದಶೀವ್ರತ ಎನ್ನಿಸುವುವು.

೨. ದ್ವಾದಶಿಯಂದು ಸಕಾಲಕ್ಕೆ ಪಾರಣೆ ಮಾಡುವುದು ವ್ರತದ ಅಂಗ; ಅದು ಗ್ರಹಣವ್ಯತೀಪಾತಾದಿಗಳ ಪುಣ್ಯಕ್ಕಿಂತ ವಿಶೇಷವಾದ ಫಲವನ್ನು ನೀಡುವುದು ಎಂಬ ಅರ್ಥವೂ ಇಲ್ಲಿ ವಿವಕ್ಷಿತ.

೩. ಇಲ್ಲಿ ಉಪರಾಗವೆಂದರೆ ಗ್ರಹಣ ಎಂದೂ, ವ್ಯತಿಪಾತವೆಂದರೆ ಯೋಗವಿಶೇಷ ಎಂದೂ ಅರ್ಥ. ಉಪರಾಗ ವ್ಯತೀಪಾತಗಳು ಅತ್ಯಂತ ಶ್ರೇಷ್ಠಪರ್ವಕಾಲಗಳು ಎಂಬುದು ಸುಪ್ರಸಿದ್ಧ. ಆದರೆ ಏಕಾದಶಿಯು ಅವೆಲ್ಲವುಗಳಿಗಿಂತಲೂ ತುಂಬಾ ಮಿಗಿಲಾದ ಅತ್ಯಂತ ಶ್ರೇಷ್ಠವಾದ ವ್ರತ ಎಂದು ಭಾವ.

೪. ಏಕಾದಶೀವ್ರತವನ್ನು ತಪ್ಪದೆ ಆಚರಿಸಿ ಗ್ರಹಣಾದಿಗಳನ್ನು ಆಚರಿಸುವುದು ಪೂರ್ಣಫಲಕ್ಕೆ ಸಾಧನ ಎಂದು ಸಹ ತಿಳಿಯಬೇಕು.

೫. ದ್ವಾದಶಿಯಂದು ಸಕಾಲಕ್ಕೆ ಪಾರಣೆ ಮಾಡುವುದು ಅತ್ಯಂತ ಅಗತ್ಯ ಎಂಬುದು ಇಲ್ಲಿಯ ಒಟ್ಟು ಭಾವ.

★★

## ಏಕಾದಶಿಯು ವಿದ್ಧವಾದಾಗ ದ್ವಾದಶೀ ಉಪವಾಸವು ಅತ್ಯಂತಗ್ರಾಹ್ಯ

**ಶುದ್ಧಾಽಪಿ ದ್ವಾದಶೀ ಗ್ರಾಹ್ಯಾ ಪರತೋ ದ್ವಾದಶೀ ನ ಚೇತ್ ।**
**ವಿಷಂ ತು ದಶಮೀ [೧]ಜ್ಞೇಯಾಽಮೃತಂ ಚೈಕಾದಶೀ ತಿಥಿಃ ।**
**ವಿಷಪ್ರಧಾನಾ ವರ್ಜ್ಯಾ ಸಾಽಮೃತಾ ಗ್ರಾಹ್ಯಾ [೨]ಪ್ರಯತ್ನತಃ ॥ ೧೪೪ ॥**

**ಅ:** ಮಾರನೆಯ ದಿನ ದ್ವಾದಶಿಯು ಇಲ್ಲವಾದಲ್ಲಿ ಶುದ್ಧವಾದ ದ್ವಾದಶಿಯೇ ಗ್ರಾಹ್ಯ. ದಶಮಿಯನ್ನು ವಿಷವೆಂದು ತಿಳಿಯಬೇಕು. ಏಕಾದಶೀತಿಥಿಯು ಅಮೃತ; ವಿಷಪ್ರಧಾನವಾದ ಅದನ್ನು ತ್ಯಜಿಸಿ ಅಮೃತವಾದ ಏಕಾದಶೀತಿಥಿಯನ್ನು ಪ್ರಯತ್ನ ಪೂರ್ವಕವಾಗಿ ಆಚರಿಸಬೇಕು.

ವಿ : ದಶಮ್ಯಾದಿದಿನತ್ರಯದಲ್ಲಿ ದಶಮಿಯು ವಿಷ, ಉಳಿದೆರಡು ಅಮೃತ. ವಿಷ-ಮಿಶ್ರಿತವಾದ ಅಮೃತವು ಅಗ್ರಾಹ್ಯವಾಗುವಂತೆ ದಶಮಿವಿದ್ಧವಾದ ಏಕಾದಶಿಯು ಉಪೋಷಣೆಗೆ ಅನರ್ಹ. ಆದರೆ ಏಕಾದಶಿಗೆ ದ್ವಾದಶಿಯ ಸಂಪರ್ಕವಿದ್ದಲ್ಲಿ ಎರಡೂ ಅಮೃತವೇ ಆದ್ದರಿಂದ ಆ ಏಕಾದಶಿಯ ಉಪೋಷಣೆಗೆ ಯಾವುದೇ ಬಾಧಕವಿಲ್ಲ ಎಂದರ್ಥ.

---

೧. ಜ್ಞೇಯಾಽಮೃತಾ ( ಪಾ.);
೨. ಪ್ರಧಾನತಃ ( ಪಾ.)

## ಏಕಾದಶಿಯು ದಶಮೀವಿದ್ಧವಾದಾಗ ದ್ವಾದಶಿಯಂದು ಭೋಜನ ನಿಷಿದ್ಧ

**ದ್ವಾದಶ್ಯಾಂ ಭೋಜನಂ ಚೈವ ವಿದ್ಧಾಯಾಂ ಹರ್ಯುಪೋಷಣಮ್ ।**
**ಯಃ ಕುರ್ಯಾನ್ಮಂದಬುದ್ಧಿತ್ವಾನ್ನಿರಯಂ ಸೋಽಧಿಗಚ್ಛತಿ ॥ ೧೪೫ ॥**

**ಅ**: ದಶಮೀವಿದ್ಧವಾದ ಏಕಾದಶಿಯಂದು ಉಪವಾಸವನ್ನು ಆಚರಿಸಿ ದ್ವಾದಶಿ-ಯಂದು ಭೋಜನವನ್ನು ಮಾಡುವವನು ಮಂದಬುದ್ಧಿಯವನು; ಅವನು ನರಕ ಹೊಂದುವನು.

ವಿ: ದಶಮಿಯಂದು ಏಕಭುಕ್ತವನ್ನಾಚರಿಸಿ ಏಕಾದಶಿಯಂದು ಉಪೋಷಣೆ ಮಾಡಿ ದ್ವಾದಶಿಯಂದು ಪಾರಣೆ ಮಾಡಬೇಕಾದದ್ದು ಸಾಮಾನ್ಯವಾಗಿ ದಿನತ್ರಯದ ವಿಧಿ. ಆದರೆ, ಏಕಾದಶಿಯು ದಶಮೀವಿದ್ಧವಾದಾಗ ಮಾತ್ರ ಆ ಬಾರಿ ಏಕಾದಶಿಯಂದು ಉಪವಾಸವನ್ನು ಮಾಡದೇ ದ್ವಾದಶಿಯಂದು ಉಪವಾಸವನ್ನು ಮಾಡಿ ತ್ರಯೋದಶಿಯಂದು ಪಾರಣೆ ಮಾಡಬೇಕು ಎಂಬುದು ವಿಶೇಷ. ಇದನ್ನು ಗಮನಿಸದೇ ಏಕಾದಶಿಯು ದಶಮೀವಿದ್ಧವಾದಾಗಲೂ ಅಂದೇ ಉಪೋಷಣೆ ಮಾಡಿ ದ್ವಾದಶಿಯಂದು ಪಾರಣೆ ಮಾಡುವುದು ನರಕಕ್ಕೆ ಕಾರಣವಾಗುವ ಮಹಾಪಾತಕ ಎಂದು ಭಾವ.

★★

## ವಿದ್ಧೈಕಾದಶಿಯಂದು ಉಪವಾಸ ನಿಷಿದ್ಧ

**ಯಾನಿ ಕಾನಿ ಚ ವಾಕ್ಯಾನಿ [೧]ವಿದ್ಧೋಪಾಷಾಪರಾಣಿ ತು ।**
**[೨]ಧನದಾರ್ಚಾಪರಾಣಿ ಸ್ಯುರ್ವೈಷ್ಣವೀ ನ ದಶಾಯುತಾ ॥ ೧೪೬ ॥**

**ಅ**: ವಿದ್ಧವಾದ ಏಕಾದಶಿಯಂದು ಉಪೋಷಣೆ ಮಾಡಬೇಕು ಎಂದು ವಿಧಿಸುವ ವಾಕ್ಯಗಳೆಲ್ಲ ಧನ ಮೊದಲಾದವುಗಳನ್ನು ಉದ್ದೇಶಿಸಿ ವ್ರತವನ್ನು ಆಚರಿಸು-ವವರಿಗೆ ಹೇಳಿದಂತಹವುಗಳು; ವಿಷ್ಣುಭಕ್ತರು ಆಚರಿಸಬೇಕಾದ ಏಕಾದಶಿಯು ಮಾತ್ರ ದಶಮಿವಿದ್ಧವಾಗಿರಕೂಡದು.

ವಿ: ೧. ಇಲ್ಲಿ **ದಶಾಯುತಾ** ಎಂಬುದಕ್ಕೆ ದಶಮೀಯುಕ್ತವಾದ ಎಂದರ್ಥ.

★★

---

೧. ವಿದ್ಧೋಪಾಸ್ಯಾಪರಾಣಿ ತು ( ಪಾ.)
೨. ಧನದಾರ್ಚಾಪರಾಣಿ ಕಾಮಿತಧನಾದಿಪ್ರದಾರ್ಚಾವ್ರತಪರಾಣಿ । (ಸ್ಮೃ.ಕೃ)

## ವಿದ್ಧೈಕಾದಶಿಯಂದು ಉಪವಾಸ ವಿಧಿಸುವ ವಾಕ್ಯಗಳ ತಾತ್ಪರ್ಯ

**ಅಥವಾ ಮೋಹನಾರ್ಥಾಯ ಮೋಹಿನ್ಯಾ ಭಗವಾನ್ ಹರಿಃ ।**
**ಅರ್ಥಿತಃ ಕಾರಯಾಮಾಸ ವ್ಯಾಸರೂಪೀ ಜನಾರ್ದನಃ ॥ ೧೪೭ ॥**

ಅ : ಭಗವಂತನಾದ ವ್ಯಾಸರೂಪದ ಶ್ರೀಹರಿಯು ಮೋಹಿನಿಯಿಂದ ಪ್ರಾರ್ಥಿತ-ನಾಗಿ ಅದನ್ನು ಅಸುರಮೋಹನಕ್ಕಾಗಿ ಸಹ ಮಾಡಿಸಿದ.

ವಿ: ಕೆಲವೊಂದು ಪುರಾಣಗಳಲ್ಲಿ ದಶಮೀವಿದ್ಧವಾದಾಗಲೂ ಏಕಾದಶಿಯಂದೇ ಉಪವಾಸ ವಿಹಿತ ಎಂಬರ್ಥದ ಮಾತುಗಳು ಕಂಡುಬರುವುದು; ಅವಕ್ಕೆ ಅಸುರ-ಮೋಹನವೇ ತಾತ್ಪರ್ಯ ಎಂದು ಭಾವ.

★★

## ಮೋಹಕವಾಕ್ಯಗಳ ಉದ್ದೇಶ

**ಧನದಾರ್ಚಾವಿವೃದ್ಧ್ಯರ್ಥಂ ಮಹಾವಿತ್ತಲಯಸ್ಯ ಚ ।**
**ಅಸುರಾಣಾಂ ಮೋಹನಾರ್ಥಂ ಪಾಷಂಡಾನಾಂ ವಿವೃದ್ಧಯೇ ।**
**ಆತ್ಮಸ್ವರೂಪಾವಿಜ್ಞಪ್ತ್ಯೈ [1]ಸ್ವಲೋಕಾಪ್ರಾಪ್ತಯೇ ತಥಾ ॥ ೧೪೮ ॥**

ಅ: ಧನಕಾಮನೆಯಿಂದ ಉಪಾಸನೆ ಮಾಡುವವರ ಸಂಖ್ಯೆಯು ಹೆಚ್ಚಲೆಂದು, ಕೊನೆಗೆ ಅವರಿಗೆ ಮಹತ್ತರವಾದ ಧನನಾಶ ಒದಗಲೆಂದು, ಅಸುರರನ್ನು ಮೋಹಗೊಳಿಸಲೆಂದು, ಪಾಷಂಡಿಗಳ ಸಂಖ್ಯೆಯನ್ನು ಹೆಚ್ಚಿಸಲೆಂದು, ತನ್ನ ಸ್ವರೂಪ ಅಯೋಗ್ಯರಿಗೆ ತಿಳಿಯದಾಗಲಿ ಎಂದು, ತನ್ನ ಲೋಕ ಅಂತಹವರಿಗೆ ಲಭಿಸದಿರಲಿ ಎಂದು ಶ್ರೀಹರಿ ಅಂತಹ ವಾಕ್ಯಗಳನ್ನು ಹೇಳಿರುವನು.

ವಿ: ೧. ದಶಮೀವಿದ್ಧವಾದ ಏಕಾದಶಿಯಂದೇ ಉಪವಾಸವು ಕರ್ತವ್ಯ ಎಂಬ ಮೋಹಕ ಮಾತುಗಳ ಉದ್ದೇಶವನ್ನು ಈ ಶ್ಲೋಕದಲ್ಲಿ ವಿವರಿಸಿರುವರು.

೨. ಸೃಷ್ಟಿಯಲ್ಲಿ ಅಸುರರ ಸಂಖ್ಯೆಯೇ ಬಹಳವಾದ್ದರಿಂದ ಅಂತಹವರ ದುರ್ಗತಿ-ಗೋಸ್ಕರವಾಗಿ ಅಂತಹ ಮೋಹಕವಾಕ್ಯಗಳು ಪುರಾಣಗಳಲ್ಲಿ ಬಂದಿವೆ ಎಂದರ್ಥ.

೩. ಪಾಶುಪತಾದಿಗಳು ಪಾಖಂಡಶಾಸ್ತ್ರಗಳು ಎಂಬ ಮಾತು ಭಾಗವತದಲ್ಲಿದೆ :

**ಭವವ್ರತಧರಾ ಯೇ ಚ ಯೇ ಚ ತಾನ್ ಸಮನುವ್ರತಾಃ ।**
**ಪಾಖಂಡಿನಸ್ತೇ ಭವಂತು ಸಚ್ಛಾಸ್ತ್ರಪರಿಪಂಥಿನಃ ॥ ಇತಿ । (೪/೧೨/೨೮)**

★★

೧. ಸ್ವರೂಪಾಪ್ರಾಪ್ತಯೇ ತಥಾ ( ಪಾ.)

## ವಿದ್ಧೈಕಾದಶಿಯನ್ನು ತೊರೆಯುವುದರಿಂದ ಕೋಟಿ ಜನ್ಮಗಳ ಪಾಪಪರಿಹಾರ

**ಏವಂ ವಿದ್ಧಾಂ ಪರಿತ್ಯಜ್ಯ [೧]ದ್ವಾದಶ್ಯಾಮುಪವಾಸಿನಾಮ್ ।**
**ಕೋಟಿಜನ್ಮಾರ್ಜಿತಂ ಪಾಪಮೇಕಯೈವ ವಿನಶ್ಯತಿ ॥ ೧೪೯ ॥**

**ಅ:**ಹೀಗೆ ವಿದ್ಧವಾದ ಏಕಾದಶಿಯನ್ನು ತ್ಯಜಿಸಿ ಆ ಬಾರಿ ದ್ವಾದಶಿಯಂದೇ ಉಪವಾಸ ಮಾಡುವವರಿಗೆ ಅಂತಹ ಒಂದು ಉಪವಾಸದಿಂದಲೇ ಕೋಟಿ ಜನ್ಮಗಳಿಂದ ಸಂಪಾದಿತವಾದ ಪಾಪವೆಲ್ಲ ಸಂಪೂರ್ಣವಾಗಿ ನಾಶ ಹೊಂದುವುದು.

**ವಿ:** ೧. ಹೀಗೆ ದಶಮೀವಿದ್ಧವಾದ ಏಕಾದಶಿಯಂದು ಉಪವಾಸವನ್ನು ಆಚರಿಸದೇ ದ್ವಾದಶಿಯಂದು ಉಪವಾಸ ಆಚರಿಸುವುದರಿಂದ ಪ್ರತ್ಯವಾಯ ಉಂಟೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ; ದಶಮೀವಿದ್ಧವಾದಾಗ ಏಕಾದಶಿಯಂದು ಉಪವಾಸ ನಿಷಿದ್ಧ; ಹೀಗೆ ಏಕಾದಶಿಯಂದು ಇಂತಹ ಪ್ರಸಂಗದಲ್ಲಿ ಉಪವಾಸ ಆಚರಿಸದಿರುವುದರಿಂದ ಪಾಪವು ಸರ್ವಥಾ ಒದಗದು; ಬದಲಾಗಿ ಮಹತ್ತರವಾದ ಪುಣ್ಯವೇ ಒದಗಿ ಅನೇಕಜನ್ಮಗಳ ಪಾಪಪರಿಹಾರವಾಗುವುದು ಎಂಬುದು ವಿಶೇಷ:

**ಏವಂ ವಿದ್ಧಾಂ ಪರಿತ್ಯಜ್ಯ ದ್ವಾದಶ್ಯಾಮುಪವಾಸನೇ ।**
**ಕೋಟಿಜನ್ಮಾರ್ಜಿತಂ ಪಾಪಮೇಕಯೈವ ವಿನಶ್ಯತಿ ।**
**ತತಃ ಕೋಟಿಗುಣಂ ವಾಽಪಿ ನಿಷಿದ್ಧಸ್ಯ ಚ ವರ್ಜನೇ ॥**

**- ವಿಷ್ಣುತೀರ್ಥೀಯೋದಾಹೃತಸ್ಕಾಂದಪುರಾಣವಚನ**

★★

## ಇತರರು ನಿರ್ಬಂಧಿಸಿದರೂ ವಿದ್ಧೈಕಾದಶಿಯಂದು ಉಪವಾಸವು ವಿಹಿತವಲ್ಲ

**ತತಃ ಕೋಟಿಗುಣಂ [೨]ವಾಽಪಿ ನಿಷಿದ್ಧಸ್ಯೇತರೈರ್ಜನೈಃ ।**
**ಯದನಾದಿಕೃತಂ ಪಾಪಂ ತದೂರ್ಧ್ವಂ ಯತ್ ಕರಿಷ್ಯತಿ ॥ ೧೫೦ ॥**

**ಅ:** ಇತರ ಜನರು ಆ ರೀತಿಯಲ್ಲಿ ಉಪವಾಸವನ್ನು ಆಚರಿಸಬಾರದು ಎಂದು ಅಡ್ಡಿ ಪಡಿಸಿದಾಗಲೂ ಸಹ ವಿದ್ಧೈಕಾದಶಿಯಂದು ಉಪವಾಸವನ್ನು ಆಚರಿಸದೇ ದ್ವಾದಶಿಯಂದೇ ಆಚರಿಸಬೇಕು. ಈ ರೀತಿ ಮಾಡುವುದರಿಂದ ಅನಾದಿಕಾಲದ ಹಿಂದಿನ ಪಾಪಮಾತ್ರವಲ್ಲದೇ ಮುಂದೆ ಮಾಡುವ ಪಾಪವೂ ಸಹ ಲೇಪವಿಲ್ಲ-ದಂತಾಗುವುದು.

---

೧. ದ್ವಾದಶ್ಯಾಮುಪವಾಸನಾತ್ ( ಪಾ.); ದ್ವಾದಶ್ಯಾಮುಪವಾಸನೇ ಇತಿ ಕ್ವಚಿತ್ ( ಪಾ.)
೨. ಚಾಪಿ (ಪಾ.); ನಿಷಿದ್ಧಸ್ಯ ಚ ವರ್ಜನೇ ( ಪಾ.)

ವಿ: ೧. ಸಂಪ್ರದಾಯ ಮೊದಲಾದ ಕಾರಣದಿಂದ ಇತರರು ವೇಧಸಂದೇಹವಿದ್ದಾಗ ಏಕಾದಶಿಯಂದೇ ಉಪವಾಸವನ್ನು ಮಾಡಬೇಕೆಂದು ಒತ್ತಡ ತಂದರೂ ಅಂತಹವರ ಮಾತಿಗೆ ಕಿವಿಗೊಡದೆ ವಿದ್ಧೈಕಾದಶಿಯನ್ನು ತೊರೆದು ದ್ವಾದಶಿಯಂದೇ ಉಪವಾಸವನ್ನು ಆಚರಿಸಬೇಕು ಎಂದರ್ಥ.

೨. ಇದು ಹಿಂದಿನ ಪಾಪಗಳ ನಾಶಕ್ಕೆ ಮಾತ್ರವಲ್ಲದೇ ಮುಂದಿನ ಪಾಪಗಳ ನಾಶಕ್ಕೂ ಸಹ ವಿಶೇಷಸಾಧನ ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

★★

## ವಿದ್ಧೈಕಾದಶಿಯಂದು ಉಪವಾಸಮಾಡದಂತೆ ಇತರರಿಗೂ ತಿಳಿಸಬೇಕು

**ತತ್ ಸರ್ವಂ ವಿಲಯಂ ಯಾತಿ ಪರೇಷಾಮುಪವಾಸನಾತ್ ।**
**ನ ಚ ತಸ್ಮಾತ್ ಪ್ರಿಯತಮಃ ಕೇಶವಸ್ಯ ಮಮಾಪಿ ವಾ ॥ ೧೫೧ ॥**

**ಅ:** ಆದರಂತೆ ತಾನು ಇತರರಿಗೂ ಸಹ ಇಂತಹ ತತ್ತ್ವವನ್ನು ತಿಳಿಸಿ ಅವರಿಂದಲೂ ವಿದ್ಧೈಕಾದಶಿಯಂದು ಉಪವಾಸ ಮಾಡಿಸದೆ ದ್ವಾದಶಿಯಂದೇ ಉಪವಾಸ ಮಾಡಿಸಬೇಕು; ಅಂತಹವನು ಶ್ರೀಹರಿಗೂ ಮತ್ತು ನನಗೂ ಸಹ ಅತ್ಯಂತ ಪ್ರೀತಿಪಾತ್ರನಾಗುವನು.

ವಿ: ೧. ಹಿಂದಿನ ಶ್ಲೋಕದಲ್ಲಿ ವಿದ್ಧೈಕಾದಶಿಯನ್ನು ತೊರೆಯುವಂತೆ ಉಪದೇಶ ನೀಡಿ, ಈ ಶ್ಲೋಕದಲ್ಲಿ ಇತರರು ಅಡ್ಡಿ ಪಡಿಸಿದಾಗಲೂ ದ್ವಾದಶಿಯಂದೇ ಉಪೋಷಣೆ ಎಂದು ತಿಳಿಸಿ, ತಾನು ಮಾತ್ರವಲ್ಲದೆ ಇತರರಿಂದಲೂ ಹಾಗೆಯೇ ಮಾಡಿಸಬೇಕು ಎಂಬ ಮತ್ತೊಂದು ವಿಶೇಷಾಂಶವನ್ನು ತಿಳಿಸಿರುವರು.

೨. ಇಂದಿನ ದಿನಗಳಲ್ಲಿ ಏಕಾದಶೀ ಉಪವಾಸದ ಬಗ್ಗೆ ವಿಶೇಷವಾದ ಗೊಂದಲ ಹುಟ್ಟಿದೆ. ಕೇವಲ ಯಾಂತ್ರಿಕವಾಗಿ ತಮ್ಮ ಸಂಪ್ರದಾಯಕ್ಕೆ ತಕ್ಕಂತೆ ಉಪವಾಸ ಮಾಡುವ ಪದ್ಧತಿ ಅನೇಕರಲ್ಲಿ ನಡೆದಿದೆ. ಶ್ರೀಮದಾಚಾರ್ಯರ ಇಲ್ಲಿಯ ಮಾತುಗಳು ಇಂತಹ ಪದ್ಧತಿಯನ್ನು ಒಪ್ಪುತ್ತಿಲ್ಲ. ಎಂಥ ಪ್ರಸಂಗ ಬಂದಾಗಲೂ ಸಹ ವಿದ್ಧೈಕಾದಶಿಯಂದು ಉಪವಾಸ ಸರ್ವಥಾ ನಿಷಿದ್ಧ ಎಂಬುದು ಅವರ ಆದೇಶ. ವಿದ್ಧೈಕಾದಶಿಯ ಸಂದೇಹವೂ ಸಹ ಅಂದಿನ ಉಪವಾಸದ ತ್ಯಾಗಕ್ಕೆ ಮುಖ್ಯಕಾರಣ ಎಂಬುದು ಒಟ್ಟು ತಾತ್ಪರ್ಯ.

೩. ಇಲ್ಲಿ '[೧]ಮಮ' ಎಂಬುದಕ್ಕೆ ಶಿವನ ಎಂದರ್ಥ. ಇದು ಪದ್ಮಪುರಾಣದಲ್ಲಿ ಶಿವ ಪಾರ್ವತಿಗೆ ಹೇಳಿದ ಮಾತು.

---

೧. ಮಮೇತಿ ರುದ್ರವಾಕ್ಯಮೇತತ್ । ಅತ ಏವ ವಿಷ್ಣುತೀರ್ಥೀಯೇ ಸ್ಕಾಂದೇಽಪ್ಯಾಹ । ತಥಾ ರುದ್ರೋಽಜ್ಯಾಯಾನ್ ಇತ್ಯವತಾರ್ಯೈತೇಷಾಂ ವಚನಾನಾಂ ಪರಿತತ್ತ್ವಮಿತಿ ಬೋಧ್ಯಮ್ (ತಾ)। - ಏತದ್ ವಚನಂ ಪಾರ್ವತೀಂ ಪ್ರತಿ ರುದ್ರೋಕ್ತಮಿತಿ ಜ್ಞಾತವ್ಯಮ್ । (ಕೋ)

## ವಿದ್ಧೈಕಾದಶಿಯನ್ನು ತೊರೆಯುವುದರಿಂದ ಕೋಟಿ ಜನ್ಮಗಳ ಪಾಪಪರಿಹಾರ

ಏವಂ ವಿದ್ಧಾಂ ಪರಿತ್ಯಜ್ಯ [೧]ದ್ವಾದಶ್ಯಾಮುಪವಾಸಿನಾಮ್ ।
ಕೋಟಿಜನ್ಮಾರ್ಜಿತಂ ಪಾಪಮೇಕಯೈವ ವಿನಶ್ಯತಿ ॥ ೧೪೯ ॥

ಅ:ಹೀಗೆ ವಿದ್ಧವಾದ ಏಕಾದಶಿಯನ್ನು ತ್ಯಜಿಸಿ ಆ ಬಾರಿ ದ್ವಾದಶಿಯಂದೇ ಉಪವಾಸ ಮಾಡುವವರಿಗೆ ಅಂತಹ ಒಂದು ಉಪವಾಸದಿಂದಲೇ ಕೋಟಿ ಜನ್ಮಗಳಿಂದ ಸಂಪಾದಿತವಾದ ಪಾಪವೆಲ್ಲ ಸಂಪೂರ್ಣವಾಗಿ ನಾಶ ಹೊಂದುವುದು.

ವಿ: ೧. ಹೀಗೆ ದಶಮೀವಿದ್ಧವಾದ ಏಕಾದಶಿಯಂದು ಉಪವಾಸವನ್ನು ಆಚರಿಸದೇ ದ್ವಾದಶಿಯಂದು ಉಪವಾಸ ಆಚರಿಸುವುದರಿಂದ ಪ್ರತ್ಯವಾಯ ಉಂಟೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ; ದಶಮೀವಿದ್ಧವಾದಾಗ ಏಕಾದಶಿಯಂದು ಉಪವಾಸ ನಿಷಿದ್ಧ; ಹೀಗೆ ಏಕಾದಶಿಯಂದು ಇಂತಹ ಪ್ರಸಂಗದಲ್ಲಿ ಉಪವಾಸ ಆಚರಿಸದಿರುವುದರಿಂದ ಪಾಪವು ಸರ್ವಥಾ ಒದಗದು; ಬದಲಾಗಿ ಮಹತ್ತರವಾದ ಪುಣ್ಯವೇ ಒದಗಿ ಅನೇಕಜನ್ಮಗಳ ಪಾಪಪರಿಹಾರವಾಗುವುದು ಎಂಬುದು ವಿಶೇಷ:

ಏವಂ ವಿದ್ಧಾಂ ಪರಿತ್ಯಜ್ಯ ದ್ವಾದಶ್ಯಾಮುಪವಾಸನೇ ।
ಕೋಟಿಜನ್ಮಾರ್ಜಿತಂ ಪಾಪಮೇಕಯೈವ ವಿನಶ್ಯತಿ ।
ತತಃ ಕೋಟಿಗುಣಂ ವಾಽಪಿ ನಿಷಿದ್ಧಸ್ಯ ಚ ವರ್ಜನೇ ॥

– ವಿಷ್ಣುತೀರ್ಥೀಯೋದಾಹೃತಸ್ಕಾಂದಪುರಾಣವಚನ

★★

## ಇತರರು ನಿರ್ಬಂಧಿಸಿದರೂ ವಿದ್ಧೈಕಾದಶಿಯಂದು ಉಪವಾಸವು ವಿಹಿತವಲ್ಲ

ತತಃ ಕೋಟಿಗುಣಂ [೨]ವಾಽಪಿ ನಿಷಿದ್ಧಸ್ಯೇತರೈರ್ಜನೈಃ ।
ಯದನಾದಿಕೃತಂ ಪಾಪಂ ತದೂರ್ಧ್ವಂ ಯತ್ ಕರಿಷ್ಯತಿ ॥ ೧೫೦ ॥

ಅ: ಇತರ ಜನರು ಆ ರೀತಿಯಲ್ಲಿ ಉಪವಾಸವನ್ನು ಆಚರಿಸಬಾರದು ಎಂದು ಅಡ್ಡಿ ಪಡಿಸಿದಾಗಲೂ ಸಹ ವಿದ್ಧೈಕಾದಶಿಯಂದು ಉಪವಾಸವನ್ನು ಆಚರಿಸದೇ ದ್ವಾದಶಿಯಂದೇ ಆಚರಿಸಬೇಕು. ಈ ರೀತಿ ಮಾಡುವುದರಿಂದ ಅನಾದಿಕಾಲದ ಹಿಂದಿನ ಪಾಪಮಾತ್ರವಲ್ಲದೇ ಮುಂದೆ ಮಾಡುವ ಪಾಪವೂ ಸಹ ಲೇಪವಿಲ್ಲದಂತಾಗುವುದು.

---

೧. ದ್ವಾದಶ್ಯಾಮುಪವಾಸನಾತ್ ( ಪಾ.); ದ್ವಾದಶ್ಯಾಮುಪವಾಸನೇ ಇತಿ ಕ್ವಚಿತ್ ( ಪಾ.)
೨. ಚಾಪಿ (ಪಾ.); ನಿಷಿದ್ಧಸ್ಯ ಚ ವರ್ಜನೇ ( ಪಾ.)

ವಿ: ೧. ಸಂಪ್ರದಾಯ ಮೊದಲಾದ ಕಾರಣದಿಂದ ಇತರರು ವೇಧಸಂದೇಹವಿದ್ದಾಗ ಏಕಾದಶಿಯಂದೇ ಉಪವಾಸವನ್ನು ಮಾಡಬೇಕೆಂದು ಒತ್ತಡ ತಂದರೂ ಅಂತಹವರ ಮಾತಿಗೆ ಕಿವಿಗೊಡದೆ ವಿದ್ಧೈಕಾದಶಿಯನ್ನು ತೊರೆದು ದ್ವಾದಶಿಯಂದೇ ಉಪವಾಸವನ್ನು ಆಚರಿಸಬೇಕು ಎಂದರ್ಥ.

೨. ಇದು ಹಿಂದಿನ ಪಾಪಗಳ ನಾಶಕ್ಕೆ ಮಾತ್ರವಲ್ಲದೇ ಮುಂದಿನ ಪಾಪಗಳ ನಾಶಕ್ಕೂ ಸಹ ವಿಶೇಷಸಾಧನ ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

★★

## ವಿದ್ಧೈಕಾದಶಿಯಂದು ಉಪವಾಸಮಾಡದಂತೆ ಇತರರಿಗೂ ತಿಳಿಸಬೇಕು

**ತತ್ ಸರ್ವಂ ವಿಲಯಂ ಯಾತಿ ಪರೇಷಾಮುಪವಾಸನಾತ್ ।**
**ನ ಚ ತಸ್ಮಾತ್ ಪ್ರಿಯತಮಃ ಕೇಶವಸ್ಯ ಮಮಾಪಿ ವಾ ॥ ೧೫೧ ॥**

ಅ: ಅದರಂತೆ ತಾನು ಇತರರಿಗೂ ಸಹ ಇಂತಹ ತತ್ತ್ವವನ್ನು ತಿಳಿಸಿ ಅವರಿಂದಲೂ ವಿದ್ಧೈಕಾದಶಿಯಂದು ಉಪವಾಸ ಮಾಡಿಸದೆ ದ್ವಾದಶಿಯಂದೇ ಉಪವಾಸ ಮಾಡಿಸಬೇಕು; ಅಂತಹವನು ಶ್ರೀಹರಿಗೂ ಮತ್ತು ನನಗೂ ಸಹ ಅತ್ಯಂತ ಪ್ರೀತಿಪಾತ್ರನಾಗುವನು.

ವಿ: ೧. ಹಿಂದಿನ ಶ್ಲೋಕದಲ್ಲಿ ವಿದ್ಧೈಕಾದಶಿಯನ್ನು ತೊರೆಯುವಂತೆ ಉಪದೇಶ ನೀಡಿ, ಈ ಶ್ಲೋಕದಲ್ಲಿ ಇತರರು ಅಡ್ಡಿ ಪಡಿಸಿದಾಗಲೂ ದ್ವಾದಶಿಯಂದೇ ಉಪೋಷಣೆ ಎಂದು ತಿಳಿಸಿ, ತಾನು ಮಾತ್ರವಲ್ಲದೆ ಇತರರಿಂದಲೂ ಹಾಗೆಯೇ ಮಾಡಿಸಬೇಕು ಎಂಬ ಮತ್ತೊಂದು ವಿಶೇಷಾಂಶವನ್ನು ತಿಳಿಸಿರುವರು.

೨. ಇಂದಿನ ದಿನಗಳಲ್ಲಿ ಏಕಾದಶೀ ಉಪವಾಸದ ಬಗ್ಗೆ ವಿಶೇಷವಾದ ಗೊಂದಲ ಹುಟ್ಟಿದೆ. ಕೇವಲ ಯಾಂತ್ರಿಕವಾಗಿ ತಮ್ಮ ಸಂಪ್ರದಾಯಕ್ಕೆ ತಕ್ಕಂತೆ ಉಪವಾಸ ಮಾಡುವ ಪದ್ಧತಿ ಅನೇಕರಲ್ಲಿ ನಡೆದಿದೆ. ಶ್ರೀಮದಾಚಾರ್ಯರ ಇಲ್ಲಿಯ ಮಾತುಗಳು ಇಂತಹ ಪದ್ಧತಿಯನ್ನು ಒಪ್ಪುತ್ತಿಲ್ಲ. ಎಂಥ ಪ್ರಸಂಗ ಬಂದಾಗಲೂ ಸಹ ವಿದ್ಧೈಕಾದಶಿಯಂದು ಉಪವಾಸ ಸರ್ವಥಾ ನಿಷಿದ್ಧ ಎಂಬುದು ಅವರ ಆದೇಶ. ವಿದ್ಧೈಕಾದಶಿಯ ಸಂದೇಹವೂ ಸಹ ಅಂದಿನ ಉಪವಾಸದ ತ್ಯಾಗಕ್ಕೆ ಮುಖ್ಯಕಾರಣ ಎಂಬುದು ಒಟ್ಟು ತಾತ್ಪರ್ಯ.

೩. ಇಲ್ಲಿ '[೧]ಮಮ' ಎಂಬುದಕ್ಕೆ ಶಿವನ ಎಂದರ್ಥ. ಇದು ಪದ್ಮಪುರಾಣದಲ್ಲಿ ಶಿವ ಪಾರ್ವತಿಗೆ ಹೇಳಿದ ಮಾತು.

---

೧. ಮಮೇತಿ ರುದ್ರವಾಕ್ಯಮೇತತ್ । ಅತ ಏವ ವಿಷ್ಣುತೀರ್ಥೀಯೇ ಸ್ಕಾಂದೇಽಪ್ಯಾಹ । ತಥಾ ರುದ್ರೋ ಜ್ಯಾಯಾನ್ ಇತ್ಯವತಾರ್ಯೈತೇಷಾಂ ವಚನಾನಾಂ ಪಠಿತತ್ವಮಿತಿ ಬೋಧ್ಯಮ್ (ತಾ)। – ಏತದ್ ವಚನಂ ಪಾರ್ವತೀಂ ಪ್ರತಿ ರುದ್ರೋಕ್ತಮಿತಿ ಜ್ಞಾತವ್ಯಮ್ । (ಕೋ)

## ಶುದ್ಧದ್ವಾದಶಿಯಂದು ಸಕಾಲಕ್ಕೆ ಪಾರಣೆಯೇ ವಿಹಿತ

**ಏಕಾದಶ್ಯಾ ಹ್ಯವೇಧೇ ತು[೧] ದ್ವಾದಶೀಂ ನ ಪರಿತ್ಯಜೇತ್ ।**
**ಪಾರಣೇ ಮರಣೇ ಚೈವ ತಿಥಿಸ್ತಾತ್ಕಾಲಿಕೀ ಸ್ಮೃತಾ ॥ ೧೫೨ ॥**

ಅ: ಏಕಾದಶಿಯಂದು ವೇಧವಿಲ್ಲದಿದ್ದಾಗ ದ್ವಾದಶಿಯನ್ನು ತಪ್ಪಿಸಕೂಡದು. ಪಾರಣೆ ಮತ್ತು ಮರಣ ಎರಡಕ್ಕೂ ಆಗಿನ ತಿಥಿಯೇ ಮುಖ್ಯವೆಂದು ಸ್ಮೃತಿಗಳಲ್ಲಿದೆ.

ವಿ: ೧. ಏಕಾದಶಿಯು ವಿದ್ಧವಾಗದಿದ್ದಾಗ ಅಂದು ಉಪವಾಸವನ್ನು ಆಚರಿಸಿ ದ್ವಾದಶಿಯಂದು ತಪ್ಪದೆ ಸಕಾಲಕ್ಕೆ ಪಾರಣೆ ಮಾಡಲೇಬೇಕೆಂಬುದು ಇದರ ಭಾವ.

೨. ಮರಣಕಾಲದ ತಿಥಿಯೇ ಶ್ರಾದ್ಧ ತಿಥಿ ಎನ್ನಿಸುವುದು; ಶ್ರಾದ್ಧದ ಆಚರಣೆ ತಪ್ಪದೇ ಮೃತತಿಥಿಯಂದೇ ಆಗಬೇಕು ಎಂಬುದು ವಿಧಿ; ಅದರಂತೆ ವ್ರತಗಳ ಪಾರಣೆಯೂ ಸಹ ಪಾರಣೆಗೆ ವಿಹಿತವಾದ ದಿನದಂದೇ ಆಗಬೇಕು ಎಂಬುದೂ ಸಹ ಮುಖ್ಯವಾದ ವಿಧಿ. ಆದ್ದರಿಂದ ಶುದ್ಧೈಕಾದಶಿಯಂದು ಉಪವಾಸ ಮಾಡುವಂತೆ ದ್ವಾದಶಿಯಂದು ಸಕಾಲಕ್ಕೆ ಪಾರಣೆ ಮಾಡಬೇಕು ಎಂದರ್ಥ.

೩. ಇಲ್ಲಿ ಪಾರಣೆಗೆ ನಿದರ್ಶನವನ್ನಾಗಿ ಮರಣತಿಥಿಯನ್ನು ಉಲ್ಲೇಖಿಸಿರುವುದು ಗಮನಾರ್ಹ; ಇದರಿಂದ ಶ್ರಾದ್ಧಕ್ಕೆ ವಿಹಿತವಾದದ್ದು ಮೃತತಿಥಿ ಎಂಬ ವಿಶೇಷಾಂಶ ತಿಳಿಯುವುದು. ಯಾವುದೇ ಕಾರಣದಿಂದಲೂ ಸಹ ಶ್ರಾದ್ಧತಿಥಿ ವ್ಯತ್ಯಾಸವಾಗುವಂತಿಲ್ಲ ಎಂಬ ವಿಶೇಷಾಂಶ ಇಲ್ಲಿದೆ.

೪. ಪಾರಣೆಗೆ ಸಂಬಂಧಿಸಿದಂತೆ ಇಲ್ಲಿಯ ಮರಣದ ತಿಥಿಯನ್ನು ಉಲ್ಲೇಖಿಸುವ ಮೂಲಕ ಮತ್ತೊಂದು ವಿಶೇಷಾಂಶವನ್ನು ಇಲ್ಲಿ ತಿಳಿಸಿರುವರು. ಏಕಾದಶಿಯಂದು ಮೃತತಿಥಿ ಒದಗಿದಾಗ ಮಾತ್ರ ಅಂದು ಶ್ರಾದ್ಧವನ್ನು ಮಾಡದೇ ಪಾರಣೆಯ ದಿನದಂದೇ ಅದನ್ನು ಆಚರಿಸಬೇಕು ಎಂಬುದು ಏಕಾದಶೀವ್ರತದ ವಿಶೇಷ:

> **ತ್ರಯೋದಶ್ಯಾಂ ಮೃತಾಹಶ್ಚೇತ್ ಕಲಾರ್ಧಾದ್ದ್ವಾದಶೀ ಯದಿ ।**
> **ದ್ವಾದಶ್ಯಾಮೇವ ಕರ್ತವ್ಯಂ ನ ದೋಷಮುಪಗಚ್ಛತಿ ॥ ಇತಿ ಸ್ಕಾಂದೇ ॥**
> **ತ್ರಯೋದಶ್ಯಾಂ ಮೃತತಿಥಿಃ ಮಾತಾಪಿತ್ರೋಃ ಸಮಾಗತಾ ।**
> **ದ್ವಾದಶ್ಯಾಮೇವ ಕರ್ತವ್ಯಂ ಕುತುಪೋ ನಹ್ಯಪೇಕ್ಷಿತಃ ॥**
>
> **– ಶ್ರೀವಿಷ್ಣುಪುರಾಣೇ (ಉಪೇ)**

೫. ಏಕಾದಶೀ, ದ್ವಾದಶೀ ಹಾಗೂ ತ್ರಯೋದಶೀ ಈ ಮೂರೂ ದಿನಗಳ ಶ್ರಾದ್ಧವನ್ನು ಇಂತಹ ಪ್ರಸಂಗಗಳಲ್ಲಿ ದ್ವಾದಶಿಯಂದೇ ಆಚರಿಸಬೇಕು :

> **ಏಕಾದಶೀ – ದ್ವಾದಶೀ – ತ್ರಯೋದಶೀತಿದಿನತ್ರಯಾಣಾಂ ಶ್ರಾದ್ಧಂ ದ್ವಾದಶ್ಯಾಮೇವ ಕಾರ್ಯಮ್ । ತಥೋಕ್ತಂ ನೃಸಿಂಹಪುರಾಣೇ –**

---

೧. ಏಕಾದಶ್ಯಾಂ ಹ್ಯವಿದ್ಧಾಯಾಂ ( ಪ್ರ.)

ಸಾಧನದ್ವಾದಶೀ ಯತ್ರ ಕಲಾಮಾತ್ರಾಧಿಕಾ ಸ್ಮೃತಾ ।
ತದಾ ದಿನತ್ರಯಶ್ರಾದ್ಧಂ ದ್ವಾದಶ್ಯಾಮೇವ ಕಾರಯೇತ್ ॥
- ಶ್ರೀನಿವಾಸತೀರ್ಥರ ಆಹ್ನಿಕಕೌಸ್ತುಭ

ಔಪಾಸನಂ ತಥಾ ಶ್ರಾದ್ಧಂ ಬ್ರಹ್ಮಯಜ್ಞಾದಿಪಂಚಕಮ್ ।
ನ ತತ್ರ ವಿಧಿಲೋಪಃ ಸ್ಯಾಜ್ಜಯಂತ್ಯಾಂ ಹರಿವಾಸರೇ ॥ - ದತ್ತಾತ್ರೇಯಸಂಹಿತಾ

ಯಥಾऽऽಶೌಚಗತಂ ಶ್ರಾದ್ಧಮಾಶೌಚಾಂತೇ ವಿಧೀಯತೇ ।
ತಥೈವೈಕಾದಶೀಶ್ರಾದ್ಧಂ ದ್ವಾದಶ್ಯಾಮೇವ ಕಾರಯೇತ್ ॥ - ಪಂಚಸಂಸ್ಕಾರಸಂಗ್ರಹ

೬. ಜಾತಾಶೌಚ, ಮೃತಾಶೌಚಗಳು ಒದಗಿದಾಗ ಶ್ರಾದ್ಧವನ್ನು ಆಶೌಚ ಕಳೆದ ಅನಂತರವೇ ಆಚರಿಸುವಂತೆ ಈ ಪ್ರಸಂಗ ಎಂದರ್ಥ. ಏಕಾದಶೀಶ್ರಾದ್ಧವನ್ನು ದ್ವಾದಶಿಯಂದು ಮಾಡುವ ವಿಧಿಯಿಂದ ಮೃತತಿಥಿಯಂದೇ ತಪ್ಪದೇ ಶ್ರಾದ್ಧ ಆಚರಿಸಬೇಕು ಎಂಬ ವಿಧಿಗೆ ಲೋಪ ಒದಗುವುದಲ್ಲವೇ? ಎಂಬ ಪ್ರಶ್ನೆಗೆ ಇದು ಉತ್ತರ.

೬. ಏಕಾದಶೀ ಉಪವಾಸದಂದು ಶ್ರಾದ್ಧದಂತೆ ಬ್ರಹ್ಮಯಜ್ಞ, ಔಪಾಸನ, ವೈಶ್ವದೇವಗಳೂ ಸಹ ನಿಷಿದ್ಧ; ಇದರಂತೆ ಕೃಷ್ಣಜಯಂತೀ(ಜನ್ಮಾಷ್ಟಮೀ) ದಿನದಂದೂ ಸಹ ಬ್ರಹ್ಮಯಜ್ಞಾದಿ ಪಂಚಮಹಾಯಜ್ಞಗಳು ಹಾಗೂ ಶ್ರಾದ್ಧವು ನಿಷಿದ್ಧ.

೭. ಏಕಾದಶೀವ್ರತವು ಹರಿದಿನವಾದ್ದರಿಂದ ಪಿತೃಕಾರ್ಯ ಮೊದಲಾದ ಇತರ ಕಾರ್ಯಗಳೆಲ್ಲವೂ ಅದಕ್ಕೆ ಅನುಗುಣವಾಗಿ ಯೋಜಿತವಾಗಬೇಕು ಎಂದು ಭಾವ. ಪಿತೃದೇವತೆಗಳು ಮೊದಲಾಗಿ ಸಕಲದೇವತೆಗಳೂ ಏಕಾದಶಿಯಂದು ಉಪೋಷಣೆ ಮಾಡುವುದರಿಂದ ಅವರಾರೂ ಅಂದು ಶ್ರಾದ್ಧವನ್ನು ಸ್ವೀಕರಿಸಲಾರರು ಎಂದು ತಿಳಿಯಬೇಕು.

೮. ಇದರಂತೆ ಎರಡು ಉಪವಾಸಗಳು ಒದಗಿದ ಪ್ರಸಂಗದಲ್ಲೂ ಸಹ ಪಾರಣ ದಿನದಂದೇ ಶ್ರಾದ್ಧವು ಕರ್ತವ್ಯ ಎಂದು ತಿಳಿಯಬೇಕು.

೯. ಆದರೆ ಈ ವಿಧಿಯು ವಿಷ್ಣುಪಂಚಕವ್ರತಕ್ಕೆ ಅನ್ವಯಿಸುವುದಿಲ್ಲ ಎಂಬುದನ್ನು ಗಮನಿಸಬೇಕು. ವಿಷ್ಣುಪಂಚಕವ್ರತದ ದೀಕ್ಷೆ ತೊಟ್ಟವರು ಏಕಾದಶ್ಯಾದಿಗಳ ಹೊರತು ಇತರ ಉಪವಾಸ ದಿನಗಳಂದು ಶ್ರಾದ್ಧ ಒದಗಿದರೆ ಅಂದು ಉಪವಾಸವನ್ನು ತ್ಯಜಿಸಿ ಶ್ರಾದ್ಧವನ್ನೇ ಆಚರಿಸಬೇಕು ಎಂಬುದು ವಿಧಿ. ಹಾಗೆ ತಪ್ಪಿದ ಉಪವಾಸವನ್ನು ಮಾರನೆಯ ವರ್ಷ ಆ ತಿಥಿಯಂದು ಆಚರಿಸಿ ಪೂರ್ಣಗೊಳಿಸಬೇಕು ಎಂಬ ವಿಶೇಷಾಂಶ ಸ್ಮೃತಿಗಳಲ್ಲಿದೆ.

★★

## ಸಕಲ ವರ್ಣಾಶ್ರಮದವರಿಗೂ ಏಕಾದಶ್ಯುಪವಾಸವು ಕಡ್ಡಾಯ

**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ ।**
**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ ॥ ೧೫೩ ॥**
**ಅಭರ್ತೃಕಾ [1]ತಥಾऽನ್ಯೇ ವಾ [2]ಸೂತವೈದೇಹಿಕಾದಿಕಾಃ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ[3] ॥ ೧೫೪ ॥**

**ಅ:** ಬ್ರಹ್ಮಚಾರೀ, ಗೃಹಸ್ಥ ವಾನಪ್ರಸ್ಥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಪತಿಯಿರುವವಳು, ಪತಿ ಇಲ್ಲದವಳು, ಸೂತರು, ವೈದೇಹಿಕರು ಮೊದಲಾದ ಸಕಲರೂ ಶುಕ್ಲಪಕ್ಷ ಕೃಷ್ಣಪಕ್ಷ ಎಂಬ ಎರಡು ಪಕ್ಷಗಳಲ್ಲೂ ಏಕಾದಶಿಯಂದು ಯಾವುದೇ ಆಹಾರವನ್ನೂ ಸ್ವೀಕರಿಸಲೇ ಕೂಡದು.

**ವಿ:** ೧. ಏಕಾದಶೀವ್ರತಕ್ಕೆ ಅಧಿಕಾರಿಗಳನ್ನು ಇಲ್ಲಿ ತಿಳಿಸಿರುವರು; ಇದರಿಂದ ಬ್ರಹ್ಮಚಾರೀ ಗೃಹಸ್ಥ ವಾನಪ್ರಸ್ಥ ಮತ್ತು ಯತಿ ಎಂಬ ನಾಲ್ಕು ಆಶ್ರಮದವರೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣದವರೂ, ಅದರಂತೆ ಸಕಲ ಸ್ತ್ರೀಯರೂ, ಸೂತರೂ ಮೊದಲಾದ ಸಂಕರಜಾತಿಯವರೂ ಸಹ ಏಕಾದಶೀವ್ರತವನ್ನು ತಪ್ಪದೇ ಆಚರಿಸಲೇಬೇಕು ಎಂಬ ವಿಶೇಷಾಂಶ ಸ್ಫುಟಪಡುವುದು :

**ಗೃಹಸ್ಥೋ ಬ್ರಹ್ಮಚಾರೀ ವಾ ಆಹಿತಾಗ್ನಿರ್ಯತಿಸ್ತಥಾ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥** – ಅಗ್ನಿಪುರಾಣ

**ವರ್ಣಾನಾಮಾಶ್ರಮಾಣಾಂ ಚ ಸ್ತ್ರೀಣಾಂ ಚ ವರವರ್ಣಿನಿ ।**
**ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ ॥** – ಪಾದ್ಮೋತ್ತರಪುರಾಣ

**ಏಕಾದಶ್ಯುಪವಾಸಶ್ಚ ಸರ್ವೇಷಾಂ ಸರ್ವದಾ ಭವೇತ್ ।**
**ಯತ್ ಕಿಂಚಿಚ್ಚ ನ ಭಕ್ಷೇತ ಶುಭೇಪ್ಸುಃ ಸರ್ವಥಾ ದಿನೇ ॥**
**ತಸ್ಮಿಂಸ್ತು ಮೃತಿಪರ್ಯಂತಂ ರೋಗಾಭಾವೇ ಪುಮಾನ್ ಕ್ವಚಿತ್ ॥**
– ವಿಷ್ಣುತೀರ್ಥೀಯ (೩/೧೭೩)

೨. ಒಟ್ಟಾಗಿ ಏಕಾದಶೀವ್ರತವು ಸಕಲಮಾನವರಿಗೂ ಕಡ್ಡಾಯವಾಗಿ ವಿಹಿತವಾದ ವ್ರತ ಎಂಬುದು ವಿಶೇಷ.

---

೧. ತಥಾऽನ್ಯೇ ಚ ( ಪಾ.); ಸೂತವೈದೇಹಿಕಾದಯಃ ( ಪಾ.)
೨. ಕ್ಷತ್ರಿಯಾದ್ ಬ್ರಾಹ್ಮಣ್ಯಾಂ ಜಾತಃ ಸೂತಃ । ವೈಶ್ಯಾದ್ ಬ್ರಾಹ್ಮಣ್ಯಾಂ ಜಾತಃ ವೈದೇಹಿಕಃ । ಶೂದ್ರಾದ್ ಬ್ರಾಹ್ಮಣ್ಯಾಂ ಜಾತಶ್ಚಂಡಾಲಃ ॥ (ಉ).
೩. ಪಕ್ಷಯೋಃ ಶುಕ್ಲಕೃಷ್ಣಯೋಃ । ಇತಿ ಕ್ವಚಿತ್

೩. **ಭರ್ತೃಮತೀ** ಎಂದರೆ ಸುಮಂಗಲಿ ಸ್ತ್ರೀಯೆಂದರ್ಥ; **ಅಭರ್ತೃಕಾ** ಎಂಬುದಕ್ಕೆ ಪತಿಯಿಲ್ಲದವಳು, ಎಂದರೆ ಇನ್ನೂ ವಿವಾಹಿತಳಾಗದ ಕನ್ಯೆ ಹಾಗೂ ಪತಿಯನ್ನು ಕಳೆದುಕೊಂಡ ಸ್ತ್ರೀ ಎಂಬ ಎರಡು ಅರ್ಥಗಳೂ ವಿವಕ್ಷಿತ; ಇದರಿಂದ ಕನ್ಯೆಯರು, ಮುತ್ತೈದೆಯರು, ವಿಧವೆಯರು ಮೊದಲಾಗಿ ಎಲ್ಲ ಬಗೆಯ ಸ್ತ್ರೀಯರು ಸಹ ಏಕಾದಶೀವ್ರತವನ್ನು ತಪ್ಪದೇ ಆಚರಿಸಲೇಬೇಕು ಎಂದಾಗುವುದು.

೪. ಕೆಲವು ವ್ರತಗಳಿಗೆ ಸುಮಂಗಲಿಯರು ಅಧಿಕಾರಿಗಳಲ್ಲ ; ಮತ್ತೆ ಕೆಲವು ವ್ರತಗಳಿಗೆ ಕನ್ಯೆಯರು ಅಧಿಕಾರಿಗಳಲ್ಲ ; ವರಮಹಾಲಕ್ಷ್ಮೀ ಮೊದಲಾದ ಕೆಲವು ವ್ರತಗಳಿಗೆ ವಿಧವೆಯರು ಅಧಿಕಾರಿಗಳಲ್ಲ. ಆದರೆ ಏಕಾದಶಿಗೆ ಮಾತ್ರ ಸರ್ವರೂ ಅಧಿಕಾರಿಗಳು ಎಂಬುದು ಇಲ್ಲಿಯ ವಿಶೇಷಾಂಶ.

೫. **ಸೂತ, ವೈದೇಹಿಕ** ಎಂಬ ಪದಗಳು ಅನುಲೋಮ ಪ್ರತಿಲೋಮ ಎಂಬ ಎಲ್ಲ ಬಗೆಯ ಸಂಕರಜಾತಿಯ ಸ್ತ್ರೀಪುರುಷರಿಗೂ ಉಪಲಕ್ಷಕ. ಇದರಿಂದ ಜಾತಿಭ್ರಷ್ಟರಾದವರೂ ಸಹ ಏಕಾದಶೀವ್ರತವನ್ನು ಆಚರಿಸಲೇಬೇಕು ಎಂಬ ವಿಶೇಷವಿಧಿ ಸೂಚಿತ :

**ಯದೀಚ್ಛೇದ್ವಿಷ್ಣುಸಾಯುಜ್ಯಂ ಶ್ರಿಯಂ ಸಂತತಿಮಾತ್ಮನಃ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ – ಕೂರ್ಮಪುರಾಣ**

**ಸಂಸಾರಸಾಗರೋತ್ತಾರಮಿಚ್ಛನ್ ವಿಷ್ಣುಪರಾಯಣಃ ।**
**ಐಶ್ವರ್ಯಂ ಸಂತತಿಂ ಸ್ವರ್ಗಂ ಮುಕ್ತಿಂ ವಾ ಯದ್ಯದಿಚ್ಛತಿ ॥**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ – ಕಾತ್ಯಾಯನಸ್ಮೃತಿಃ**

**ಯದೀಚ್ಛೇದ್ ವಿಪುಲಾನ್ ಭೋಗಾನ್ ಮುಕ್ತಿಂ ಚಾತ್ಯಂತದುರ್ಲಭಾಮ್ ।**
**ಏಕಾದಶ್ಯಾಮುಪವಸೇದ್ ಪಕ್ಷಯೋರುಭಯೋರಪಿ ॥ – ಸ್ಕಂದಪುರಾಣ**

★★

## ಏಕಾದಶಿಯಂದು ಭೋಜನ ನರಕಹೇತು

**ಏಕಾದಶ್ಯಾಂ ತು ಯೋ ಭುಂಕ್ತೇ [೧]ಮೋಹೇನಾವೃತಚೇತನಃ ।**
**ಶುಕ್ಲಾಯಾಮಥ ಕೃಷ್ಣಾಯಾಂ ನಿರಯಂ [೨]ಯಾತಿ ಸ ಧ್ರುವಮ್ ॥ ೧೫೫ ॥**

**ಅ:** ಬುದ್ಧಿಗೆ ಮಂಕುಕವಿದು ಶುಕ್ಲಪಕ್ಷದ ಅಥವಾ ಕೃಷ್ಣಪಕ್ಷದ ಏಕಾದಶಿಯಂದು ಆಹಾರ ತಿನ್ನುವವನು ನರಕ ಹೊಂದುವುದು ನಿಶ್ಚಿತ.

★★

---

೧. ಮೋಹೇನಾವೃತಚೇತಸಾ ( ಪ್ರ.)
೨. ಯಾತ್ಯಸಂಶಯಃ ( ಪಾ.)

## ಕೃಷ್ಣಪಕ್ಷದ ಏಕಾದಶಿಗಳಂದು ಸಹ ಉಪವಾಸ ಕರ್ತವ್ಯ

**ವಿವೇಚಯತಿ ಯೋ ಮೋಹಾಚ್ಛುಕ್ಲಾ ಕೃಷ್ಣೇತಿ ಪಾಪಕೃತ್ ।**
**ಏಕಾದಶೀಂ ಸ ವೈ ಯಾತಿ ನಿರಯಂ ನಾತ್ರ ಸಂಶಯಃ ॥ ೧೫೬ ॥**

**ಅ:** ಮೋಹಕ್ಕೊಳಗಾಗಿ ಏಕಾದಶಿಯನ್ನು ಶುಕ್ಲೈಕಾದಶೀ ಕೃಷ್ಣೈಕಾದಶೀ ಎಂದು ವ್ಯತ್ಯಾಸಮಾಡಿ ನೋಡುವ ಪಾಪಿಯು ನರಕವನ್ನು ಸೇರುವನು; ಈ ಬಗ್ಗೆ ಸಂಶಯವಿಲ್ಲ.

ವಿ: ಪ್ರತಿಮಾಸದ ಶುಕ್ಲಪಕ್ಷದ ಹಾಗೂ ಕೃಷ್ಣಪಕ್ಷದ ಏಕಾದಶಿಗಳೆಲ್ಲವೂ ಅಷ್ಟೇ ಮುಖ್ಯವಾದವುಗಳು ಎಂದರ್ಥ. ಕೆಲವರು ಶುಕ್ಲಪಕ್ಷದ ಏಕಾದಶಿಯು ಶ್ರೇಷ್ಠ ಕೃಷ್ಣಪಕ್ಷದ ಏಕಾದಶಿಯು ಅಷ್ಟು ಶ್ರೇಷ್ಠವಲ್ಲ ಎನ್ನುವರು; ಮತ್ತೆ ಕೆಲವರು ಪ್ರಥಮೈಕಾದಶಿಯು ಮಾತ್ರವೇ ಶ್ರೇಷ್ಠ ಎಂದರೆ, ಇನ್ನು ಕೆಲವರು ವೈಕುಂಠೈಕಾದಶಿಯು ಮಾತ್ರವೇ ಶ್ರೇಷ್ಠ ಎನ್ನುವರು; ಮತ್ತೆ ಕೆಲವರು ಚಾತುರ್ಮಾಸ್ಯದ ಏಕಾದಶಿಗಳು ಮಾತ್ರವೇ ಶ್ರೇಷ್ಠ ಎಂದು ವಾದಿಸುವರು. ಈ ಎಲ್ಲ ವಾದಗಳಿಗೂ ಇಲ್ಲಿ ಉತ್ತರವಿದೆ. ವರ್ಷದ ಎಲ್ಲ ಏಕಾದಶಿಗಳೂ ಸಹ ಅತ್ಯಂತ ಮುಖ್ಯವಾಗಿ ಉಪೋಷಣಾರ್ಹವೇ ಆಗಿವೆ. ಯಾವ ಏಕಾದಶಿಯಂದು ಉಪವಾಸ ತಪ್ಪಿದರೂ ಪ್ರತ್ಯವಾಯ ತಪ್ಪಿದ್ದಲ್ಲ ಎಂದರ್ಥ.

★★

## ಉಭಯಪಕ್ಷದ ಏಕಾದಶಿಗಳಂದು ಉಪವಾಸವೇ ವಿಹಿತ

**ಯಥಾ ಗೌರ್ನೈವ ಹಂತವ್ಯಾ ಶುಕ್ಲಾ ಕೃಷ್ಣೇತಿ ಭಾಮಿನಿ ।**
**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ ೧೫೭ ॥**

**ಅ:** ಪಾರ್ವತಿ ! ಬಿಳಿ, ಕಪ್ಪು ಮೊದಲಾದ ಸಕಲಗೋವುಗಳ ಹತ್ಯೆಯು ಹೇಗೆ ನಿಷಿದ್ಧವೋ, ಹಾಗೆ ಶುಕ್ಲಪಕ್ಷ ಕೃಷ್ಣಪಕ್ಷಗಳ ಸಕಲ ಏಕಾದಶಿಗಳಂದೂ ಆಹಾರವು ನಿಷಿದ್ಧ.

ವಿ: ೧. ಎಲ್ಲ ಏಕಾದಶಿಗಳೂ ಒಂದೇ ರೀತಿಯಲ್ಲಿ ಉಪವಾಸಕ್ಕೆ ಅರ್ಹ ಎಂಬುದನ್ನು ಹಸುವಿನ ದೃಷ್ಟಾಂತದಿಂದ ನಿರೂಪಿಸಿರುವರು.

೨. ಹಸುವನ್ನು ಕೊಲ್ಲಕೂಡದು, ಹಿಂಸಿಸಕೂಡದು ಎಂಬ ಮಾತು ಬಿಳಿ ಕಪ್ಪು ಮೊದಲಾದ ಎಲ್ಲ ಹಸುಗಳಿಗೂ ಸಮಾನವಾಗಿಯೇ ಅನ್ವಯಿಸುವಂತೆ ಏಕಾದಶಿಯಂದು

ಯಾವುದೇ ಆಹಾರವನ್ನೂ ಸ್ವೀಕರಿಸಕೂಡದು ಎಂಬ ಮಾತು ಸಕಲ ಏಕಾದಶಿಗಳಿಗೂ ಸಮನಾಗಿಯೇ ಅನ್ವಯಿಸುತ್ತದೆ ಎಂದರ್ಥ.

೩. ಈ ಶ್ಲೋಕವನ್ನು ಉದಾಹರಿಸುವ ಮೂಲಕ ಯಾವುದೇ ಬಗೆಯ ಗೋಹತ್ಯೆಯೂ ಸಹ ಅತ್ಯಂತ ಪಾಪಕರ ಎಂಬ ವಿಶೇಷಾಂಶವನ್ನು ಶ್ರೀಮದಾಚಾರ್ಯರು ತಿಳಿಸಿರುವರು ಎಂದು ಅರ್ಥಮಾಡಿಕೊಳ್ಳಬೇಕು.

★★

## ಕೃಷ್ಣಪಕ್ಷದ ಏಕಾದಶಿಯ ನಿಷೇಧದ ಆಂತರ್ಯ

**ಯಾನಿ ಕಾನಿ ಚ ವಾಕ್ಯಾನಿ ಕೃಷ್ಣೈಕಾದಶಿವರ್ಜನೇ ।**
**[1]ಭರಣ್ಯಾದಿನಿಷೇಧೇನ[2] ತಾನಿ ಕಾಮ್ಯಫಲಾರ್ಥಿನಾಮ್ ॥ ೧೫೮ ॥**

**ಅ:** "ಕೃಷ್ಣಪಕ್ಷದ ಏಕಾದಶಿಯನ್ನು ಆಚರಿಸಕೂಡದು ; ಅದರಂತೆಯೇ ಏಕಾದಶಿ-ಯಂದು ಭರಣಿ ಮೊದಲಾದ ನಕ್ಷತ್ರಗಳಿದ್ದಲ್ಲಿ ಉಪವಾಸ ಮಾಡಕೂಡದು" ಎಂಬ ವಾಕ್ಯಗಳೆಲ್ಲ ಕಾಮ್ಯಫಲವನ್ನು ಬಯಸುವವರಿಗೆ ಮಾತ್ರ ಅನ್ವಯಿಸುವವು.

**ವಿ:** ೧. ಕೆಲವೆಡೆ ಪುರಾಣಗಳಲ್ಲಿ "ಕೃಷ್ಣಪಕ್ಷದ ಏಕಾದಶಿಯು ತ್ಯಾಜ್ಯ, ಭರಣೀನಕ್ಷತ್ರ ಇರುವ ಏಕಾದಶಿಯು ತ್ಯಾಜ್ಯ" ಎಂಬ ಮಾತುಗಳು ಕಂಡುಬರುವುದು ಉಂಟು. ಅಂತಹ ಮಾತುಗಳು ಕಾಮ್ಯಫಲವನ್ನು ಬಯಸಿ ಏಕಾದಶಿಯನ್ನು ಆಚರಿಸುವವರಿಗೆ ಮಾತ್ರ ಹೇಳಲ್ಪಟ್ಟವುಗಳೇ ಹೊರತು ವಿಷ್ಣುಪ್ರೀತಿಗಾಗಿ ಮಾತ್ರ ಉಪವಾಸ ಮಾಡುವವರಿಗಲ್ಲ. ಆದ್ದರಿಂದ ಅಂತಹ ಮಾತುಗಳಿಂದಾಗಿ ದಾರಿತಪ್ಪದೆ ಸಕಲ ಏಕಾದಶಿಗಳಂದು ಸಹ ತಪ್ಪದೇ ಉಪೋಷಣೆ ಮಾಡಲೇಬೇಕು ಎಂದರ್ಥ :

ಸಂಕ್ರಾಂತಾವುಪವಾಸೇನ ಪಾರಣೇನ ಯುಧಿಷ್ಠಿರ ।
ಏಕಾದಶ್ಯಾಂ ತು ಕೃಷ್ಣಾಯಾಂ ಜ್ಯೇಷ್ಠಪುತ್ರೋ ವಿನಶ್ಯತಿ ॥
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ।
ವನಸ್ಥಯತಿಧರ್ಮೋಽಯಂ ಶುಕ್ಲಾಮೇವ ಸದಾ ಗೃಹೀ ।
ಭರಣ್ಯಾದಿಯುತಾಂ ವಾಪಿ ಕೃಷ್ಣಾಂ ನೋಪವಸೇದ್ ಗೃಹೀ ॥ (ಉ; ಉಪೇ)

★★

---

೧. ಭರಣ್ಯಾದಿನಿಷೇಧೇಽಪಿ ( ಪಾ.); ಭರಣ್ಯಾದಿನಿಷೇಧೇ ಚ ( ಪಾ.)
೨. 'ಭರಣ್ಯಾದಿಯುತಾಂ ವಾಽಪಿ ಕೃಷ್ಣಾಂ ನೋಪವಸೇದ್ ಗೃಹೀ' ಇತಿ ಸ್ಮೃತೇರ್ಭರಣ್ಯಾದಿ ಯುಕ್ತಾಮೇಕಾದಶೀಮಿತ್ಯರ್ಥಃ। (ತಾ);

**ಕೃಷ್ಣಪಕ್ಷದ ಏಕಾದಶಿಯ ಉಪವಾಸವು ಫಲಕಾಮನೆಯವರೆಗೂ ವಿಹಿತ**

**ಕಾಮಿನೋಽಪಿ [೧]ನಿಯತ್ಯರ್ಥಂ ಕುರ್ಯುರೇವೋಪವಾಸನಮ್ ।**
**ಪ್ರೀಣನಾಯ ಹರೇರ್ನಿತ್ಯಂ ನ ತು [೨]ಕಾಮ್ಯವ್ಯಪೇಕ್ಷಯಾ ॥ ೧೫೯ ॥**

**ಅ**: ಕಾಮ್ಯಫಲ ಬಯಸುವವರು ಸಹ ನಿಯಮಪಾಲನೆಗೆಂದು ಉಪೋಷಣೆಯನ್ನು ಮಾಡಿಯೇ ಮಾಡುವರು. ಶ್ರೀಹರಿಪ್ರೀತಿಗೆಂದು ಅಂತಹ ಉಪವಾಸವೇ ಹೊರತು ಫಲಾಪೇಕ್ಷೆಯಿಂದಾಗಿ ಅಲ್ಲ.

**ವಿ**: ೧. ಕಾಮ್ಯಫಲಬಯಸಿ ಏಕಾದಶಿ ಮಾಡುವವರು ಸಹ ವ್ರತಸಂಪೂರ್ತಿಗೋಸ್ಕರ ಎಲ್ಲ ಏಕಾದಶಿಗಳಂದು ಉಪವಾಸಮಾಡುವುದೇ ವಿಹಿತ ಎಂದರ್ಥ.

೨. ತಿಳಿಸಿಕೊಡುವವರು ಇರುವಾಗಲೂ ಹರಿದಿನವನ್ನು ಆಚರಿಸದವನು ಶಾಶ್ವತನರಕವನ್ನು ಹೊಂದುವನು :

**ಉಪದೇಶಕೇಷು ಸತ್ಸ್ವೇವಂ ಯೋ ಭುಂಕ್ತೇ ಹರಿವಾಸರೇ ।**
**ತಾವುಭೌ ನರಕಂ ಯಾತಃ ಯಾವದಾಭೂತಸಂಪ್ಲವಮ್ ॥ (ಉ)**

★★

**ಶುಕ್ಲಪಕ್ಷ - ಕೃಷ್ಣಪಕ್ಷಗಳ ಸಕಲ ಏಕಾದಶಿಗಳಲ್ಲೂ ಉಪವಾಸ ಕಡ್ಡಾಯ**

**ತಸ್ಮಾಚ್ಛುಕ್ಲಾಮಥೋ ಕೃಷ್ಣಾಂ ಭರಣ್ಯಾದಿಯುತಾಮಪಿ ।**
**ಪ್ರತ್ಯವಾಯನಿಷೇಧಾರ್ಥಮುಪವಾಸೀತ ನಿತ್ಯಶಃ ।**
**ಪ್ರೀಣನಾರ್ಥಂ ಹರೇಶ್ಚಾಪಿ ವಿಷ್ಣುಲೋಕಸ್ಯ ಚಾಪ್ತಯೇ ॥ ೧೬೦ ॥**

**ಅ**: ಆದ್ದರಿಂದ ಶುಕ್ಲಪಕ್ಷದ್ದೇ ಇರಲಿ, ಕೃಷ್ಣಪಕ್ಷದ್ದೇ ಆಗಿರಲಿ ಭರಣಿ ಮೊದಲಾದ ನಕ್ಷತ್ರಗಳ ಯೋಗ ಹೊಂದಿರಲಿ, ಪ್ರತ್ಯವಾಯಪರಿಹಾರಕ್ಕೆಂದು ಸದಾ ಸಕಲ ಏಕಾದಶಿಗಳಂದು ಶ್ರೀವಿಷ್ಣುಪ್ರೀತಿಗೋಸ್ಕರವಾಗಿ, ಶ್ರೀವಿಷ್ಣುಲೋಕದ ಪ್ರಾಪ್ತಿಗಾಗಿಯೂ ಉಪವಾಸವನ್ನು ಆಚರಿಸಲೇಬೇಕು.

**ವಿ**: ಏಕಾದಶಿಯಂದು ಆಹಾರ ಸ್ವೀಕಾರ ತುಂಬಾ ನಿಷಿದ್ಧ ಎಂಬ ಮಾತು ಎಲ್ಲದಕ್ಕಿಂತಲೂ ಪ್ರಧಾನವಾದ್ದರಿಂದ ಯಾವುದೇ ಕಾರಣದಿಂದಲೂ ಯಾವ ಏಕಾದಶಿಯಂದೂ ಸಹ ಉಪವಾಸದ ಆಚರಣೆಯನ್ನು ತಪ್ಪಿಸಲೇಕೂಡದು ಎಂದು ತಾತ್ಪರ್ಯ.

★★

---

೧. ಹಿ ನಿತ್ಯಾರ್ಥಂ ( ಪಾ.)
೨. ಕಾಮವ್ಯಪೇಕ್ಷಯಾ ( ಪಾ.)

## ಅತಿರಿಕ್ತ ದ್ವಾದಶಿಯಂದು ಸಹ ಉಪವಾಸವು ಕಡ್ಡಾಯ

**ಕಲಾ ವಾ ಘಟಿಕಾ ವಾಽಪಿ ಪರತೋ[೧] ದ್ವಾದಶೀ ಯದಿ ।**
**ದ್ವಾದಶ ದ್ವಾದಶೀರ್ಹಂತಿ ಪೂರ್ವೇದ್ಯುಃ ಪಾರಣೇ ಕೃತೇ ॥ ೧೬೧ ॥**

ಅ: ಒಂದು ಕಲೆಯಾಗಲೀ ಘಳಿಗೆಯಾಗಲೀ ಮಾರನೆಯದಿನವೂ ಸಹ ದ್ವಾದಶೀತಿಥಿಯು ಇದ್ದಲ್ಲಿ ಹಿಂದಿನ ದಿನದಂದೇ ಪಾರಣೆ ಮಾಡಿದಲ್ಲಿ ಹನ್ನೆರಡು ದ್ವಾದಶಿ ವ್ರತಗಳ ಫಲವು ನಾಶವಾಗುವುದು.

ವಿ: ೧. ದಶಮೀವಿದ್ಧವಾಗದಿದ್ದಲ್ಲಿ ಏಕಾದಶಿಯಂದು ಉಪೋಷಣೆ ಮಾಡಿ ದ್ವಾದಶಿಯಂದು ಪಾರಣೆಯು ವಿಹಿತ. ಆದರೆ ಆ ದ್ವಾದಶೀ ತಿಥಿಯು ತ್ರಯೋದಶಿಯ ಸೂರ್ಯೋದಯದ ಕಾಲದಲ್ಲೂ ಸಹ ಕಂಡುಬಂದಲ್ಲಿ ಏಕಾದಶಿಯೊಂದಿಗೆ ಮೊದಲ ದ್ವಾದಶಿಯಂದು ಸಹ ಉಪವಾಸವನ್ನೇ ಮಾಡಿ ತ್ರಯೋದಶಿಯಂದು ದ್ವಾದಶಿ ತಿಥಿ ಇರುವಾಗಲೇ ಪಾರಣೆ ಮಾಡಬೇಕು ಎಂದರ್ಥ.

೨. ಇಂತಹ ಪ್ರಸಂಗದಲ್ಲಿ ಎರಡು ಉಪವಾಸಗಳು ಎಂದಾಗುವುದು; ಇದೂ ಸಹ ಏಕಾದಶೀವ್ರತದಂತೆ ಕಡ್ಡಾಯವಾದದ್ದು; ಅತಿರಿಕ್ತದ್ವಾದಶಿ ಎಂದು ಎರಡನೆಯ ಉಪವಾಸಕ್ಕೆ ಹೆಸರು. ಇದನ್ನು ಯಾರು ಆಚರಿಸುವುದಿಲ್ಲವೋ ಅವರು ಹನ್ನೆರಡು ದ್ವಾದಶೀವ್ರತಗಳ ಫಲವನ್ನು ಕಳೆದುಕೊಳ್ಳುವರು ಎಂಬ ವಿಶೇಷಾಂಶ ಇಲ್ಲಿದೆ.

೩. ಶ್ರವಣದ್ವಾದಶಿಯಂತೆ ಈ ಅತಿರಿಕ್ತದ್ವಾದಶಿಯೂ ಸಹ ಉಪೋಷಣಾರ್ಹ.

೪. ಕಲಾ, ಘಳಿಗೆ ಮೊದಲಾದವುಗಳ ವಿವರಣೆ ಹೀಗಿದೆ:

**''ನಿಮಿಷಸ್ತ್ರಿಲವೋ ಜ್ಞೇಯ ಆಮ್ನಾತಸ್ತೇ ತ್ರಯಃ ಕ್ಷಣಃ ।**
**ಕ್ಷಣಾನ್ ಪಂಚ ವಿದುಃ ಕಾಷ್ಠಾಂ ಲಘು ತಾ ದಶ ಪಂಚ ಚ ।**
**ಲಘೂನಿ ಚ ಸಮಾಮ್ನಾತಾ ನಾಡಿಕಾ ದಶ ಪಂಚ ಚ ॥''**

**- ಭಾಗವತ (೩/೧೧/೭,೮)**

**ಅರುಣೋದಯತಃ ಪೂರ್ವಂ ಕಲಾವೇಧವಿದೂಷಿತಾ ।**
**ಕಲೇತಿ ಘಟಿಕಾ ಪ್ರೋಕ್ತಾ ಮಹಾವ್ಯದ್ಧೌ ಮಹೀಪತೇ ॥**

**- ಸ್ಕಾಂದವಚನ (ತರಂಗಮಾಲಾದಲ್ಲಿ ಉದ್ಧೃತ)**

---

೧. ಏಕಾದಶೀ ಹಾಗೂ ಅತಿರಿಕ್ತದ್ವಾದಶೀ - ಈ ಎರಡು ದಿನಗಳಂದೂ ಉಪವಾಸವನ್ನು ತಪ್ಪದೇ ಆಚರಿಸಲೇಬೇಕು ಎಂಬುದು ಈ ಮಾತಿನ ಸ್ಪಷ್ಟಸಂದೇಶ. ವಿಷಯ ಹೀಗಿದ್ದರೂ, ಇತ್ತೀಚೆಗೆ ಕೆಲವರು, ಕೆಲವು ಅವೈಷ್ಣವನಿಬಂಧಗ್ರಂಥಗಳಲ್ಲಿನ ಉಲ್ಲೇಖಗಳನ್ನು ಆಧರಿಸಿ ಇಂತಹ ಪ್ರಸಂಗದಲ್ಲಿ ಒಂದು ಉಪವಾಸ ಮಾತ್ರ ಸಾಕು ಎಂಬ ವಾದವನ್ನು ಹೂಡತೊಡಗಿರುವುದು ಅತ್ಯಂತ ವಿಷಾದಕರ. ಶ್ರೀಮದಾಚಾರ್ಯರ ಸ್ಪಷ್ಟನಿರ್ಣಯವನ್ನು ಸಾವಕಾಶವಾದ ನಿಬಂಧಗ್ರಂಥಗಳಲ್ಲಿನ ಉಲ್ಲೇಖಗಳಿಂದ ಕೈಬಿಡುವುದು ಸರ್ವಥಾ ಸಲ್ಲದು.

– ಎಂದರೆ ಮೂರು ಲವಕಾಲ ಒಂದು ನಿಮಿಷ; ಮೂರು ನಿಮಿಷಗಳು ಒಂದು ಕ್ಷಣ; ಐದು ಕ್ಷಣಗಳು ಒಂದು ಕಾಷ್ಠ; ಹದಿನೈದು ಕಾಷ್ಠಗಳು ಲಘು; ಹದಿನೈದು ಲಘುಗಳು ಒಂದು ನಾಡಿ. ಮಹಾವೃದ್ಧಿಪಕ್ಷದಲ್ಲಿ 'ಕಲಾ' ಎಂದರೆ ಘಳಿಗೆ ಎಂದರ್ಥ.

★★

**ಸಾಧನೀದ್ವಾದಶಿಯ ಆಚರಣೆ ಕಡ್ಡಾಯ**

**ಅತಿರಿಕ್ತಾ ದ್ವಾದಶೀ [೧]ಚೇತ್ ತಾಂ ನೋಪೋಷಯೇದ್ಯದಿ ।**
**ದ್ವಾದಶ ದ್ವಾದಶೀರ್ಹಂತಿ ದ್ವಾದಶೀ ಚಾತಿಲಂಘಿತಾ ॥ ೧೬೨ ॥**

**ಅ:** ದ್ವಾದಶಿಯು ಹೀಗೆ ಅತಿರಿಕ್ತವಾಗಿದ್ದಲ್ಲಿ ಅದನ್ನು ಯಾವನು ಉಪೋಷಣೆ ಮಾಡುವುದಿಲ್ಲವೋ ಅವನ ಹನ್ನೆರಡು ದ್ವಾದಶೀ ವ್ರತಗಳು ನಾಶವಾಗುವವು; ಅದರಂತೆ ದ್ವಾದಶಿಯಂದು ಸಾಧನೆಯಿದ್ದಲ್ಲಿ ಅದನ್ನು ಆಚರಿಸದಿದ್ದವನಿಗೂ ಸಹ.

ವಿ: ೧. ಅತಿರಿಕ್ತದ್ವಾದಶಿಯಂದು ಉಪವಾಸ ಕರ್ತವ್ಯ ಎಂದು ತಿಳಿಸುವ ಮತ್ತೊಂದು ವಾಕ್ಯ ಇದು; ಇಲ್ಲಿ ದ್ವಾದಶಿಯಂದು ಸಾಧನಿಯಿದ್ದಾಗ ಅದು ಪೂರೈಸುವ ಮುನ್ನವೇ ಪಾರಣೆ ಕಡ್ಡಾಯ ಎಂಬ ವಿಶೇಷಾಂಶ ಸಹ ಇಲ್ಲಿ ನಿರೂಪಿತವಾಗಿದೆ:

**ದಶಮೀವೇಧರಹಿತಾ ಪರತೋ ದ್ವಾದಶೀ ಯದಿ ।**
**ಅತಿರಿಕ್ತಾ ತು ಸಾ ಜ್ಞೇಯಾ ಸರ್ವಪಾಪಪ್ರಣಾಶನೀ ॥ – ಸ್ಮೃತಿ**

೨. ದ್ವಾದಶಿಯಂದು ಹರಿವಾಸರವಿದ್ದಲ್ಲಿ ಅದು ಪೂರೈಸಿದನಂತರವೇ ನೈವೇದ್ಯ ವೈಶ್ವದೇವ ಬ್ರಹ್ಮಯಜ್ಞಾದಿಗಳನ್ನು ಆಚರಿಸಿ ಅನಂತರ ಪಾರಣೆ ಮಾಡಬೇಕು. ದಶಮಿಯಂದು ಹರಿವಾಸರವಿದ್ದಲ್ಲಿ ಅದು ಬರುವ ಮುನ್ನವೇ ರಾತ್ರಿಯ ಫಲಾಹಾರವನ್ನು ಪೂರೈಸಬೇಕು. ಈ ದಶಮೀ ದ್ವಾದಶೀ ಹರಿವಾಸರಗಳ ಉಲ್ಲೇಖ ವಿಷ್ಣುತೀರ್ಥೀಯದಲ್ಲಿದೆ:

**ಏಕಾದಶ್ಯಾಃ ಪ್ರಾಂತಭಾಗೋ ದ್ವಾದಶ್ಯಾಃ ಪೂರ್ವ ಏವ ಚ ।**
**ಹರಿವಾಸರಸಂಜ್ಞೋಽಸೌ ನ ಕುರ್ಯಾತ್ ತತ್ರ ಪಾರಣಮ್ ॥**
**ದ್ವಾದಶ್ಯಾ ಆದ್ಯಪಾದಸ್ತು ಕೀರ್ತಿತೋ ಹರಿವಾಸರಃ ।**
**ಮಹಾದೋಷಕರಂ ಚಾನ್ನಂ ಸಂಪ್ರಾಪ್ತೇ ಹರಿವಾಸರೇ ॥**
**ತರ್ಪಣಂ ಶ್ರಾದ್ಧಹೋಮಾದಿ ನಿತ್ಯನೈಮಿತ್ತಿಕಂ ತಥಾ ।**
**ಕುರ್ವೀತ ಜಲಪಾನಾದಿ ವ್ಯತೀತೇ ಹರಿವಾಸರೇ ॥ (ಉ)**

★★

೧. ಚೇದ್ಯಸ್ತಾಂ ನೋಪೋಷಯೇದ್ಯದಿ( ಪಾ.)

## ಅತಿರಿಕ್ತದ್ವಾದಶಿಯಂದು ಉಪವಾಸವು ಕಡ್ಡಾಯ

**ದ್ವಾದಶ್ಯಾಮತಿರಿಕ್ತಾಯಾಂ ಯೋ ಭುಂಕ್ತೇ ಪೂರ್ವವಾಸರೇ ।**
**ದ್ವಾದಶ ದ್ವಾದಶೀರ್ಹಂತಿ ದ್ವಾದಶೀಂ ನ ಪರಿತ್ಯಜೇತ್ ॥ ೧೬೩ ॥**

ಅ: ದ್ವಾದಶಿಯು ಅತಿರಿಕ್ತವಾಗಿದ್ದಲ್ಲಿ ಯಾವನು ಹಿಂದಿನ ದಿನವೇ ಪಾರಣೆ ಮಾಡುವನೋ ಅವನು ಹನ್ನೆರಡು ದ್ವಾದಶೀವ್ರತಗಳ ಪುಣ್ಯವನ್ನು ಕಳೆದುಕೊಳ್ಳುವನು; ಆದ್ದರಿಂದ ಅತಿರಿಕ್ತದ್ವಾದಶೀ ಉಪವಾಸವನ್ನು ಎಂದೂ ತ್ಯಜಿಸಕೂಡದು.

ವಿ: ೧. ಅತಿರಿಕ್ತದ್ವಾದಶಿಯಂದು ಉಪವಾಸವನ್ನು ವಿಧಿಸುವ ಮತ್ತೊಂದು ಶ್ಲೋಕವಿದು; ಅದರಂತೆ ದ್ವಾದಶಿಯಂದು ಸಕಾಲಕ್ಕೆ ಪಾರಣೆಯನ್ನೂ ಸಹ.

೨. ಹೀಗೆ ಮೂರು ಶ್ಲೋಕಗಳಲ್ಲಿ ಅತಿರಿಕ್ತದ್ವಾದಶಿಯ ಉಪವಾಸವನ್ನು ಶ್ರೀಮದಾ-ಚಾರ್ಯರು ವಿಶೇಷವಾಗಿ ತಿಳಿಸಿರುವರು.

೩. ದಶಮ್ಯಾದಿದಿನತ್ರಯದ ನಿರ್ಣಯಕ್ಕೂ ಆರ್ಯಮಾನದ ಗಣನೆಯೇ ವಿಹಿತ ಎಂಬ ವಿಶೇಷಾಂಶ ಸ್ಮೃತಿಮುಕ್ತಾವಲಿಯಲ್ಲಿದೆ:

**(ಆಧುನಿಕಾಃ)..... ದಶಮ್ಯಾದಿದಿನತ್ರಯೇ ಅಧಿಕಸಿದ್ಧಾಂತೇನ ಗಣನಾಕರ್ತವ್ಯತ್ವ-ಸಿದ್ಧೇಽಪಿ ದ್ವಾದಶ್ಯಾಃ ಆರ್ಯಭಟೀನ ಗಣನಂ ನಾಸ್ತಿ ಕಿಂತು ಸಿದ್ಧಾಂತೇನೈವೇತಿ ಮತ್ವಾ ಹರಿವಾಸರಾನಂತರಂ ಪೂರ್ವದಿನೇ ಏವ ಪಾರಣಂ ಕುರ್ವತೇ । ಅಸ್ಮದ್ಗುರುಶಿರೋಮಣಯಸ್ತು ಯಥಾ ಸಂಪ್ರದಾಯಮಾಚರಂತೀತಿ ಸರ್ವಮನವದ್ಯಮ್ ॥**

**ಬ್ರಾಹ್ಮೇಣ ಪೈತೃಕಾದೀನಿ ದೈವಕಾರ್ಯಾಣಿ ಸೌರತಃ ।**
**ದ್ವಾದಶ್ಯಾದಿವ್ರತಂ ತತ್ರ ಆರ್ಯೇಣೈವ ತು ಕಾರಯೇತ್ ॥ – ನಿರ್ಣಯಸಾರ**

★★

## ಶ್ರವಣದ್ವಾದಶಿಯಂದು ಸಹ ಉಪವಾಸ ಕರ್ತವ್ಯ

**ದ್ವಾದಶೀಂ ಶ್ರವಣೋಪೇತಾಂ ಯೋ ನೋಪೋಷ್ಯಾತ್ ಸುಮಂದಧೀಃ ।**
**ಪಂಚಸಂವತ್ಸರಕೃತಂ ಪುಣ್ಯಂ ತಸ್ಯ ವಿನಶ್ಯತಿ ॥ ೧೬೪ ॥**

ಅ: ಶ್ರವಣನಕ್ಷತ್ರದಿಂದ ಕೂಡಿದ ದ್ವಾದಶಿಯಂದು ಯಾವನು ಉಪವಾಸ-ವನ್ನು ಆಚರಿಸುವುದಿಲ್ಲವೋ ಅವನು ತಿಳಿಗೇಡಿ ಎನ್ನಿಸುವನು; ಅವನು ಮಾಡಿದ ಐದು ವರ್ಷಗಳ ಪುಣ್ಯ ಸಂಪೂರ್ಣವಾಗಿ ನಾಶ ಹೊಂದುವುದು.

ವಿ: ೧. ೧೪೨ನೆಯ ಶ್ಲೋಕದಲ್ಲಿ ಪ್ರಸ್ತಾಪಿಸಿದ್ದ ಶ್ರವಣದ್ವಾದಶಿಯ ಉಪವಾಸವನ್ನು ಇಲ್ಲಿ ವಿವರಿಸುತ್ತಿರುವರು. ಅತಿರಿಕ್ತದ್ವಾದಶಿಯಂದು ಉಪವಾಸವು ಕಡ್ಡಾಯವಾಗಿ-ರುವಂತೆ ಶ್ರವಣ ದ್ವಾದಶಿಯಂದು ಸಹ ಉಪವಾಸವು ಕಡ್ಡಾಯ ಎಂದರ್ಥ.

೨. ಈ ಶ್ರವಣದ್ವಾದಶೀ ಉಪವಾಸನಿರ್ಣಯವು ವಿಷ್ಣುಪಂಚಕದವರಿಗೆ ಸ್ವಲ್ಪ ವ್ಯತ್ಯಾಸವಾಗುವುದುಂಟು; ಸರ್ವರೂ ಉಪವಾಸಮಾಡಬೇಕಾದ ಶ್ರವಣದ್ವಾದಶಿ-ಯಂದು ಇರುವ ಶ್ರವಣನಕ್ಷತ್ರದ ಪರಿಮಾಣವು ವಿಷ್ಣುಪಂಚಕವ್ರತವನ್ನು ಕೈಗೊಂಡವರು ಮಾತ್ರ ಆಚರಿಸಬೇಕಾದ ಶ್ರವಣದ್ವಾದಶಿಗಿಂತ ಭಿನ್ನವಾದುದು.

೩. ಸರ್ವರೂ ಉಪವಾಸ ಮಾಡುವಂತಹ ಶ್ರವಣದ್ವಾದಶಿಯಾದಲ್ಲಿ ಅಂದು ವಿಷ್ಣುಪಂಚಕ ದೀಕ್ಷೆ ಹೊತ್ತವರೂ ಸಹ ಉಪವಾಸ ಆಚರಿಸಲೇಬೇಕು. ಆದರೆ ವಿಷ್ಣುಪಂಚಕದವರು ಮಾತ್ರ ಆಚರಿಸಬೇಕಾದ ಶ್ರವಣದ್ವಾದಶಿಯಂದು ಇತರರು ಉಪವಾಸವನ್ನು ಆಚರಿಸಬೇಕಿಲ್ಲ ಎಂಬುದು ವಿಶೇಷ.

**ಮಧ್ಯಾಹ್ನವ್ಯಾಪಿನೀ ಶ್ರೋಣಾ ಸದೋಪೋಷ್ಯಾ ವಿಚಕ್ಷಣೈಃ । -ವಿಷ್ಣುತೀರ್ಥೀಯ**
**ಶುಕ್ಲಾ ವಾ ಯದಿ ವಾ ಕೃಷ್ಣಾ ದ್ವಾದಶೀ ಶ್ರವಣಾನ್ವಿತಾ ।**
**ತತ್ರೋಪವಾಸಂ ಕುರ್ವೀತ ಏಕಾದಶ್ಯಾಃ ಶತಂ ಫಲಮ್ ॥ (ತಾ)**
**ದಿನಾರ್ಧಸಂಯುತಾ ಶ್ರೋಣಾ ದ್ವಾದಶ್ಯಾ ಸಹ ಸಂಯುತಾ ।**
**ತಾಮುಪೋಷ್ಯ ವ್ರತಂ ಕುರ್ಯಾದ್ ವಾಮನಸ್ಯಾತಿವಲ್ಲಭಾಮ್ ॥**
**ಉದಯಾದಭಿಜಿಲ್ಲಗ್ನಗಾಮಿನೀ ಶ್ರುತಿವಾಸರೇ ।**
**ಫಾಲ್ಗುನೇ ಪ್ರೋಷ್ಠಪದ್ಯಾಂ ವಾ ಹ್ಯುಪೋಷ್ಯ ವ್ರತಮಾಚರೇತ್ ॥ (ತಾ)**
**ಏವಂ ಶ್ರೋಣೋದಯದ್ವಂದ್ವಸ್ಪರ್ಶಿನೀ ಚ ಯದಾ ಭವೇತ್ ।**
**ಪೂರ್ವೇದ್ಯುರ್ವಾ ಪರೇದ್ಯುರ್ವಾ ನೋಪೋಷ್ಯಾ ಪುಣ್ಯಹಾನಿದಾ ॥ - ವಿಷ್ಣುರಹಸ್ಯ**
**ಉದಯದ್ವಯಸಂಸ್ಪೃಷ್ಟಾ ಶ್ರೋಣಾಯುಕ್ತಾ ಹರಿರ್ಯದಿ ।**
**ತದಾ ನೋಪೋಷಣಂ ಕಾರ್ಯಂ ವೈಷ್ಣವೈರ್ವಿಷ್ಣುತತ್ಪರೈಃ ॥ (ತಾ)**
**ಏಕೋನಷಷ್ಟಿಘಟಿಕಾತ್ರಯಸ್ತ್ರಿಂಶತ್ ಪಲಾಧಿಕಾ ।**
**ಶ್ರೋಣಾ ಚ ಪೌರ್ಣಮಾಸೀ ಚ ನೋಪೋಷ್ಯಾ ವಿಷ್ಣುತತ್ಪರೈಃ ॥ (ತಾ)**
**ಏಕೋನಷಷ್ಟಿಘಟಿಕಾ ತ್ರಯಸ್ತ್ರಿಂಶತ್ ಪಲಾಧಿಕಾ ।**
**ಶ್ರೋಣಾ ಭವೇದ್ಯದಿ ತದಾ ನೋಪೋಷ್ಯಾ ವಿಷ್ಣುತತ್ಪರೈಃ ॥ (ತಾ)**
**ಶ್ರವಣದ್ವಾದಶೀ ಯತ್ರ ಮಧ್ಯಾಹ್ನಾದೂರ್ಧ್ವಮಪ್ಯಣು ।**
**ತಜ್ಜಯಂತ್ಯಾಮುಪೋಷ್ಯಂ ಸ್ಯಾನ್ನ್ಯೂನಂ ಚೇನ್ನೈವ ಕಾರಯೇತ್ ॥**
**ದ್ವಾದಶ್ಯಾಂ ಶ್ರವಣಂ ಚೇತ್ ಸ್ಯಾದುದಯದ್ವಯಸಂಯುತಮ್ ।**
**ಉತ್ತರಾಷಾಢಸಂಯುಕ್ತಂ ನೈವೋಪೋಷ್ಯಂ ಕದಾಚನ ॥**

ಉತ್ತರಾಷಾಢಸಂಯುಕ್ತಶ್ರವಣದ್ವಾದಶೀ ಯದಿ ।
ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭ ಇವ ಸಂತ್ಯಜೇತ್ ।
ಏಕೋನಷಷ್ಟಿಘಟಿಕಾಂ ಶ್ರವಣದ್ವಾದಶೀಂ ತ್ಯಜೇತ್ ।
ಏಕೋನ ಷಷ್ಟಿಘಟಿಕಾ ಯದಿ ಶ್ರೋಣಾ ಪ್ರದೃಶ್ಯತೇ ।
ದ್ವಾದಶೀ ಸಹಿತಾ ವಾಪಿ ನೋಪೋಷ್ಯಾ ವಿಷ್ಣುತತ್ಪರೈಃ ॥ (ಉ) -ವ್ಯಾಸಸಂಹಿತಾ
ಉತ್ತರಾಷಾಢಸಂಯುಕ್ತಾ ಶ್ರೋಣಾ ಪುತ್ರಸ್ಯ ಹಾನಿದಾ ।
ಘಟಿಕಾದ್ವಾದಶಾದರ್ವಾಕ್ ಶಿಷ್ಟಾ ಜ್ಞಾನಸ್ಯ ಹಾನಿದಾ ॥
ಏವಂ ಶ್ರೋಣಾ ದಿನದ್ವಂದ್ವಸ್ಪರ್ಶಿನೀ ಚ ಭವೇದ್ ಯದಿ ।
ಪೂರ್ವೇದ್ಯುರ್ವಾ ಪರೇದ್ಯುರ್ವಾ ನೈವೋಪೋಷ್ಯಾಽರ್ಥಹಾನಿದಾ ॥
ಪೂರ್ವೇದ್ಯುರುತ್ತರಾಮಿಶ್ರಾ ಪರೇದ್ಯುಃ ಸಾ ಯದಾ ಪುನಃ ।
ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ ಜ್ಞಾನಮೋಕ್ಷಫಲಪ್ರದಾ ॥ (ಉ) - ಸಂವರ್ತ

ಅರುಣೋದಯವೇಲಾಯಾಂ ಅಭಿಜಿತ್‌ಸ್ಪರ್ಶಸಂಯುತಾ ।
ಶ್ರೋಣಾ ಚೇತ್ ಷಷ್ಟಿಘಟಿಕಾ ನೋಪೋಷ್ಯಾ ವಿಷ್ಣುತತ್ಪರೈಃ ॥ (ಕೋ)

★★

## ಎರಡು ಉಪವಾಸಗಳ ಪ್ರಸಂಗ

**ಏಕಾದಶೀಮುಪೋಷ್ಯಾಥ ದ್ವಾದಶೀಮಪ್ಯುಪೋಷಯೇತ್ ।**
**ನ ತತ್ರ ವಿಧಿಲೋಪಃ ಸ್ಯಾದುಭಯೋರ್ದೇವತಾ ಹರಿಃ ॥ ೧೬೫ ॥**

ಅ: (ಈ ಪ್ರಸಂಗಗಳಲ್ಲಿ) ಏಕಾದಶಿಯಂದು ಉಪೋಷಣೆ ಮಾಡಿ ಬಳಿಕ ದ್ವಾದಶಿಯಂದೂ ಸಹ ಉಪವಾಸವನ್ನು ಆಚರಿಸಬೇಕು; ಇವೆರಡಕ್ಕೂ ಶ್ರೀಹರಿಯೇ ದೇವತೆಯಾದ್ದರಿಂದ ವಿಧಿಲೋಪವಾಗದು.

ವಿ: ೧. ಶ್ರವಣದ್ವಾದಶಿಯಂದು ಉಪವಾಸ ಮಾಡುವ ಪ್ರಸಂಗ ಒದಗಿದಾಗ ಹಿಂದೆ ಹೇಳಿದಂತೆ ಆ ಬಾರಿ ಎರಡು ಉಪವಾಸಗಳು ಎಂದಾಗುವುದು; ದ್ವಾದಶೀವ್ರತವು ವಿಷ್ಣುವ್ರತ; ಅಂದು ಪಾರಣೆ ಮಾಡಿ ವ್ರತಪೂರೈಸದಿದ್ದಲ್ಲಿ ವ್ರತಭಂಗವಾಗುವುದಿಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತರವಿದೆ; ದ್ವಾದಶಿಗೆ ವಿಷ್ಣುವು ದೇವತೆಯಾಗಿರುವಂತೆ ಶ್ರವಣನಕ್ಷತ್ರಕ್ಕೂ ವಿಷ್ಣುವೇ ದೇವತೆಯಾಗಿರುವುದರಿಂದ ಅದು ಒದಗಿದ ದ್ವಾದಶಿಯಂದು ಉಪವಾಸ ಆಚರಿಸುವುದು ದ್ವಾದಶೀವ್ರತಕ್ಕೆ ಭಂಗ ಉಂಟು ಮಾಡದು ಎಂದರ್ಥ :

ಶುಕ್ಲಾ ವಾ ಯದಿ ವಾ ಕೃಷ್ಣಾ ದ್ವಾದಶೀ ಶ್ರವಣಾನ್ವಿತಾ ।
ತತ್ರೋಪವಾಸಂ ಕುರ್ವೀತ ಏಕಾದಶ್ಯಾಃ ಶತಂ ಫಲಮ್ ॥ - ನಾರದೀಯ

ದ್ವಾದಶ್ಯಾಮಾದ್ಯಪಾದಸ್ತು ಸಂಗವಾತ್ ಪರತೋ ಯದಿ ।
ಉಪವಾಸದ್ವಯಂ ಕಾರ್ಯಮನ್ಯಥಾ ನರಕಂ ವ್ರಜೇತ್ ॥ - ವರಾಹಪುರಾಣ

೨. ಇದರಂತೆ ಅತಿರಿಕ್ತದ್ವಾದಶಿಗೂ ಶ್ರೀಹರಿಯೇ ದೇವತೆಯಾದ್ದರಿಂದ ಅಂದು ಉಪವಾಸ ಮಾಡುವುದರಿಂದ ಸಹ ವ್ರತಭಂಗದೋಷ ಒದಗದು ಎಂದರ್ಥ.

★★

## ಆಪತ್ಕಾಲದಲ್ಲಿ ಸಾಧನೆಯ ಬಗ್ಗೆ ವಿಶೇಷ

**ಅಲ್ಪಾಯಾಮಪಿ ವಿಪ್ರೇಂದ್ರ ಪಾರಣಂ ತು ಕಥಂ ಭವೇತ್ ।**
**ಪಾರಯಿತ್ವೋದಕೇನಾಪಿ ಭುಂಜಾನೋ ನೈವ ದುಷ್ಯತಿ ॥ ೧೬೬ ॥**

**ಅ:** ದ್ವಾದಶೀತಿಥಿಯು ತುಂಬಾ ಸ್ವಲ್ಪ ಪ್ರಮಾಣದಲ್ಲಿದ್ದಾಗ ಪಾರಣೆ ಹೇಗೆ ಮಾಡುವುದು ಎನ್ನಬೇಕಿಲ್ಲ. ಆಗ ಕೇವಲ ಉದಕದಿಂದ ಪಾರಣೆ ಮಾಡಿ ಅನಂತರ ಭೋಜನ ಮಾಡಿದರೆ ಯಾವ ದೋಷವೂ ಇರದು.

ವಿ: ೧. ದ್ವಾದಶಿಯಂದು ಸಾಧನೆ ಕಡ್ಡಾಯ ಎಂದು ಹಿಂದೆ ತಿಳಿಸಿರುವರು. ಅಂತಹ ಸಾಧನೀದ್ವಾದಶಿಯು ತುಂಬಾ ಕಡಿಮೆ ಎಂದರೆ ಕೇವಲ ಕೆಲವೇ ನಿಮಿಷಗಳು ಅಥವಾ ಸೆಕೆಂಡುಗಳು ಮಾತ್ರ ಇದ್ದಾಗ ಆಗ ಪಾರಣೆ ಮಾಡುವುದು ಹೇಗೆ ಶಕ್ಯ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ; ಅಂತಹ ಪ್ರಸಂಗದಲ್ಲಿ ಸಮಗ್ರ ಪಾರಣೆಗೆ ಅವಕಾಶವಾಗದೇ ಹೋದಾಗ ಕೇವಲ ಉದಕವನ್ನಾದರೂ ಪಾನ ಮಾಡಿ ವ್ರತಭಂಗವಾಗದಂತೆ ಎಚ್ಚರವಹಿಸಬೇಕು ಎಂದರ್ಥ.

೨. ಕಲಾಮಾತ್ರಸಾಧನೀ ಎಂದರೆ ಸೂರ್ಯೋದಯವಾಗುತ್ತಿದ್ದಂತೆಯೇ ಪಾರಣೆ ಮಾಡುವ ಪ್ರಸಂಗ. ಅದು ಒದಗಿದಾಗ ವಿಶೇಷ ನಿಯಮಗಳನ್ನು ಶಾಸ್ತ್ರಗಳು ವಿಧಿಸಿವೆ. ಹಿಂದಿನ ರಾತ್ರಿಯ ಕೊನೆಯ ನಾಲ್ಕು ಗಂಟೆಗಳಲ್ಲಿ ಸ್ನಾನ, ಪಾಕ, ಪೂಜಾದಿಗಳನ್ನು ಮಾಡಬಹುದು. ಎಂದರೆ ಸೂರ್ಯೋದಯಕ್ಕಿಂತ ಮುಂಚಿತವಾಗಿ ಒಂದು ಯಾಮಕಾಲ ಮುಂಚಿತವಾಗಿಯೇ ಸ್ನಾನವನ್ನು ಪೂರೈಸಿ ಪಾಕ ಪೂಜಾದಿಗಳನ್ನೂ ಸಹ ಪೂರೈಸಲೇಬೇಕು; ನೈವೇದ್ಯ ವೈಶ್ವದೇವಗಳಂತೆ ಬ್ರಹ್ಮಯಜ್ಞವನ್ನೂ, ಮಾಧ್ಯಾಹ್ನಿಕವನ್ನೂ ಸಹ ಪೂರೈಸಬೇಕು. ಅಷ್ಟೇಕೆ ಅಂದು ಶ್ರಾದ್ಧತಿಥಿಯಿದ್ದಲ್ಲಿ ಸೂರ್ಯೋದಯಕ್ಕಿಂತ ಮುಂಚೆಯೇ ಪಿಂಡ-ಪ್ರದಾನಪೂರ್ವಕವಾದ ಸಮಸ್ತ ಶ್ರಾದ್ಧಕ್ರಿಯೆಯನ್ನೂ ಪೂರೈಸಬೇಕು; ವಿಷ್ಣುಭಕ್ತರಿಗೆ ತೀರ್ಥವನ್ನು ನೀಡಬೇಕು; ಬಡಿಸಿ ಪರಿಷೇಚನ ಚಿತ್ರಾಹುತಿಯನ್ನೂ ಸಹ ಪೂರೈಸಬೇಕು. ಆಪೋಶನವನ್ನು ಕೈಯಲ್ಲಿ ಹಾಕಿಕೊಂಡು ಸೂರ್ಯೋದಯವನ್ನು ಪ್ರತೀಕ್ಷಿಸುತ್ತಿರಬೇಕು. ಸೂರ್ಯೋದಯವಾಗುತ್ತಲೇ ಆಪೋಶನವನ್ನು ತೆಗೆದುಕೊಂಡು ಪಾರಣೆ ಪ್ರಾರಂಭಿಸ-ಬೇಕು ಎಂದರ್ಥ; ಹೀಗೆ ವಿಶೇಷವಿಧಿ ಇರುವುದರಿಂದ ಅಂತಹ ಪ್ರಸಂಗದಲ್ಲಿ ಪಾರಣೆ ಹೇಗೆ ಎಂಬ ಪ್ರಶ್ನೆಗೆ ಅವಕಾಶವಿಲ್ಲ ಎಂದಾಗುವುದು. ಪರಾಧೀನರಿಗೆ, ಬಡಿಸುವವರಿಗೆ ಸಾಧನೀದ್ವಾದಶಿಯಂದು ಸಕಾಲಕ್ಕೆ ಪಾರಣೆಯ ವಿಧಿ ಕಡ್ಡಾಯವಲ್ಲ ಎಂಬುದು ವಿಶೇಷ.

ಪತ್ನೀ ಪತಿವ್ರತಾ ಯಾ ಸ್ಯಾತ್ ಪರಾಧೀನೋಽಪಿ ಯೋ ನರಃ ।
ಸ ತೀರ್ಥಪಾರಣಂ ಕೃತ್ವಾ ಪಶ್ಚಾದ್ ಭುಕ್ತ್ವಾ ಫಲಂ ಲಭೇತ್ ॥
ಬ್ರಾಹ್ಮಣಾದೀನ್ ಭೋಜಯಿತ್ವಾ ತೀರ್ಥಂ ಪ್ರಾಶ್ಯ ಸ್ವಯಂ ಸುಧೀಃ ।
ಪಶ್ಚಾದ್ ಭುಂಜನ್ ಫಲಂ ಯಾತಿ ನಾತ್ರ ಕಾರ್ಯಾ ವಿಚಾರಣಾ ॥ ಇತಿ ॥ (ಉ)

೩. ಇನ್ನೂ ವಿಶೇಷ ಕಾರಣಗಳಿಂದಾಗಿ ಈ ರೀತಿಯ ಪಾರಣೆ ಸಾಧ್ಯವಿಲ್ಲವಾದಾಗ ಸಕಾಲಕ್ಕೆ ಸ್ವಲ್ಪ ಜಲವನ್ನು ಪ್ರಾಶನಮಾಡಿದರೆ ವ್ರತಭಂಗವಾಗದು ಎಂಬುದು ಮತ್ತೊಂದು ವಿಶೇಷ. ಅಂತಹ ಸಂದರ್ಭದಲ್ಲಿ ಉಚ್ಚರಿಸಬೇಕಾದ ಮಂತ್ರದ ವಿವರ ಮುಂದೆ ಬಂದಿದೆ (ಶ್ಲೋ ೧೭೦).

೪. ಎಂತಹ ವಿಶೇಷಸಾಧನೆಯ ಪ್ರಸಂಗದಲ್ಲೂ ಸಹ ಸೂರ್ಯೋದಯಕ್ಕಿಂತ ಮುಂಚಿತವಾಗಿ ಭೋಜನ ನಿಷಿದ್ಧ ಎಂಬುದು ಇಲ್ಲಿಯ ಮತ್ತೊಂದು ವಿಶೇಷಾಂಶ; ಇದರಿಂದ ಧನುರ್ಮಾಸದ ದಿನಗಳಲ್ಲಿಯೂ ಸಹ ಇದೇ ರೀತಿಯಾಗಿ ಸೂರ್ಯೋದಯ-ವಾಗುತ್ತಲೇ ಭೋಜನ ವಿಹಿತ ಎಂದಾಗುವುದು. ಯಾವುದೇ ಕಾರಣಕ್ಕೂ ಸೂರ್ಯೋದಯಕ್ಕಿಂತ ಮುಂಚಿತವಾಗಿ ಆಹಾರವನ್ನು ಸ್ವೀಕರಿಸುವ ಅವಕಾಶವನ್ನು ಶಾಸ್ತ್ರಗಳು ನೀಡಿಲ್ಲ. ಕೆಲವರು ಇದನ್ನು ಗಮನಿಸದೇ ಧನುರ್ಮಾಸಕಾಲದಲ್ಲಿ ಸೂರ್ಯೋದಯಕ್ಕಿಂತ ಮುಂಚಿತವಾಗಿಯೇ ಭೋಜನವನ್ನು ಪೂರೈಸುವ ತಪ್ಪನ್ನು ಮಾಡುವರು. ಆದರೆ ವರಾಹಪುರಾಣದಲ್ಲಿ ಸ್ಪಷ್ಟವಾಗಿ ಧನುರ್ಮಾಸದ ವಿಧಿಯನ್ನು ತಿಳಿಸುವಾಗ ಕಲಾಮಾತ್ರಸಾಧನಿಯಂದು ಹೇಗೋ ಹಾಗೆ ಧನುರ್ಮಾಸವನ್ನು ಆಚರಿಸಬೇಕು ಎಂದು ವಿಧಿಸಿರುವುದರಿಂದ ಸೂರ್ಯೋದಯಕ್ಕಿಂತ ಮುಂಚಿತ ಭೋಜನ ಸರ್ವಥಾ ನಿಷಿದ್ಧ ಎಂದು ಸಿದ್ಧವಾಗುವುದು.

೫. ಇದರಿಂದ ಧನುರ್ಮಾಸದ ದ್ವಾದಶಿಗಳನ್ನು ಮಾಸಧರ್ಮದಂತೆ, ಹರಿವಾಸರ-ವಿಲ್ಲದಿದ್ದಾಗ ಕಲಾಮಾತ್ರಸಾಧನಿಯಂತೆಯೇ ಆಚರಿಸಬೇಕು ಎಂಬ ಅತ್ಯಂತ ಮುಖ್ಯವಾದ ವಿಷಯ ನಿರೂಪಿತವಾದಂತಾಗುವುದು; ಅನೇಕರು ಇಂತಹ ಪ್ರಧಾನ ವಿವರವನ್ನು ಗಮನಿಸಿಲ್ಲ ಎಂಬುದು ಆಶ್ಚರ್ಯಕರ:

ಯದಾ ಭವೇದತೀವಾಲ್ಪಾ ದ್ವಾದಶೀ ಪಾರಣಾದಿನೇ ।
ಉಷಃ ಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂ ಚ ಯತ್ ॥
-ಸ್ಕಾಂದಪುರಾಣ

ಸಂಕಟೇ ವಿಷಮೇ ಪ್ರಾಪ್ತೇ ದ್ವಾದಶ್ಯಾಂ ಪಾರಯೇತ್ ಕಥಮ್ ।
ಅದ್ಭಿಸ್ತು ಪಾರಣಂ ಕುರ್ಯಾತ್ ಪುನರ್ಭುಕ್ತಂ ನ ದೋಷಕೃತ್ ॥ - ದೇವಲಃ

ಸಾಧನದ್ವಾದಶಿಯಂದು ಆಹ್ನಿಕವಿಚಾರ :-

ಕಲಾರ್ಧ್ವಂ ದ್ವಾದಶೀಂ ದೃಷ್ಟ್ವಾ ನಿಶೀಥಾದೂರ್ಧ್ವಮೇವ ತು ।
ಆಮಧ್ಯಾಹ್ನಾಃ ಕ್ರಿಯಾಃ ಸರ್ವಾಃ ಕರ್ತವ್ಯಾಃ ಶಂಭುಶಾಸನಮ್ ॥

- ಶ್ರೀಮದಾನಂದತೀರ್ಥಭಗವತ್ಪಾದಕೃತ ತಿಥಿನಿರ್ಣಯ
(ನಾರದೀಯಪುರಾಣ ಉತ್ತರಭಾಗ ೧/೧೦)

ತ್ರಯೋ ಯಾಮಾಸ್ತ್ರಿಯಾಮಾಯಾಸ್ತತ್ರಾದ್ಯೌ ಸಂತ್ಯಜೇದ್ ಬುಧಃ ।
ಭಾಗೇ ತೃತೀಯೇ ಸ್ನಾತ್ವಾ ತು ನಿತ್ಯಕರ್ಮಾಣಿ ಕಾರಯೇತ್ ॥
ಆಮಧ್ಯಾಹ್ನಾನಿ ಕರ್ಮಾಣಿ ರಾತ್ರಾವೇವ ವಿಧಾಯ ಚ ।
ಸ್ವಲ್ಪಾಯಾಮಪಿ ಭದ್ರಾಯಾಂ ಪಾರಣಂ ರವಿದರ್ಶನೇ ॥
ಯದಾ ತು ಸೂರ್ಯೋದಯಾತ್ ಪೂರ್ವಂ ಘಟಿಕೈಕಾಽವಶಿಷ್ಯತೇ ।
ಸ ವೈ ಸೂರ್ಯೋದಯೋ ನಾಮ ಮುನಿಭಿಃ ಪರಿಕೀರ್ತಿತಃ ॥
ತತ್ಪೂರ್ವಘಟಿಕೈಕಾ ತು ಪ್ರಾತಃಕಾಲ ಇತೀರಿತಃ ।
ಮಾಧ್ಯಾಹ್ನಿಕಂ ತದಾ ಕುರ್ಯಾದ್ಧೋಮಂ ಸೂರ್ಯೋದಯೇ ತಥಾ ॥
ವೈಶ್ವದೇವಂ ತತಃ ಕೃತ್ವಾ ಬ್ರಹ್ಮಯಜ್ಞಂ ಚ ತರ್ಪಣಮ್ ।
ಆಪೋಶನಂ ವಿಧಾಯೈವ ಪ್ರತೀಕ್ಷೇದ್ರವಿದರ್ಶನಮ್ ॥
ಅರುಣೋದಯತಃ ಪೂರ್ವಂ ಕೃತಂ ಸ್ನಾನಂ ವೃಥಾ ಭವೇತ್ ।
ಯತಃ ಪರ್ಯುಷಿತಂ ತತ್ ಸ್ಯಾತ್ ಸಾಧನದ್ವಾದಶೀಂ ವಿನಾ ।
ಸಾಧನೀಯಾಽತಿಯತ್ನೇನ ಯತಃ ಸಾ ಸಾಧನೀ ಮತಾ ॥ - ವರಾಹಪುರಾಣ

ದಿನತ್ರಯನಿಯಮಗಳು :-

ಶಾಕಂ ತೈಲಂ ದಿವಾಸ್ವಾಪಂ ಪುನರ್ಭೋಜನೇ ಮೈಥುನೇ ।
ಉಷ್ಣೋದಕಾತ್ಯಂಬುಪಾನಂ ದಶಮ್ಯಾಂ ವೈಷ್ಣವಸ್ತ್ಯಜೇತ್ ॥
ಅಸಕೃಜ್ಜಲಪಾನಂ ಚ ಹಿಂಸಾಂ ವೈರಮಸತ್ಯತಾಮ್ ।
ತಾಂಬೂಲಂ ದಂತಕಾಷ್ಠಂ ಚ ದಿವಾಸುಪ್ತಿಂ ಚ ಸಂಗಮಮ್ ॥
ದ್ಯೂತಕ್ರೀಡಾಂ ನಿಶಾನಿದ್ರಾಂ ವರ್ಜಯೇದ್ ಹರಿವಾಸರೇ ।
ಶಾಕಂ ಮಧು ಪರಾನ್ನಂ ಚ ಪುನರ್ಭೋಜನಮೈಥುನೇ ॥
ಚಣಕಂ ಚ ದಿವಾಸ್ವಾಪಂ ತಾಂಬೂಲಂ ತಿಲಪಿಷ್ಟಕಮ್ ।
ಕಾಂಸ್ಯಂ ತೈಲಂ ಪುನರ್ಭುಕ್ತಂ ವರ್ಜಯೇದ್ ದ್ವಾದಶೀದಿನೇ ॥

-ಸ್ಮೃತಿಮುಕ್ತಾವಲೀ

ದಿನತ್ರಯವ್ರತದಲ್ಲಿ ಒಟ್ಟಾಗಿ ನಾಲ್ಕುಭೋಜನಗಳನ್ನು ತೊರೆಯಬೇಕು ಎಂಬುದಾಗಿ ಶ್ರೀಮದಾನಂದತೀರ್ಥಪ್ರಣೀತ ತಿಥಿನಿರ್ಣಯ ಗ್ರಂಥದಲ್ಲಿದೆ (೨೭) -

ಉಪವಾಸಫಲಪ್ರೇಪ್ಸುರ್ಜಹ್ಯಾದ್ ಭುಕ್ತಿಚತುಷ್ಟಯಮ್ ।
ಪೂರ್ವಾಪರೇ ತು ಸಾಯಾಹ್ನೇ ಸಾಯಂಪ್ರಾತಸ್ತು ಮಧ್ಯಮೇ ॥ ಇತಿ

ದಶಮೀ ದ್ವಾದಶಿಗಳಂದು ಪರಾನ್ನಭೋಜನದಿಂದ ಪುಣ್ಯಹಾನಿ :-

ಪರಾನ್ನಂ ಯೋ ಹಿ ಭುಂಜೀತ ದಶಮ್ಯಾಂ ದ್ವಾದಶೀದಿನೇ ।
ಏಕಾದಶೀವ್ರತಸ್ಯಾಸ್ಯ ದಶಮ್ಯಾಂ ತುರ್ಯಭಾಗತಃ ।
ದ್ವಾದಶ್ಯಾಮರ್ಧಭಾಗಶ್ಚ ದಾತಾರಮಧಿಗಚ್ಛತಿ । - ವರಾಹಪುರಾಣ

ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ । ನ ಯೋಗ್ಯಃ ॥
- ಮ.ಭಾ.ತಾ.ನಿ(೨೩/೪)

ಏಕಾದಶಿಯಂದು ದಂತಧಾವನನಿಷೇಧ (ಎಂದರೆ ದಶಮೀರಾತ್ರಿಯಂದೇ ದಂತ-ಧಾವನ ಪೂರೈಸಬೇಕು) :-

ದಶಮ್ಯಾಮೇಕಭುಗ್ ಭೂತ್ವಾ ಖಾದಯೇತ್ ದಂತಧಾವನಮ್ ।
ತತ್ರ ದಶಮ್ಯಾಮೇಕಭುಕ್ತಂ ಕೃತ್ವಾ ರಾತ್ರೌ ದಂತಧಾವನಂ ಕುರ್ಯಾತ್ ।
- ಇತಿ ಸ್ಮೃತಿಮುಕ್ತಾವಲೀ

ಅಪರಾಹ್ಣೇ ಪುನಃ ಕುರ್ಯಾದ್ ವಿಧಿನಾ ದಂತಧಾವನಮ್ ।
- ಇತಿ ಪಾದ್ಮಪುರಾಣ ಕ್ರಿಯಾಯೋಗಸಾರಖಂಡ (೨೨/೮೪)

ಅಭಾವೇ ದಂತಕಾಷ್ಠಾನಾಂ ನಿಷಿದ್ಧೇ ಚ ತಥಾಽಹನಿ ।
ಅಪಾಂ ದ್ವಾದಶಗಂಡೂಷೈಃ ಪರ್ಣೈರ್ವಾ ದಂತಧಾವನಮ್ ।
-ಯೋಗದೀಪಿಕಾ (೨/೨೬)

ದಶಮೀಸಂಕಲ್ಪಮಂತ್ರ :-

ದಶಮೀದಿವಸೇ ಪ್ರಾಪ್ತೇ ವ್ರತಸ್ಥೋಽಹಂ ಜನಾರ್ದನ ।
ತ್ರಿದಿನಂ ದೇವದೇವೇಶ ನಿರ್ವಿಘ್ನಂ ಕುರು ಕೇಶವ ॥

ಏಕಾದಶೀಸಂಕಲ್ಪಮಂತ್ರ :-

ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹನಿ ಪರೇ ಹ್ಯಹಮ್ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥

(ಅದ್ಯ ಸ್ಥಿತ್ವಾ ನಿರಾಹಾರಃ ಶ್ವೋಭೂತೇ ಪರಮೇಶ್ವರ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಅಸ್ಮಿನ್ನೇಕಾದಶೀವ್ರತೇ ॥)

ಎರಡು ಉಪವಾಸಗಳ ಪ್ರಸಂಗದಲ್ಲಿ ಏಕಾದಶಿಯಂದು ಸಂಕಲ್ಪಮಂತ್ರ :-

ಅದ್ಯ ಶ್ವಶ್ಚ ನಿರಾಹಾರೋ ಭೂತ್ವಾಽಹಂ ದ್ವಾದಶೀದಿನೇ ।
ವಿಧಾಸ್ಯೇ ಪಾರಣಂ ದೇವ ಪ್ರೀತೋ ಭವ ಮಮಾನಿಶಮ್ ॥

ದ್ವಾದಶಿಯಂದು ಸಂಕಲ್ಪಮಂತ್ರ :-

**ಅದ್ಯ ಮೇ ದ್ವಾದಶೀ ಪುಣ್ಯಾ ಪವಿತ್ರಾ ಪಾಪನಾಶಿನೀ ।**
**ಪಾರಣಂ ಚ ಕರಿಷ್ಯಾಮಿ ಪ್ರಸೀದ ಗರುಡಧ್ವಜ ॥**

**ಏಕಾದಶ್ಯುಪವಾಸೇನ ದ್ವಾದಶ್ಯಾಂ ಪಾರಣೇನ ಚ ।**
**ಯದರ್ಜಿತಂ ಮಯಾ ಪುಣ್ಯಂ ತೇನ ಪ್ರೀಣಾತು ಕೇಶವಃ ॥**

**- ಪಂಚಸಂಸ್ಕಾರಸಂಗ್ರಹ (ಉ)**

**ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ।**
**ಪ್ರಸೀದ ಸುಮುಖೋ ನಾಥ ಜ್ಞಾನದೃಷ್ಟಿಪ್ರದೋ ಭವ ॥**

★★

## ಸಾಧನೀದ್ವಾದಶಿಯಂದು ಆಹ್ನಿಕದ ಬಗ್ಗೆ ವಿಶೇಷ

**ಯದಾಽಲ್ಪಾಂ ದ್ವಾದಶೀಂ ದೃಷ್ಟ್ವಾ ನಿಶೀಥಾದೂರ್ಧ್ವಮೇವ ತು ।**
**ಆಮಧ್ಯಾಹ್ನಾಃ ಕ್ರಿಯಾಃ ಸರ್ವಾಃ ಕರ್ತವ್ಯಾಃ ಶಂಭುಶಾಸನಾತ್ ॥ ೧೬೭ ॥**

**ಅ:** ಅತ್ಯಂತ ಅಲ್ಪವಾದ ದ್ವಾದಶೀತಿಥಿ ಒದಗಿದಾಗ ಮಹಾನಿಶೀಥ ಪೂರೈಸುತ್ತಲೇ ಸೂರ್ಯೋದಯದ ಮುನ್ನವೇ ಮಧ್ಯಾಹ್ನದವರೆಗಿನ ಸಕಲಕರ್ತವ್ಯಗಳನ್ನೂ ಶಿವನ ಆದೇಶದಂತೆ ಪೂರೈಸಬೇಕು.

ವಿ: ೧. ಹಿಂದೆ ಹೇಳಿದಂತೆ ಕಲಾಮಾತ್ರ ಸಾಧನೀ ಇದ್ದಾಗ ಮಹಾನಿಶೀಥ(ಎಂದರೆ ರಾತ್ರಿಯ ಮೂರುಭಾಗಗಳಲ್ಲಿ ಎರಡು ಭಾಗಗಳು ಪೂರೈಸಿದ ನಂತರದ ಕಾಲ)ದಲ್ಲಿ ಸ್ನಾನಾದಿಗಳನ್ನು ಪೂರೈಸಬೇಕು ಎಂದರ್ಥ.

೨. ಇಲ್ಲಿ ಮಧ್ಯಾಹ್ನದವರೆಗಿನ ಸಕಲಕಾರ್ಯಗಳನ್ನೂ ಸಹ ಸೂರ್ಯೋದಯಕ್ಕಿಂತ ಮುಂಚಿತವಾಗಿಯೇ ಪೂರೈಸಬೇಕು ಎಂಬ ವಿಶೇಷಾಂಶ ನಿರೂಪಿತವಾಗಿದೆ; ಇಲ್ಲಿ ಮಧ್ಯಾಹ್ನದವರೆಗಿನ ಕಾರ್ಯಗಳು ಎಂದರೆ ಮಾಧ್ಯಾಹ್ನಿಕ ಸಂಧ್ಯಾವಂದನೆಯವರೆಗಿನ ಸಕಲಕಾರ್ಯಗಳು ಎಂದರ್ಥ.

೩.. ಇದರಿಂದ ದ್ವಾದಶಿಯಂದು ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಪಾರಣೆಗಿಂತ ಮುಂಚಿತವಾಗಿಯೇ ಪೂರೈಸಬೇಕು ಎಂಬ ಮತ್ತೊಂದು ಪ್ರಮೇಯ ನಿರೂಪಿತವಾಗಿದೆ ಎಂದು ತಿಳಿಯಬೇಕು.

೪. ಇತರದಿನಗಳಲ್ಲೂ ಮಾಧ್ಯಾಹ್ನಿಕ ಸಂಧ್ಯಾವಂದನೆಯು ಭೋಜನಕ್ಕೆ ಮುಂಚಿತ-ವಾಗಿಯೇ ವಿಹಿತ ಎಂಬುದನ್ನು ಗಮನಿಸಬೇಕು; ಕಾರಣಾಂತರದಿಂದ ಅದನ್ನು ಪೂರೈಸಲಾಗದಿದ್ದಲ್ಲಿ ಸಾಯಂಕಾಲದ ಸಂಧ್ಯಾವಂದನೆಯ ನಂತರ ಪೂರೈಸಬಹುದು

ಎಂಬ ವಿಶೇಷವಿಧಿ ಸ್ಮೃತಿಗಳಲ್ಲಿ ಇದೆ; ಇದನ್ನು ಗಮನಿಸದ ಅನೇಕರು ಪ್ರತಿನಿತ್ಯ ಮಾಧ್ಯಾಹ್ನಿಕ ಸಂಧ್ಯಾವಂದನೆಯನ್ನು ಭೋಜನದ ನಂತರ ಪೂರೈಸುವ ಪದ್ಧತಿಯನ್ನು ಅನುಸರಿಸುವರು; ಅದು ಶಾಸ್ತ್ರಸಮ್ಮತವಲ್ಲ.

★★

## ಸಾಧನೀದ್ವಾದಶಿಯಂದು ಪ್ರಾತಃಕಾಲದಲ್ಲೇ ಮಾಧ್ಯಾಹ್ನಿಕವೂ ವಿಹಿತ

### ವ್ಯಾಸಃ

**ಉಷಸಿ ದ್ವೇ ತು ಕರ್ತವ್ಯೇ ಪ್ರಾತರ್ಮಾಧ್ಯಾಹ್ನಿಕಕ್ರಿಯೇ ।**
**ಭುಜೇರ್ಯದಾಽಪಕರ್ಷಸ್ಯ ತದಂತರ್ನ್ಯಾಯತೋ ಭವೇತ್ । ೧೬೮**
**ಕರ್ತುಂ ಸಾಧ್ಯಂ ಯದಾ ನಾಲಂ ದ್ವಾದಶ್ಯದ್ಭಿಸ್ತು ಪಾರಯೇತ್ ।**
**ಕ್ರತಾವಲ್ಪಾಶಿವತ್ ಪಶ್ಚಾದ್ಭುಂಜೀತೇತ್ಯಪರೇ ಜಗುಃ ॥ ೧೬೯ ॥**

ಅ: ಸಾಧನೀದ್ವಾದಶಿಯಂದು ಉಷಃಕಾಲದಲ್ಲಿಯೇ ಪ್ರಾತಃಕಾಲ ಹಾಗೂ ಮಾಧ್ಯಾಹ್ನಿಕಗಳ ಕಾರ್ಯಗಳನ್ನು ಪೂರೈಸಬೇಕು. ಭೋಜನವು ಮುಂಚಿತವಾಗಿಯೇ ಆಗುವುದರಿಂದ ಅದಕ್ಕೆ ಸಂಬಂಧಿಸಿದ ಇತರಕಾರ್ಯಗಳೂ ಅದರಂತೆಯೇ ಮುಂಚಿತವಾಗಿಯೇ ಪೂರೈಸಲ್ಪಡಬೇಕು. ದ್ವಾದಶಿಯಂದು ಪಾರಣೆ ಕಾಲಕ್ಕೆ ಸರ್ವಥಾ ಅಸಾಧ್ಯವಾದಾಗ ನೀರಿನಿಂದ ಪಾರಣೆ ಮಾಡಬೇಕು. ಯಜ್ಞಯಾಗಗಳಲ್ಲಿ ಸ್ವಲ್ಪ ಆಹಾರ ಸ್ವೀಕರಿಸಿ ಅನಂತರ ಭೋಜನ ಮಾಡುವಂತೆ ಎಂದು ಕೆಲವರು ಹೇಳುವರು.

★★

## ಆಪತ್ಕಾಲದಲ್ಲಿ ಸಾಧನೆಗೆ ವಿಹಿತವಾದ ಮಂತ್ರ

**ಅಶಿತಾನಶಿತಾ ಯಸ್ಮಾದಾಪೋ ವಿದ್ವದ್ಭಿರೀರಿತಾಃ ।**
**ಅಂಭಸಾ [೧] ಕೇವಲೇನೈವ ಕರಿಷ್ಯೇ ವ್ರತಪಾರಣಮ್ ॥ ೧೭೦ ॥**

ಅ: ನೀರು ಕುಡಿಯುವುದು ಉಂಡಂತೆಯೂ ಸರಿ ; ಉಣ್ಣದಿದ್ದಂತೆಯೂ ಸರಿ ಎಂದು ಜ್ಞಾನಿಗಳು ಹೇಳುವರು; ಆದ್ದರಿಂದ ಕೇವಲ ನೀರಿನಿಂದಾದರೂ ನಾನು ಪಾರಣೆ ಮಾಡುವೆನು.

ವಿ: ೧. ಸಕಾಲಕ್ಕೆ ಸಾಧನೆ ಸರ್ವಥಾ ಅಸಾಧ್ಯವಾದಾಗ ಸ್ವಲ್ಪ ಜಲವನ್ನಾದರೂ ಪ್ರಾಶನಮಾಡಿ ಪಾರಣೆಯ ವಿಧಿಯನ್ನು ಪೂರೈಸಬೇಕು ಎಂದು ಹಿಂದೆ ತಿಳಿಸಿದ್ದರು; ಅದರ ವಿವರಣೆ ಇಲ್ಲಿದೆ.

---

೧. ಕೇವಲೇನಾಥ ( ಪಾ.)

೨. ಜಲಪಾನ ಒಂದು ವಿಶೇಷಕ್ರಿಯೆ; ಒಂದರ್ಥದಲ್ಲಿ ಅದು ಆಹಾರ ಸ್ವೀಕಾರದಂತಿದ್ದರೆ ಮತ್ತೊಂದು ರೀತಿಯಲ್ಲಿ ಉಪವಾಸದ ಫಲವನ್ನು ನೀಡುವಂತಹದು. ಆದ್ದರಿಂದ ಇಂತಹ ಪ್ರಸಂಗದಲ್ಲಿ ಕೇವಲ ಜಲಪ್ರಾಶನ ವಿಧಿಪಾಲನೆಗೆ ಸಹಕಾರಿ ಎಂದರ್ಥ:

**ಆಹುರಬ್ಭಕ್ಷಣಂ ವಿಪ್ರಾ ಅಶಿತಂ ನಾಶಿತಂ ಚ ಯತ್ ।**
**ಅಂಭಸಾ ಕೇವಲೇನಾಥ ಕರಿಷ್ಯೇ ವ್ರತಪಾರಣಮ್ ॥ ಇತಿ ॥ (ತಾ)**

೩. ಅಂಬರೀಷರಾಜ ದೂರ್ವಾಸರ ಪ್ರಸಂಗದಲ್ಲಿ ಹೀಗೆ ಜಲಪ್ರಾಶನವನ್ನು ಮಾಡಿ ಸಾಧನೀದ್ವಾದಶಿಯಂದು ಪಾರಣೆ ಪೂರೈಸಿದ ವಿವರ ಶ್ರೀಮದ್ಭಾಗವತಪುರಾಣದಲ್ಲಿ ಬಂದಿದೆ:

**ಇತ್ಯಪಃ ಪ್ರಾಶ್ಯ ರಾಜರ್ಷಿಶ್ಚಿಂತಯನ್ ಮನಸಾಽಚ್ಯುತಾ ।**
**ಪ್ರತ್ಯಾಚಷ್ಟ ಕುರುಶ್ರೇಷ್ಠ ದ್ವಿಜಾಗಮನಮೇವ ಸಃ ॥ -(೯/೬/೨೯)**

೪. ಹಾಗೆ ಜಲಪ್ರಾಶನಮಾಡಿ ಪಾರಣೆಮಾಡುವ ಪ್ರಸಂಗದಲ್ಲಿ ಇದನ್ನೇ ಮಂತ್ರ-ವನ್ನಾಗಿ ಪಠಿಸಬೇಕು ಎಂಬ ವಿವರ ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಲಿಯಲ್ಲಿದೆ : ಅತ್ರ ಪ್ರಾಶನ ಮಂತ್ರಃ ।

★★

## ಏಕಾದಶಿಯು ಸಕಲತೀರ್ಥಕ್ಷೇತ್ರಗಳಿಗಿಂತ ಮಿಗಿಲು

**ನ ಕಾಶೀ ನ ಗಯಾ ಗಂಗಾ ನ ರೇವಾ ನ ಚ ಗೌತಮೀ[1] ।**
**ನ ಚಾಪಿ ಕೌರವಂ ಕ್ಷೇತ್ರಂ ತುಲ್ಯಂ ಭೂಪ ಹರೇರ್ದಿನಾತ್ ॥೧೭೧ ॥**

**ಅ:** ಕಾಶಿಯಾಗಲೀ, ಗಯೆಯಾಗಲೀ, ಗಂಗೆಯಾಗಲೀ, ನರ್ಮದೆಯಾಗಲೀ, ಗೋದಾವರಿಯಾಗಲೀ, ಕುರುಕ್ಷೇತ್ರವೇ ಆಗಲಿ ಹರಿದಿನಕ್ಕೆ ಸಮ ಎನ್ನಿಸವು.

ವಿ: ೧. ಕಾಶೀ ಮೊದಲಾದ ಕ್ಷೇತ್ರಗಳು ಅತ್ಯಂತ ಪುಣ್ಯಕರವಾದ ಕ್ಷೇತ್ರಗಳು ಅದರಂತೆ ಗಂಗೆ,ಗೋದಾವರಿ ಮೊದಲಾದ ನದಿಗಳೂ ಸಹ ಪುಣ್ಯತೀರ್ಥಗಳು; ಕುರುಕ್ಷೇತ್ರವಂತೂ ಧರ್ಮಕ್ಷೇತ್ರವೆಂದೇ ಪ್ರಸಿದ್ಧ; ಆದರೆ ಏಕಾದಶೀವ್ರತವು ಈ ಎಲ್ಲ ಕ್ಷೇತ್ರ, ತೀರ್ಥಗಳಿಗಿಂತಲೂ ಮಿಗಿಲಾದ ಪುಣ್ಯವನ್ನು ನೀಡುವ ವಿಶಿಷ್ಟವಾದ ಮಹಾವ್ರತ ಎಂದರ್ಥ.

೨. ಇದು ರುದ್ರವಚನ ಎಂಬುದಾಗಿ ವಿಷ್ಣುತೀರ್ಥೀಯದಲ್ಲಿದೆ :

**ರುದ್ರೋಽಪಿ ಸರ್ವದೇವಾನಾಮಾತ್ಮನಃ ಸರ್ವದೇಹಿನಾಮ್ ।**
**ಏಕಾದಶ್ಯುಪವಾಸಂ ಚ ಕರ್ತವ್ಯತ್ವೇನ ಶಂಸತಿ ॥ - ವಿಷ್ಣುತೀರ್ಥೀಯ (೩/೧೮೪)**

---

೧. ಗೋದಾವರೀ- ಗೌತಮೇನ ಸಮಾನೀತಾ ಗೌತಮೀ ತೇನ ಕೀರ್ತಿತಾ ।
- ಪದ್ಮಪುರಾಣ ಉತ್ತರಖಂಡ(೨೬೭/೫೪)

೨. ಇಲ್ಲಿ ಏಕಾದಶಿಯನ್ನು **ಹರಿದಿನ** ಎಂದು ಕರೆದಿರುವುದು ಗಮನಾರ್ಹ; ಹರಿ ಎಂಬ ನಾಮವು ಸಂಕರ್ಷಣಾದಿ ದ್ವಾದಶ ನಾಮಗಳಲ್ಲಿ **ಹನ್ನೊಂದನೆಯದು** ಎಂಬುದು ವಿಶೇಷ; ಹೀಗೆ **ಹನ್ನೊಂದನೆಯ** ರೂಪವನ್ನು ಅಧಿದೇವತೆಯನ್ನಾಗಿ ಹೊಂದಿರುವ ಕಾರಣದಿಂದಲೂ ಹರಿದಿನ ಎಂಬ ಹೆಸರು ಏಕಾದಶಿಗೆ ಸಾರ್ಥಕ ಎಂದಾಗುವುದು.

೩. ಹರಿದಿನ ಎಂಬಂತೆ ಶಿವರಾತ್ರಿ ಎಂಬ ಪದ ಇದೆ. ಹರಿಯದು ರಾತ್ರಿಯಲ್ಲ, ಶಿವನದು ದಿನವಲ್ಲ ಎಂಬುದು ವಿಶೇಷ. ದಿನ ಎಂದರೆ ಜ್ಞಾನ ಎಂದೂ ರಾತ್ರಿ ಎಂದರೆ ಅಜ್ಞಾನ ಎಂದೂ ಅರ್ಥ ಎಂಬ ವಿಶೇಷಾಂಶವನ್ನು ಶ್ರೀಮದಾಚಾರ್ಯರು ಶ್ರೀಮದ್ಭಾಗವತತಾತ್ಪರ್ಯಾದಿಗಳಲ್ಲಿ ನಿರೂಪಿಸಿರುವರು. ಭಗವದ್ಗೀತೆಯ '**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗ್ರತಿ ಸಂಯಮೀ । ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ**' ಎಂಬ ಮಾತಿನಲ್ಲೂ ಹಗಲು ರಾತ್ರಿಗಳೆಂಬ ಪದಗಳು ಜ್ಞಾನ ಅಜ್ಞಾನಗಳ ಸಂಕೇತವಾಗಿ ನಿರೂಪಿತವಾಗಿವೆ.

೪. ಹರಿಗೆ ಸದಾ ದಿನ ಎಂದರೆ ಸದಾ ಜ್ಞಾನವೇ ಹೊರತು ಅಜ್ಞಾನಾದಿ ದೋಷಗಳು ಸರ್ವಥಾ ಇಲ್ಲ; ಶಿವನಿಗೆ ಒಮ್ಮೊಮ್ಮೆ ರಾತ್ರಿ ಎಂದರೆ ಅಜ್ಞಾನಾದಿ ದೋಷಗಳ ಪ್ರಸಕ್ತಿ ಉಂಟು ಎಂಬ ಅರ್ಥವೂ ಇದರಿಂದ ಸೂಚಿತ.

೫. ಹರಿದಿನವನ್ನು ಆಚರಿಸುವ ಹರಿಭಕ್ತರಿಗೆ ದಿನದಿನವೂ ಸಹ ಜ್ಞಾನವು ಲಭಿಸುವುದು. ಶಿವನನ್ನು ಸರ್ವೋತ್ತಮನೆಂದು ಆರಾಧಿಸುವವರಿಗೆ ರಾವಣಾದಿಗಳಿಗೆ ಒದಗಿದಂತೆ ರಾತ್ರಿಯಂತಹ ಅಜ್ಞಾನಾದಿ ದೋಷಗಳೇ ಒದಗುವವು ಎಂಬ ಸೂಚನೆಯನ್ನು ಹರಿದಿನ **ಶಿವರಾತ್ರಿ** ಎಂಬ ಪದಗಳಲ್ಲಿ ಗುರುತಿಸಬಹುದು.

೬. ಹರಿಯಿಂದ ದಿನ ಎಂದರೆ ಭಾಗವತಾದಿ ಜ್ಞಾನದಾಯಕವಾದ ಗ್ರಂಥಗಳ ಉಪದೇಶ ಹಾಗೂ ಶಿವನಿಂದ ರಾತ್ರಿ ಎಂದರೆ ರುದ್ರದೇವರಿಂದ ಅಜ್ಞಾನಾದಿಪ್ರದವಾದ ಪಾಶುಪತಾದಿ ತಾಮಸಶಾಸ್ತ್ರಗಳ ನಿರೂಪಣೆ ಎಂಬ ಪ್ರಮೇಯವಿಶೇಷ ಸಹ ಇದರಿಂದ ನಿರೂಪಿತ ಎಂದೂ ತಿಳಿಯಬಹುದು.

★★

## ಏಕಾದಶ್ಯುಪವಾಸವು ಸಕಲಯಾಗಗಳಿಗಿಂತಲೂ ಶ್ರೇಷ್ಠ

**ಅಶ್ವಮೇಧಸಹಸ್ರಾಣಿ [1]ವಾಜಪೇಯಾಯುತಾನಿ ಚ ।**
**ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ ೧೭೨ ॥**

---

೧. ವಾಜಪೇಯಶತಾನಿ ಚ ( ಪಾ.) ನಾರದೀಯಪುರಾಣ ಉತ್ತರಭಾಗ (೧/೧೨)

**ಅ:** ಸಾವಿರಾರು ಅಶ್ವಮೇಧಗಳಾಗಲೀ ಹತ್ತುಸಾವಿರ ವಾಜಪೇಯಯಾಗ-ಗಳಾಗಲೀ ಏಕಾದಶೀ ಉಪವಾಸದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸವು.

**ವಿ:** ೧. ಅಶ್ವಮೇಧ ಮೊದಲಾದವುಗಳು ಶ್ರೇಷ್ಠಯಾಗಗಳು; ಅಶ್ವಮೇಧವಂತೂ ಕ್ರತುರಾಜ ಎಂದೇ ಪ್ರಸಿದ್ಧ (ಅಶ್ವಮೇಧಃ ಕ್ರತುಶ್ರೇಷ್ಠಃ - ಮಹಾಭಾರತ). ಅಂತಹ ಅಶ್ವಮೇಧಾದಿ ಮಹಾಯಾಗಗಳೂ ಸಹ ಏಕಾದಶೀ ಉಪವಾಸಕ್ಕೆ ಒಂದಂಶಕ್ಕೂ ಸಾಟಿಯಾಗವು ಎಂದರ್ಥ.

೨. ಏಕಾದಶಿಯು ಅಶ್ವಮೇಧಾದಿ ಮಹಾಯಾಗಗಳಿಗಿಂತ ಶ್ರೇಷ್ಠವಾದ ವ್ರತ. ಏಕಾದಶಿಯನ್ನು ಆಚರಿಸಿ ಅಶ್ವಮೇಧಾದಿಯಾಗಗಳನ್ನು ಮಾಡುವುದು ಇನ್ನೂ ಶ್ರೇಷ್ಠ ಎಂದು ಭಾವ.

೩. ಅಶ್ವಮೇಧಾದಿಯಾಗಗಳು ಶರೀರಾಯಾಸದೊಂದಿಗೆ ಧನವ್ಯಯ, ಬಲ-ಪ್ರದರ್ಶನ, ಅನ್ನದಾನ ಮೊದಲಾದ ಅನೇಕ ರೀತಿಯ ಹೊಣೆಯನ್ನು ಹೊಂದಿರುವ ಕಾರ್ಯಗಳು. ಆದರೆ ಏಕಾದಶೀವ್ರತಕ್ಕೆ ಇಂತಹ ಯಾವ ವಿಶೇಷನಿಯಮಗಳೂ ಇಲ್ಲ; ಕೇವಲ ಹರಿಪ್ರೀತಿಗೆಂದು ಉಪವಾಸ ಆಚರಿಸುವುದಷ್ಟೇ ಅದರ ವಿಧಿ. ಹೀಗೆ ಆಚರಣೆಗೆ ಸುಲಭವಾಗಿದ್ದು ಫಲದಲ್ಲಿ ಸರ್ವಾಧಿಕವಾಗಿರುವುದರಿಂದ ಏಕಾದಶಿಯು ಸರ್ವಶ್ರೇಷ್ಠವಾದ ವ್ರತ ಎಂದಾಗುವುದು.

## ಏಕಾದಶಿಯ ಆಚರಣೆಯಿಂದ ಜನ್ಮಾಂತರದ ಪಾಪಗಳೂ ಪರಿಹಾರ

**ಏಕಾದಶೀಸಮುತ್ಥೇನ ವಹ್ನಿನಾ ಪಾತಕೇಂಧನಮ್ ।**
**ಭಸ್ಮೀಭವತಿ ರಾಜೇಂದ್ರ ಅಪಿ ಜನ್ಮಶತೋದ್ಭವಮ್[೧] ॥ ೧೭೩ ॥**

**ಅ:** ಏಕಾದಶೀ ವ್ರತದಿಂದ ಹುಟ್ಟುವ ಅಗ್ನಿಯು ನೂರಾರು ಜನ್ಮಗಳಿಂದ ಗಳಿಸಿದ ಪಾತಕ ಎಂಬ ಇಂಧನವನ್ನು ಸಂಪೂರ್ಣವಾಗಿ ಬೂದಿ ಮಾಡುವುದು.

**ವಿ:** ೧. ಏಕಾದಶೀ ವ್ರತವನ್ನು ಆಚರಿಸಿದಾಗ ತಾಪವಾಗುವುದು ಉಂಟು.ಆ ತಾಪ ಶರೀರವನ್ನು ನೋಯಿಸುವ ತಾಪವಾಗದೇ ಶರೀರದ ಒಳಗಿನ ಪಾಪಗಳನ್ನೆಲ್ಲಾ ಸುಟ್ಟು ಹಾಕುವ ವಿಶಿಷ್ಟ ತಾಪ ಎಂಬುದು ಇಲ್ಲಿಯ ಸಂದೇಶ.

೨. ಬೇರೆ ಯಾವುದೇ ಬಗೆಯಿಂದಲೂ ಸಹ ದೇಹದ ಒಳಗಿನ ದೋಷಗಳನ್ನು ಸಂಪೂರ್ಣವಾಗಿ ಹೋಗಲಾಡಿಸುವುದು ಅಶಕ್ಯ; ಆದರೆ ಏಕಾದಶೀ ಉಪವಾಸದಿಂದ ಹುಟ್ಟುವ ತಾಪವು ದೇಹದೊಳಗಿನ ಕಲ್ಮಶಗಳನ್ನೆಲ್ಲಾ ನಾಶ ಪಡಿಸುವುದು ಎಂದರ್ಥ.

---

೧. ಪದ್ಮಪುರಾಣ ಉತ್ತರಖಂಡ (೨೬೨/೧೦)

೩. ಉಪವಾಸದಿಂದ ದೇಹದೊಳಗಿನ ವಿಷವಸ್ತುಗಳೆಲ್ಲ ನಾಶ ಹೊಂದುವವು ಎಂಬ ವಿಶೇಷಾಂಶವನ್ನು [೧]ವೈಜ್ಞಾನಿಕಸಂಶೋಧನೆಗಳು ದೃಢಪಡಿಸಿವೆ. **Fasting can save your life** (by Dr. Herbert M. Shelton, published by American natural hygiene soceity, Indian edition published Prakruti Jivana Kendra, Bangalore, 1984)) ಎಂಬ ಪುಸ್ತಕದಲ್ಲಿ ನೂರಾರು ನಿದರ್ಶನಗಳನ್ನಿತ್ತು ಉಪವಾಸವ್ರತವು ನೆಗಡಿ ಕೆಮ್ಮುಗಳಿಂದ ಕ್ಯಾನ್ಸರ್‌ವರೆಗಿನ ಮಹಾರೋಗಗಳನ್ನೂ ಸಹ ನಿವಾರಿಸುವ ಶ್ರೇಷ್ಠ ಸಾಧನ ಎಂದು ನಿರೂಪಿಸಲಾಗಿದೆ.

೪. ಇತ್ತೀಚಿನ ದಿನಗಳಲ್ಲಿ ಕೇವಲ ದ್ರವಾಹಾರ ಮೊದಲಾದಂತಹ ಲಘು ಉಪವಾಸವನ್ನು ಆರೋಗ್ಯವರ್ಧಕವಾದ ಶ್ರೇಷ್ಠಸಾಧನ ಎಂಬುದನ್ನು ವಿಜ್ಞಾನ ಗುರುತಿಸಿದೆ. ಆದರೆ ಇದು ಏಕಾದಶಿಯಂತೆ ಪೂರ್ಣೋಪವಾಸವಲ್ಲ. ಏಕಾದಶಿಯ ಪೂರ್ಣೋ-ಪವಾಸವು ಮಾತ್ರ ಇಲ್ಲಿ ನಿರೂಪಿತವಾಗಿರುವಂತೆ ಸರ್ವರೋಗಗಳನ್ನೂ ಸಕಲಪಾಪಗಳನ್ನೂ ಮೂಲೋತ್ಪಾಟನೆ ಮಾಡುವ ಶ್ರೇಷ್ಠಸಾಧನ ಎಂಬುದು ವಿಶೇಷ.

೫. ರೋಗಗಳು ಪಾಪಮೂಲವಾದವು; ಏಕಾದಶಿಯು ಸಕಲಪಾಪಗಳನ್ನೂ ಪರಿ-ಹರಿಸುವುದು ಎಂದರೆ ಸಕಲ ರೋಗಗಳನ್ನೂ ಪರಿಹರಿಸುವುದು ಎಂಬುದು ಅರ್ಥತಃ ಸಿದ್ಧವಾಗುವ ವಿಚಾರ. ಏಕಾದಶಿಯ ಉಪವಾಸದಿಂದ ರಕ್ತಹೆಪ್ಪುಗಟ್ಟುವುದು, ರಕ್ತನಾಳ-ಗಳು ಸಂಕುಚಿತಗೊಳ್ಳುವುದು, ಕೊಬ್ಬು ಶೇಖರಗೊಳ್ಳುವುದು ಮೊದಲಾದ ಮಹತ್ತರವಾದ ದೋಷಗಳು ಪರಿಹಾರವಾಗುವುದನ್ನು ವೈಜ್ಞಾನಿಕ ಪ್ರಯೋಗಗಳು ದೃಢಪಡಿಸಿವೆ.

★★

## ಏಕಾದಶಿಗಿಂತ ಮಿಗಿಲಾದ ಪಾಪನಾಶಕವ್ರತ ಮತ್ತೊಂದಿಲ್ಲ

**ನೇದೃಶಂ ಪಾವನಂ ಕಿಂಚಿನ್ನರಾಣಾಂ ಭುವಿ ವಿದ್ಯತೇ ।**
**ಯಾದೃಶಂ ಪದ್ಮನಾಭಸ್ಯ ದಿನಂ ಪಾತಕಹಾನಿದಮ್[೨] ॥ ೧೭೪ ॥**

ಅ: ಪದ್ಮನಾಭನ ದಿನವಾದ ಏಕಾದಶಿಯಂತಹ ಪಾತಕ ಪರಿಹಾರಕವಾದ ವ್ರತ ಮನುಷ್ಯರಿಗೆ ಭೂಲೋಕದಲ್ಲಿ ಮತ್ತೊಂದಿಲ್ಲ.

ವಿ: ೧. ಏಕಾದಶಿಯು ಸರ್ವಶ್ರೇಷ್ಠವಾದ ವ್ರತ ಎಂದರೆ, ಅದಕ್ಕೆ ಮಿಗಿಲಾದ ವ್ರತವೇ ಮತ್ತೊಂದಿಲ್ಲ ಎಂಬ ಮುಖ್ಯಾರ್ಥವೇ ಗ್ರಾಹ್ಯ ಎಂದು ತಾತ್ಪರ್ಯ.

೨. **ಪದ್ಮನಾಭನ ದಿನ** ಎಂದರೆ ಹರಿ ದಿನ ಎಂದರ್ಥ. **ಹರಿ** ಎಂಬುದು ಸಂಕರ್ಷಣಾದಿ ದ್ವಾದಶನಾಮಗಳಲ್ಲಿ ಹನ್ನೊಂದನೆಯದಾಗಿರುವಂತೆ, **ಪದ್ಮನಾಭ** ಎಂಬುದು ಕೇಶವಾದಿ

೧. ನಮ್ಮ ಪ್ರಕಾಶನದ 'ಏಕಾದಶೀವ್ರತ' ಎಂಬ ಪುಸ್ತಕದಲ್ಲಿ ಈ ಬಗ್ಗೆ ವಿವರಗಳನ್ನು ಕೊಡಲಾಗಿದೆ.
೨. ನಾರದೀಯಪುರಾಣ ಉತ್ತರಭಾಗ (೧/೧೫)

ದ್ವಾದಶಮೂರ್ತಿಗಳಲ್ಲಿ ಹನ್ನೊಂದನೆಯದು. ಹನ್ನೊಂದನೆಯ ತಿಥಿಗೆ ಹನ್ನೊಂದನೆಯ ರೂಪವೇ ಅಧಿದೇವತೆ. ಈ ಅರ್ಥದಲ್ಲೂ ಏಕಾದಶಿ ಎಂಬ ಹೆಸರು ಅದಕ್ಕೆ ಸಾರ್ಥಕ ಎಂಬ ಇಲ್ಲಿಯ ಭಾವ ರೋಚಕವಾದುದು.

★★

## ಏಕಾದಶೀಉಪವಾಸದಿಂದ ಸಕಲಪಾತಕಗಳ ಪರಿಹಾರ

**ತಾವತ್ ಪಾಪಾನಿ ದೇಹೇಽಸ್ಮಿನ್ ತಿಷ್ಠಂತಿ ಮನುಜಾಧಿಪ ।**
**ಯಾವನ್ನೋಪೋಷಯೇಜ್ಜಂತುಃ ಪದ್ಮನಾಭದಿನಂ [1]ಶುಭಮ್ ॥ ೧೭೫ ॥**

ಅ: ರಾಜನೇ ! ಜೀವಿಯ ದೇಹದಲ್ಲಿ ಪಾಪಗಳು ನೆಲೆಸಿರುವುದು ಅವನು ಮಂಗಳಕರವಾದ ಹರಿದಿನದಂದು ಉಪವಾಸವನ್ನು ಆಚರಿಸುವವರೆಗೆ ಮಾತ್ರ.

ವಿ: ೧. ಏಕಾದಶಿವ್ರತವನ್ನು ಮಾಡುತ್ತಿದ್ದಂತೆಯೇ ದೇಹದಲ್ಲಿನ ಸಕಲಪಾಪಗಳೂ ನಾಶವಾಗುವವು ಎಂದರ್ಥ.

೨. ಶ್ರೀಹರಿಯು ಇತರ ದೇವತೆಗಳಿಗೆ ಬೇರೆಬೇರೆ ತಿಥಿಗಳನ್ನು ಕೊಟ್ಟು ತನಗೆ ಏಕಾದಶೀ ತಿಥಿಯನ್ನು ಇಟ್ಟುಕೊಂಡ ವಿವರ ವರಾಹಪುರಾಣದಲ್ಲಿ ಬಂದಿದೆ (ಚಾತುರ್ಮಾಸ-ಮಾಹಾತ್ಮ್ಯ ೨/೨೩-೨೪).

೨. ಗೌರೀತ್ರತೀಯಾ, ಗಣೇಶಚತುರ್ಥಿ, ನಾಗಪಂಚಮಿ, ಸುಬ್ರಹ್ಮಣ್ಯಷಷ್ಠಿ ದುರ್ಗಾಷ್ಟಮಿ ಮೊದಲಾದ ಹೆಸರುಗಳಲ್ಲೇ ಆಯಾ ತಿಥಿಗಳ ಅಭಿಮಾನಿದೇವತೆಗಳ ಹೆಸರು ಸೂಚಿತ ಎಂಬುದು ಗಮನಾರ್ಹ.

೩. ಹೀಗೆ ಶ್ರೀಹರಿ ತಾನೇ ಅಧಿದೇವತೆಯಾಗಿ ಇರಿಸಿಕೊಂಡ ದಿನ ಏಕಾದಶಿ-ಯಾದ್ದರಿಂದ ಅದಕ್ಕೆ ಹರಿದಿನ ಎಂಬ ಹೆಸರು ಸಾರ್ಥಕ.

೪. ಇಲ್ಲಿಯೂ ಸಹ ಏಕಾದಶಿಯನ್ನು 'ಪದ್ಮನಾಭದಿನ' ಎಂದಿರುವುದು ಗಮನಾರ್ಹ.

★★

## ಏಕಾದಶ್ಯುಪವಾಸದಿಂದ ಸಕಲ ಇಂದ್ರಿಯಗಳ ಪರಿಶುದ್ಧಿ

**ಏಕಾದಶೇಂದ್ರಿಯೈಃ ಪಾಪಂ ಯತ್ ಕೃತಂ ಭವತಿ ಪ್ರಭೋ ।**
**ಏಕಾದಶ್ಯುಪವಾಸೇನ ತತ್ ಸರ್ವಂ ವಿಲಯಂ ಭವೇತ್[2] ॥ ೧೭೬ ॥**

---

೧. ಶಿವಮ್ ( ಪಾ.)
೨. ವ್ರಜೇತ್ ( ಪಾ.); ನಯೇತ್ ( ಪಾ.) - ವಾಯುಪುರಾಣ ಮಾಘಮಾಹಾತ್ಮ್ಯ

**ಅ:** ಏಕಾದಶ ಇಂದ್ರಿಯಗಳಿಂದ ಏನೆಲ್ಲಾ ಪಾಪವು ಮಾಡಲ್ಪಡುವದೋ ಆ ಎಲ್ಲಾ ಪಾಪವೂ ಏಕಾದಶಿಯಂದು ಉಪವಾಸ ಮಾಡುವುದರಿಂದ ಸಂಪೂರ್ಣವಾಗಿ ನಾಶವಾಗುವುದು.

**ವಿ:** ೧. ಏಕಾದಶೀವ್ರತದ ಉಪವಾಸವೆಂದರೆ, ಏಕಾದಶ ಇಂದ್ರಿಯಗಳಿಂದ ಮಾಡಲ್ಪಡುವ ಸಮಸ್ತ ಪಾಪಗಳ ಸಂಪೂರ್ಣಪರಿಹಾರ ಎಂದೇ ಅರ್ಥ ಎಂಬ ವಿಶೇಷಾಂಶ ಇಲ್ಲಿದೆ.

೨. ಏಕಾದಶ ಇಂದ್ರಿಯಗಳು ಎಂದರೆ, ಅಂತಃಕರಣವೆನ್ನಿಸಿದ ಮನಸ್ಸು ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳು ಎಂದರ್ಥ. ದೋಷಯುಕ್ತ ಜ್ಞಾನೇಂದ್ರಿಯಗಳಿಂದಾಗುವ ಅಪರಾಧವೆಂದರೆ ಅಜ್ಞಾನ ಮಿಥ್ಯಾಜ್ಞಾನಗಳು; ಕರ್ಮೇಂದ್ರಿಯಗಳಿಂದ ಆಗುವ ಅಪಚಾರ ಪಾಪಕಾರ್ಯಗಳು; ಇವೆಲ್ಲವುಗಳಿಗೂ ಸಹ ಏಕಾದಶೀವ್ರತವೇ ಪರಿಹಾರ.

೩. ಇಲ್ಲಿ ಇಂದ್ರಿಯಗಳಿಂದ ಮಾಡಿದ ಪಾಪಗಳ ಪರಿಹಾರ ಎಂದು ತಿಳಿಸಲ್ಪಟ್ಟಿರುವುದು ಆ ಇಂದ್ರಿಯಗಳಲ್ಲಿನ ದೋಷ ಪರಿಹಾರಕ್ಕೂ ಸೂಚಕ ಎಂದರೆ ಕಣ್ಣು ಮೊದಲಾದ ಇಂದ್ರಿಯಗಳ ದೋಷಗಳೂ ಸಹ ಏಕಾದಶೀ ಉಪವಾಸದಿಂದ ಪರಿಹಾರವಾಗುವವು ಎಂದರ್ಥ. ಮೇಲೆ ಸೂಚಿಸಿದ **FASTING CAN SAVE YOUR LIFE** ಎಂಬ ಪುಸ್ತಕದಲ್ಲಿ ಉಪವಾಸದಿಂದ ಕುರುಡು, ಕಿವುಡು ಮೊದಲಾದ ಅನೇಕ ರೋಗಗಳು ಸಂಪೂರ್ಣವಾಗಿ ಪರಿಹಾರಗೊಂಡ ಅನೇಕ ನಿದರ್ಶನಗಳು ದಾಖಲಾಗಿವೆ.

★★

## ಏಕಾದಶ್ಯುಪವಾಸದಿಂದ ಯಮಬಾಧೆ ಶನಿಬಾಧೆಗಳೂ ಪರಿಹಾರ

**ಏಕಾದಶೀಸಮಂ ಕಿಂಚಿತ್ ಪಾಪತ್ರಾಣಂ ನ ವಿದ್ಯತೇ ।**
**ವ್ಯಾಜೇನಾಪಿ ಕೃತಾ ರಾಜನ್ ನ ದರ್ಶಯತಿ ಭಾಸ್ಕರಿಮ್**[೧] **॥ ೧೭೭ ॥**

**ಅ:** ಏಕಾದಶಿಗೆ ಸಮನಾದ ಪಾಪದಿಂದ ರಕ್ಷಿಸುವ ಮತ್ತೊಂದು ವ್ರತ ಇಲ್ಲ. ರಾಜನೇ ! ಅದನ್ನು ಯಾವುದೇ ನೆಪದಿಂದ ಆಚರಿಸಿದರೂ ಸರಿಯೇ ಅದು ಭಾಸ್ಕರಿಯನ್ನು ತೋರಿಸದು.

**ವಿ:** ೧. ಏಕಾದಶಿಯನ್ನು ಎಲ್ಲ ಬಗೆಯ ರಕ್ಷಣೆಯನ್ನೂ ನೀಡುವ ಮಹಾವ್ರತ ಎಂದರ್ಥ. ಯಾವುದೇ ನೆಪದಿಂದಾದರೂ ಸಹ ಏಕಾದಶಿಯನ್ನು ಆಚರಿಸಿದರೂ ಅದರಿಂದ ಪಾಪನಾಶ ಖಚಿತ.

---

೧. ರಾಜನ್ನಿತಿ ಮಾಂಧಾತಾರಂ ಪ್ರತಿ ವಸಿಷ್ಠಸಂಬೋಧನಮ್ ॥ (ಉ)

**ಏಕಾದಶೀಸಮಂ ಕಿಂಚಿತ್ ಪಾಪತ್ರಾಣಂ ನ ವಿದ್ಯತೇ ।**
**ಸ್ವರ್ಗಮೋಕ್ಷಪ್ರದಾ ಹ್ಯೇಷಾ ರಾಜ್ಯಪುತ್ರಪ್ರದಾಯಿನೀ ॥**
**ಸುಕಲತ್ರಪ್ರದಾ ಹ್ಯೇಷಾ ಶರೀರಾರೋಗ್ಯದಾಯಿನೀ ॥ - ಕಾತ್ಯಾಯನಸ್ಮೃತಿ**

೨. ಇಲ್ಲಿ ಭಾಸ್ಕರಿ ಎಂದರೆ ಭಾಸ್ಕರನ ಪುತ್ರ ಎಂದರ್ಥ. ಭಾಸ್ಕರ ಎಂದರೆ ಸೂರ್ಯ. ಸೂರ್ಯನ ಅನೇಕ ಪುತ್ರರಲ್ಲಿ ಶಿಕ್ಷೆ ನೀಡುವವರು ಎಂಬುದಾಗಿ ಪ್ರಸಿದ್ಧರಾದವರು ಯಮ ಹಾಗೂ ಶನಿ. ಜೀವನನ್ನು ಯಮ ಮರಣಾನಂತರ ಶಿಕ್ಷಿಸುವವನಾದರೆ ಶನಿ ಜೀವಿಸಿದ್ದಾಗಲೇ ಶಿಕ್ಷಿಸುವವನು. ಹೀಗೆ ಸೂರ್ಯಪುತ್ರರಾದ ಇಬ್ಬರೂ ಸಹ ಪಾಪಿಗಳಿಗೆ ಶಿಕ್ಷೆ ನೀಡುವವರೇ ಆಗಿರುವರು. ಇವರಿಬ್ಬರ ಶಿಕ್ಷೆಯಿಂದ ಪಾರಾಗಲು ಏಕಾದಶೀವ್ರತ ಶ್ರೇಷ್ಠವಾದ ಉಪಾಯ ಎಂದರ್ಥ.

೩. ಇಲ್ಲಿ ಶನಿಯ ಕಾಟ ತಪ್ಪುವದು ಎಂದರೆ, ಶನಿ ಮೊದಲಾದ ನವಗ್ರಹಗಳ ಬಾಧೆಯೂ ಉಂಟಾಗದು ಎಂದರ್ಥ. ಇದರಿಂದ ಏಕಾದಶ್ಯುಪವಾಸವು ಸಕಲಗ್ರಹ-ದೋಷಗಳನ್ನೂ ಸಹ ಪರಿಹರಿಸುವ ಶ್ರೇಷ್ಠಸಾಧನ ಎಂಬ ತತ್ವ ನಿರೂಪಿತವಾಗಿದೆ. ಎಂದರೆ ಶನಿಯಿಂದ ಪಕ್ಷಿತವಾದ ಸಕಲ ಗ್ರಹಗಳೂ ಏಕಾದಶೀ ಉಪವಾಸ ಮಾಡುವವರಿಗೆ ಅಹಿತವನ್ನುಂಟು ಮಾಡವು ಎಂದರ್ಥ.

೪. ಏಕಾದಶೀವ್ರತವು ಹರಿದಿನವಾದ್ದರಿಂದ ಹರಿಯು ಸಕಲಗ್ರಹಗಳಿಗೂ ಸಹ ಮುಖ್ಯ ಬಲಪ್ರದನಾದ್ದರಿಂದ ಅವನ ಒಲುಮೆಗೆ ಕಾರಣವಾಗುವ ಏಕಾದಶೀವ್ರತದ ಆಚರಣೆಯು ನವಗ್ರಹಗಳ ಪೀಡೆಯಿಂದಲೂ ಸಹ ಬಿಡುಗಡೆ ನೀಡುವುದು.

**ಶ್ರೀದನಂಘ್ರಿಸರೋಜಯುಗಳೇ-**
**ಕಾದಶಸ್ಥಾನಾತ್ಮದೊಳಗಿ-**
**ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವು ।**
**ಆದಿತೇಯರು ಸಂತತಾಧಿ-**
**ವ್ಯಾಧಿಗಳ ಪರಿಹರಿಸುತವರನ**
**ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲಿ ॥**

**- ಸರ್ವಪ್ರತೀಕಸಂಧಿ ಶ್ಲೋ.೨**

- ಎಂಬ ಹರಿಕಥಾಮೃತಸಾರದ ಪದ್ಯ ಇದರ ಭಾವವಿವರಣೆಯಂತಿರುವುದು ಗಮನಾರ್ಹ. 'ಸಕಲಗ್ರಹಬಲ ನೀನೆ ಸರಸಿಜಾಕ್ಷ' ಎಂಬ ಶ್ರೀಪುರಂದರದಾಸರ ಮಾತಿನಲ್ಲೂ ಇದರ ಭಾವ ಬಂದಿದೆ.

೫. ಶ್ರೀಮದಾಚಾರ್ಯರು ಈ ಮೂಲಕವಾಗಿ ಗ್ರಹದೋಷದ ಪರಿಹಾರಕ್ಕೂ ಸಹ ಶ್ರೇಷ್ಠಮಾರ್ಗವನ್ನು ತೋರಿರುವುದು ಅತ್ಯಂತ ಗಮನಾರ್ಹ. ಇದರಿಂದ ನವಗ್ರಹಗಳ ಆರಾಧನೆ ವಿಹಿತವಲ್ಲ ಎಂದೇನೂ ಅರ್ಥವಲ್ಲ; ಆದರೆ ಏಕಾದಶೀವ್ರತವನ್ನು

ಆಚರಿಸದವನು ಮಾಡುವ ನವಗ್ರಹಾರಾಧನೆಯು ಪೂರ್ಣಫಲವನ್ನು ಕೊಡದೇ ತಾತ್ಕಾಲಿಕ ಉಪಶಮನವನ್ನು ಮಾತ್ರ ನೀಡಬಲ್ಲದು. ಆದರೆ ಏಕಾದಶೀ ಉಪವಾಸವನ್ನು ಆಚರಿಸಿ ನವಗ್ರಹ ಆರಾಧನೆ ಮಾಡುವವನಿಗೆ ಮುಖ್ಯಫಲವೇ ಲಭಿಸುವುದು. ಕಾರಣಾಂತರದಿಂದ ನವಗ್ರಹ ಆರಾಧನೆ ಮೊದಲಾದ ಇತರ ಕಾರ್ಯಗಳನ್ನು ಅಚರಿಸಲಾಗದವರಿಗೂ ಕೇವಲ ಏಕಾದಶ್ಯುಪವಾಸದಿಂದಲೇ ಸರ್ವ ತಾಪತ್ರಯಗಳ ಪರಿಹಾರ ಎಂಬ ಭಾವವೂ ಇಲ್ಲಿ ನಿರೂಪಿತ.

೬. ಏಕಾದಶೀವ್ರತದ ಆಚರಣೆಯಿಂದ ಅವಿವಾಹಿತರಿಗೆ ವಿವಾಹಯೋಗ, ಸಂತಾನಾರ್ಥಿಗಳಿಗೆ ಸಂತತಿ ಪ್ರಾಪ್ತಿ, ಐಶ್ವರ್ಯ ಬಯಸುವವರಿಗೆ ಐಶ್ವರ್ಯ ಲಾಭ ಮೊದಲಾದ ಸಕಲಕಾಮನೆಗಳೂ ಸಹ ಈಡೇರುವವು ಎಂಬುದಾಗಿ ಪುರಾಣಗಳಲ್ಲಿ ನಿರೂಪಿತವಾಗಿದೆ.

★★

## ಏಕಾದಶಿಯಂದು ಭೋಜನ ಬ್ರಹ್ಮಹತ್ಯಾದಿಗಳಿಗಿಂತ ಹೆಚ್ಚು ಪಾಪಕರ

**ಶ್ರೀವ್ಯಾಸಃ**[೧]

**ಸ ಬ್ರಹ್ಮಹಾ ಸ ಗೋಘ್ನಶ್ಚ [೨]ಸ್ತೇನಃ ಸ ಗುರುತಲ್ಪಗಃ ।**
**ಏಕಾದಶ್ಯಾಂ ಹಿ[೩] ಭುಂಜಾನಃ ಪಕ್ಷಯೋರುಭಯೋರಪಿ ॥ ೧೭೮ ॥**

ಅ: ಎರಡು ಪಕ್ಷಗಳ ಏಕಾದಶಿಯಂದು ಆಹಾರ ತಿನ್ನುವವನು, ಬ್ರಹ್ಮಹತ್ಯೆ ಮಾಡಿದವನು, ಗೋಹಂತಕ, ಕಳ್ಳ, ಗುರುತಲ್ಪಗಾಮಿ ; ಇದು ನಿಶ್ಚಿತ.

ವಿ: ೧. ಇಲ್ಲಿಂದ ನಾಲ್ಕು ಶ್ಲೋಕಗಳಲ್ಲಿ ಏಕಾದಶಿಯಂದು ಆಹಾರ ಸ್ವೀಕರಿಸುವವರಿಗೆ ಒದಗುವ ಪಾಪಗಳನ್ನು ತಿಳಿಸುವರು. ಏಕಾದಶೀ ಉಪವಾಸವು ಅತ್ಯಂತ ಪುಣ್ಯಕರ-ವಾಗಿರುವಂತೆ ಅಂದು ಉಪವಾಸ ಮಾಡದಿರುವುದು ಅತ್ಯಂತ ಪಾಪಕರ ಎಂದು ತಾತ್ಪರ್ಯ.

೨. ದೇಹಕ್ಕೆ ಅಗತ್ಯವಲ್ಲದ ಆಹಾರ ಅನಾರೋಗ್ಯಕ್ಕೆ ಕಾರಣವಾಗುವಂತೆ ನಿಷಿದ್ಧವಾದ ಕಾರ್ಯಗಳು ಅವನತಿಗೆ ಕಾರಣ ಎಂದು ಭಾವ.

೩. ಇದಕ್ಕೆ ಸಂವಾದಿಯಾದ ಮತ್ತೆ ಕೆಲವು ವಾಕ್ಯಗಳು ಹೀಗಿವೆ:

**ಮಾತೃಹಾ ಪಿತೃಹಾ ಚೈವ ಭ್ರಾತೃಹಾ ಗುರುಹಾ ತಥಾ ।**
**ಏಕಾದಶ್ಯಾಂ ತು ಯೋ ಭುಂಕ್ತೇ ಪಕ್ಷಯೋರುಭಯೋರಪಿ ॥** – ನಾರದೀಯಪುರಾಣ
**ನ ಶೈವೋ ನ ಸೌರೋ ವಾ ನಾಶ್ರಮೀ ತೀರ್ಥಸೇವಕಃ ।**
**ಯೋ ಭುಂಕ್ತೇ ವಾಸರೇ ವಿಷ್ಣೋಃ ಶ್ವಪಚಾದಧಿಕೋ ಹಿ ಸಃ ॥** – ಸ್ಕಾಂದಪುರಾಣ

---

೧. ಶ್ರೀವೇದವ್ಯಾಸ ಉವಾಚ (ಪಾ.) ; ೨. ಸ ಸ್ತೇನೋ ಗುರುತಲ್ಪಗಃ ( ಪಾ.) ; ೩. ತು ( ಪಾ.)

೪. ಈ ಶ್ಲೋಕದಲ್ಲಿಯೂ ಸಹ ಗೋಹತ್ಯೆಯು ಮಹಾಪಾತಕ ಎಂಬ ಸಂದೇಶ ನಿರೂಪಿತವಾಗಿದೆ.

★★

## ಏಕಾದಶಿಯಂದು ಭೋಜನ ಮಹಾಪಾತಕ

**ವರಂ ಸ್ವಮಾತೃಗಮನಂ ವರಂ ಗೋಮಾಂಸಭಕ್ಷಣಮ್ ।**
**ವರಂ ಹತ್ಯಾ [೧]ಸುರಾಪಾನಮೇಕಾದಶ್ಯಾಂ ತು ಭೋಜನಾತ್ ॥ ೧೭೯ ॥**

**ಅ:** ಏಕಾದಶೀಯಂದು ಆಹಾರ ಸ್ವೀಕರಿಸುವುದಕ್ಕಿಂತ ಸ್ವಮಾತೃಗಮನ ಉತ್ತಮ; ಗೋಮಾಂಸ ಮೆಲ್ಲುವುದು ಒಳಿತು; ಹತ್ಯೆ ಉತ್ತಮ; ಸುರಾಪಾನವೂ ಮಿಗಿಲೇ.

ವಿ: ೧. ಏಕಾದಶಿಯಂದು ಉಪವಾಸ ಮಾಡದಿರುವುದು ಗೋಮಾಂಸಭಕ್ಷಣಾದಿ ಪಾತಕಗಳಿಗಿಂತ ಮಿಗಿಲಾದ ಮಹಾಪಾತಕ ಎಂಬುದು ಭಾವ. ಇದರಿಂದ ಗೋಮಾಂಸ ಭಕ್ಷಣಾದಿಗಳು ವಿಹಿತ ಎಂದಲ್ಲ; ಅವುಗಳು ಹೇಗೆ ಪಾಪಕಾರ್ಯಗಳೆಂದು ಪ್ರಸಿದ್ಧ-ವಾಗಿವೆಯೋ ಅದರಂತೆಯೇ ಏಕಾದಶಿಯ ಆಹಾರಸೇವನೆ ಮಹತ್ತರವಾದ ಪಾಪಕಾರ್ಯ ಎಂದು ಭಾವ.

೨. ಮದ್ಯಪಾನಾದಿ ಮಹಾಪಾತಕಗಳಿಗೆ ಪ್ರಾಯಶ್ಚಿತ್ತವು ಉಕ್ತವಾಗಿದೆ; ಆದರೆ ಏಕಾದಶಿಯಂದು ತಿನ್ನುವ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಇದರಿಂದ ಅದು ಸುರಾಪಾನಾದಿ ಪಾತಕಗಳಿಗಿಂತಲೂ ಮಿಗಿಲಾದ ಮಹಾಪಾತಕ ಎಂಬುದು ಸಿದ್ಧವಾಗುವುದು:

**ನಿಷ್ಕೃತಿರ್ಮದ್ಯಪಸ್ಯೋಕ್ತಾ ಧರ್ಮಶಾಸ್ತ್ರೇ ಮನೀಷಿಭಿಃ ।**
**ಏಕಾದಶ್ಯನ್ನಕಾಮಸ್ಯ ನಿಷ್ಕೃತಿಃ ಕ್ವಾಪಿ ನೋದಿತಾ ।**
**ಮದ್ಯಪಾನಾನ್ಮುನಿಶ್ರೇಷ್ಠ ಪಾತ್ಯೈವ ನರಕಂ ವ್ರಜೇತ್ ।**
**ಏಕಾದಶ್ಯನ್ನಕಾಮಸ್ತು ಪಿತೃಭಿಃ ಸಹ ಮಜ್ಜತಿ । – ಸ್ಮೃತಿಃ**

೩. ಇದರಿಂದ ಏಕಾದಶಿಯಂದು ಅನಿವಾರ್ಯವಾದಲ್ಲಿ ಜಲಪಾನ ಮಾಡಬಹುದೇ ಹೊರತು ಅನ್ನಸ್ವೀಕಾರವನ್ನಲ್ಲ ಎಂಬ ವಿಶೇಷಾಂಶ ಸೂಚಿತ[೨].

★★

---

೪. ಸುರಾಪಾನಮೇಕಾದಶ್ಯನ್ನಭೋಜನಾತ್ ( ಪಾ.) ನಾರದೀಯ ಉತ್ತರಭಾಗ (೩/೮);
೨. ಅನ್ನಪದಗ್ರಹಣೇನ ಏಕಾದಶ್ಯಾಮಶಕ್ತಸ್ಯ ಸಕೃಜ್ಜಲಪಾನಾದಿಕಂ ನ ದೋಷಾಯೇತಿ ಸ್ವೋಕ್ತಂ ಸೂಚಿತಮ್॥ (ಕೋ)

## ಏಕಾದಶಿಯಂದು ಭೋಜನಮಾಡುವವರ ಮುಖದರ್ಶನವೂ ಪಾಪಕರ

**ಏಕಾದಶೀದಿನೇ ಪ್ರಾಪ್ತೇ ಭುಂಜತೇ ಯೇ ನರಾಧಮಾಃ।**
**ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ ೧೮೦ ॥**

**ಅ:** ಏಕಾದಶಿಯಂದು ಯಾರು ಆಹಾರ ತಿನ್ನುವರೋ ಅವರು ನರಾಧಮರು; ಅಂತಹವರ ಮುಖವನ್ನು ನೋಡಿದರೆ ಸೂರ್ಯದರ್ಶನ ಮಾಡಬೇಕು.

**ವಿ:** ೧. ಕೆಲವು ಪಾಪಗಳಿಗೆ ತಕ್ಷಣ ಸೂರ್ಯದರ್ಶನವೇ ಪರಿಹಾರ; ಏಕಾದಶಿಯಂದು ಭೋಜನಮಾಡುವುದು ಅಂತಹ ಮಹಾಪಾತಕ ಎಂದರ್ಥ.

೨. ಕೆಲವು ಪ್ರತಿಗಳಲ್ಲಿ ಈ ಕೆಳಗಿನ ಶ್ಲೋಕಗಳು ಸಹ ಕಂಡುಬರುತ್ತವೆ:

**'ಧರ್ಮಭೂಷಣ:' -**

**ಪ್ರಾತರ್ಹರಿದಿನೇ ಲೋಕಾಸ್ತಿಷ್ಠಧ್ವಂ ಚೈಕಭೋಜನಾಃ।**
**ಅಕ್ಷಾರಲವಣಾಃ ಸರ್ವೇ ಹವಿಷ್ಯಾನ್ನನಿಷೇವಿಣಃ॥**
**ಅವನೀತಲ್ಪಶಯನಾಃ ಪ್ರಿಯಾಸಂಗಮವರ್ಜಿತಾಃ।**
**ಸ್ಮರಧ್ವಂ ದೇವದೇವೇಶಂ ಪುರಾಣಪುರುಷೋತ್ತಮಮ್॥**
**ಸಕೃದ್ಭೋಜನಸಂಯುಕ್ತಾ ಹ್ಯುಪವಾಸೇ ಭವಿಷ್ಯಥ।**
**ಅಕೃತಶ್ರಾದ್ಧನಿಚಯಾ ಜಲಪಿಂಡೋದಕಕ್ರಿಯಾಃ॥**

೩. ಇವು ನಾರದೀಯಪುರಾಣವಚನಗಳು ಎಂಬ ಉಲ್ಲೇಖ ನಿರ್ಣಯಸಿಂಧು-ವಿನಲ್ಲಿದೆ : ''ಬೆಳಿಗ್ಗೆ ಹರಿದಿನ, ಜನರೇ ಇಂದು ಒಂದು ಬಾರಿ ಮಾತ್ರ ಆಹಾರ ಸ್ವೀಕರಿಸಿರಿ, ಕ್ಷಾರ ಲವಣಗಳನ್ನು ತಿನ್ನದೆ ಕೇವಲ ಹವಿಷ್ಯಾನ್ನವನ್ನು ಸೇವಿಸಿರಿ, ನೆಲದ ಮೇಲೆ ಮಲಗಿರಿ, ಪ್ರಿಯಾಸಂಗವನ್ನು ತೊರೆಯಿರಿ, ದೇವದೇವೇಶನು, ಪುರಾಣಪುರುಷೋತ್ತಮನು ಆದ ಶ್ರೀಹರಿಯನ್ನು ಸ್ಮರಿಸಿರಿ. ಹರಿದಿನದಂದು ಶ್ರಾದ್ಧ ತರ್ಪಣಾದಿ ಕಾರ್ಯಗಳನ್ನು ಮಾಡದಿರಿ'' ಎಂದು ಇವುಗಳ ಭಾವ.

೪. ಪಾಪಕಾರ್ಯಮಾಡಿದಾಗ ತಕ್ಷಣ ಸ್ನಾನಾದಿಗಳು ಅಶಕ್ಯವಾದರೆ ಸೂರ್ಯದರ್ಶನ ಅದಕ್ಕೆ ಪ್ರತಿನಿಧಿ ಎಂದು ಕೆಲವು ವಿಶೇಷಪ್ರಸಂಗಗಳಲ್ಲಿ ಶಾಸ್ತ್ರದಲ್ಲಿ ನಿರೂಪಿತವಾಗಿದೆ. ಇದು ಅಂತಹ ಒಂದು ನಿದರ್ಶನ ಎಂದು ಭಾವ.

★★

## ಏಕಾದಶಿಯಂದು ಆಹಾರ ನಿಷೇಧಕ್ಕೆ ಕಾರಣ

**ಪೃಥಿವ್ಯಾಂ [೧]ಯಾನಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ॥ ೧೮೧ ॥**

**ಅ:** ಭೂಮಿಯಲ್ಲಿ ಬ್ರಹ್ಮಹತ್ಯೆ ಮೊದಲಾದ ಯಾವ ಪಾಪಗಳು ಇರುವವೋ, ಅವೆಲ್ಲವುಗಳೂ ಹರಿದಿನ ಬಂದಾಗ ತಿನ್ನುವ ಅನ್ನದಲ್ಲಿ ನೆಲೆಸಿರುವುವು.

ವಿ: ೧. ಏಕಾದಶಿಯಂದು ಅನ್ನ ನಿಷೇಧಕ್ಕೆ ಇಲ್ಲಿ ವಿಶೇಷಕಾರಣವನ್ನು ತಿಳಿಸಿರುವರು. ಅಂದು ಸಕಲ ಪಾಪಗಳೂ ಸಹ ತಿನ್ನುವ ಆಹಾರದಲ್ಲಿ ನೆಲೆಸಿರುವುದರಿಂದ ಅಂದು ಎಲ್ಲ ಬಗೆಯ ಆಹಾರವೂ ವರ್ಜ್ಯ ಎಂದರ್ಥ.

**ಪಾಪಾನಿ ಕಾನಿಚಿದ್ಯಾನಿ ಬ್ರಹ್ಮಹತ್ಯಾಸಮಾನಿ ಚ ।**
**ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ ।**
**ತಾನಿ ಪಾಪಾನ್ಯುಪಾಶ್ನಂತಿ ಭುಂಜಾನೋ ಹರಿವಾಸರೇ ॥**

**- ನಾರದೀಯ ಪುರಾಣ**

**ಹರಿವಾಸರತಃ ಪೂರ್ವಂ ದಶಮ್ಯಾಂ ಭೋಜನಂ ಸ್ಮೃತಮ್ ।**
**ತಸ್ಮಿನ್ನತೀತೇ ಕರ್ತವ್ಯಂ ದ್ವಾದಶ್ಯಾಂ ಪಾರಣಂ ಬುಧೈಃ ॥ - ವರಾಹಪುರಾಣ**

(ಇವು ದಿನತ್ರಯಮೀಮಾಂಸಾದಲ್ಲೂ, ಛಲಾರೀ ಶೇಷಾಚಾರ್ಯರ ನಿರ್ಣಯ-ರತ್ನದಲ್ಲೂ ಉದ್ಧೃತ)

**ದಶಮ್ಯಾಮೇಕಭುಕ್ತಸ್ತು ನಾರೀಸಂಗಮವರ್ಜಿತಃ ।**
**ಅವನೀತಲಶಾಯೀ ಚ ಪರೇಽಹನಿ ವಸೇಚ್ಛುಚಿಃ ॥**

**- ಪದ್ಮಪುರಾಣ (೨೬೨/೨೪)**

**ಸಮುದ್ರಮಥನಂ ಏಕಾದಶ್ಯಾಂ ಜಾತಮಿತಿ ಪಾದ್ಮೇ ॥ ( ಉ.ಖಂ. ೨೬೦/೭,೮)**
**ಏಕಾದಶ್ಯಾಂ ತು ಶುದ್ಧಾಯಾಂ ಮಥ್ಯಮಾನೇ ಮಹಾಂಬುಧೌ ।**
**ಉಪೋಷ್ಯ ಋಷಯಃ ಸರ್ವೇ ಜೇಪುಃ ಶ್ರೀಮಂತ್ರಮುತ್ತಮಮ್ ।**
**ಕಾಂಕ್ಷಮಾಣಾಃ ಶ್ರಿಯೋ ಜನ್ಮ ಲಕ್ಷ್ಮೀನಾರಾಯಣಂ ಹರಿಮ್ ॥**

**- ಪದ್ಮಪುರಾಣ ಉ. ಖಂ. (೨೬೦/೭,೮)**

೨. ಇಲ್ಲಿ ಅನ್ನ ಎಂದರೆ ತಿನ್ನುವ ಆಹಾರ. ಕುಡಿಯುವ ನೀರು ಮೊದಲಾಗಿ ಎಲ್ಲವೂ ವಿವಕ್ಷಿತ. ಎಂದರೆ ಅಂದು ಏನನ್ನೇ ತಿಂದರೂ ಏನನ್ನೇ ಕುಡಿದರೂ ಪಾಪಘಟನೆ ನಿಶ್ಚಿತ ಎಂದು ಭಾವ. ಕೆಲವರು ಇದನ್ನು ತಪ್ಪಾಗಿ ತಿಳಿದು ಅನ್ನ ಭಕ್ಷಣೆಯೊಂದೇ ನಿಷಿದ್ಧ ಉಳಿದ ಆಹಾರವನ್ನು ಏಕಾದಶಿಯಂದು ತಿನ್ನಬಹುದು ಎಂದು ಭಾವಿಸುವುದುಂಟು; ಅದು ಶಾಸ್ತ್ರಸಮ್ಮತವಲ್ಲ.

---

೧. ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ । ( ಪಾ.); ಬೃಹನ್ನಾರದೀಯ ಪುರಾಣ (೨೧/೮)

೩. ಇಲ್ಲಿ ಹರಿವಾಸರ ಎಂಬುದಕ್ಕೆ ಹರಿದಿನ ಏಕಾದಶಿ ಎಂಬ ಅರ್ಥದಂತೆ ದಶಮಿ ರಾತ್ರಿಯ ಹರಿವಾಸರ ದ್ವಾದಶಿಯ ಬೆಳಗಿನ ಹರಿವಾಸರಗಳೂ ಸಹ ವಿವಕ್ಷಿತ ಎಂದು ತಿಳಿಯಬೇಕು. ಎಂದರೆ ಆ ಸಮಯದಲ್ಲಿ ಆಹಾರ ಸ್ವೀಕರಿಸುವುದೂ ಸಹ ಏಕಾದಶಿಯ ಭೋಜನದಂತೆಯೇ ಪಾಪಕರ ಎಂದಾಗುವುದು:

**ಏಕಾದಶ್ಯಾಃ ಪ್ರಾಂತಭಾಗೋ ದ್ವಾದಶ್ಯಾಃ ಪೂರ್ವ ಏವ ಚ।**
**ಹರಿವಾಸರನಾಮಾಸೌ ಸರ್ವಕಾಲೋತ್ತಮಃ ಸ್ಮೃತಃ।**
**ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ।**
**ತಸ್ಮಿಂಸ್ತು ಭುಂಜತಃ ಪಾಪಾನ್ಯೇಕಸ್ಥಾನಿ ಭವತ್ಯುತ॥**
**ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ।**
**ಅನ್ನಮಾಶ್ರಿತ್ಯ ತಿಷ್ಠಂತಿ ಸಂಪ್ರಾಪ್ತೇ ಹರಿವಾಸರೇ॥ – ಇತಿ ವಿಷ್ಣುತೀರ್ಥೀಯೇ**

೪. ಈ ನಾಲ್ಕು ಶ್ಲೋಕಗಳೂ ಶ್ರೀವ್ಯಾಸರ ಮಾತುಗಳು.

★★

## ಏಕಾದಶೀ ವ್ರತಕ್ಕೆ ಅಧಿಕಾರಿಗಳು

### ರುಕ್ಮಾಂಗದಃ

**[೧]ಅಷ್ಟವರ್ಷಾಧಿಕೋ [೨]ಯಸ್ತು ಹ್ಯಶೀತಿರ್ನಹಿ ಪೂರ್ಯತೇ।**
**ಯೋ ಭುಂಕ್ತೇ ಮಾನವಃ ಪಾಪೀ ವಿಷ್ಣೋರಹನಿ ಚಾಗತೇ ॥ ೧೮೨ ॥**

**ಅ:** ಯಾವನಿಗೆ ಎಂಟುವರ್ಷಗಳು ತುಂಬಿವೆಯೋ ಎಂಭತ್ತು ವರ್ಷಗಳು ಇನ್ನೂ ತುಂಬಿಲ್ಲವೋ ಅಂತಹ ಮಾನವನು ವಿಷ್ಣುವಿನ ದಿನವಾದ ಏಕಾದಶಿಯಂದು ಆಹಾರ ಸ್ವೀಕರಿಸಿದಲ್ಲಿ ಪಾಪಿ ಎನ್ನಿಸುವನು.

**ವಿ:** ೧. ಎಂಟುವರ್ಷದಿಂದ ಎಂಭತ್ತು ವರ್ಷಗಳವರೆಗೆ ಏಕಾದಶಿ ಉಪವಾಸ ಕಡ್ಡಾಯ ಎಂದರ್ಥ. ಎಂಟು ವರ್ಷ ತುಂಬದವರೂ, ಎಂಭತ್ತು ತುಂಬಿದವರೂ ಸಹ ಏಕಾದಶಿಯನ್ನು ಆಚರಿಸಲೇ ಬೇಕು ಎಂಬ ವಿಶೇಷವಚನಗಳೂ ಉಂಟು. ಎಂಟು ವರ್ಷದ ಮುನ್ನ ಹಾಗೂ ಎಂಭತ್ತು ವರ್ಷದ ಅನಂತರ ದೇಹದಲ್ಲಿ ಅಷ್ಟಾಗಿ ಸಾಮರ್ಥ್ಯ-ವಿಲ್ಲದಿರುವುದರಿಂದ ಅವರಿಗೆ ಸ್ವಲ್ಪಮಟ್ಟಿಗಿನ ವಿನಾಯಿತಿ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದು ಎಂದು ಇದರಿಂದ ತಿಳಿಯುವುದು :

---

೧. ಅಷ್ಟವರ್ಷಾಧಿಕೋ ಮರ್ತ್ಯೋ ಹ್ಯಶೀತಿನ್ಯೂನವತ್ಸರಃ।
ಏಕಾದಶ್ಯಾಮುಪವಸೇತ್ ಪಕ್ಷಯೋರುಭಯೋರಪಿ॥ – ಕಾತ್ಯಾಯನಸ್ಮೃತಿಃ।

೨. ಯಸ್ತ್ವಾಶೀತಿರ್ನಪೂರ್ಯತೇ, ಅಶೀತಿರ್ನ ಹಿ ಪೂರ್ಯತೇ (ಪಾ.)

**ನನು ಬಾಲವೃದ್ಧಾತುರಾದೀನಾಂ ಉಪವಾಸಕರಣಸ್ಯಾಶಕ್ಯತ್ವಾತ್ ತೇಷಾಂ ಕಥಮು- ಪವಾಸ ಇತ್ಯತಸ್ತತ್ರ ವ್ಯವಸ್ಥಾಂ ದರ್ಶಯನ್ ತತ್ರ ಭೋಜನೇ ದೋಷಮಾಹ ರುಕ್ಮಾಂಗದಃ – ಅಷ್ಟವರ್ಷೇತಿ ॥ (ಸ್ಮೃ.ಕೃ)**

೨. ಎಂಭತ್ತು ತುಂಬಿದ ನಂತರವೂ ಸಹ ವಿವೇಕಿಗಳಾದವರು ಏಕಾದಶೀ ಉಪವಾಸವನ್ನು ತೊರೆಯಲಾರರು. ಅವರಿಗೆ ವಿಶೇಷ ಪುಣ್ಯ ಪ್ರಾಪ್ತಿ ಎಂಬುದು ಆದರ ಫಲ. ಅವರಿಗೂ ಏಕಾದಶಿ ಉಪವಾಸವು ಕಡ್ಡಾಯ ಎಂಬ ಮಾತು ಮುಂದೆ ಬಂದಿದೆ.

೩. ಇದರಂತೆ ಗರ್ಭಿಣಿಯರು, ಬಾಣಂತಿಯರು, ರೋಗಿಗಳು, ಕಾರಣಾಂತರಗಳಿಂದ ವಿಶೇಷವಾಗಿ ಬಳಲಿದವರು ಸಹ ಏಕಾದಶಿಯಂದು ಪೂರ್ಣೋಪವಾಸ ಸಾಧ್ಯವಾಗದಿದ್ದಲ್ಲಿ ಸ್ವಲ್ಪಮಟ್ಟಿಗೆ ಆಹಾರ ಸ್ವೀಕರಿಸಬಹುದು ಎಂಬ ಮಾತು ಪುರಾಣಗಳಲ್ಲಿದೆ. ಅವರೂ ಸಹ ವಿಶೇಷ ಮನೋದಾರ್ಢ್ಯ ಮೊದಲಾದವುಗಳನ್ನು ಹೊಂದಿದ್ದಲ್ಲಿ ಏಕಾದಶಿಯಂದು ಪೂರ್ಣೋಪವಾಸ ಮಾಡುವುದು ಹೆಚ್ಚು ಪುಣ್ಯಕರ.

★★

## ಏಕಾದಶಿಯನ್ನು ಮಾಡದ ಬಂಧುಗಳೂ ಶಿಕ್ಷಾರ್ಹರು

**ಪಿತಾ ವಾ ಯದಿ ವಾ ಪುತ್ರೋ ಭಾರ್ಯಾ ವಾಽಪಿ ಸುಹೃಜ್ಜನಃ ।**
**ಪದ್ಮನಾಭದಿನೇ ಭುಂಕ್ತೇ ನಿಗ್ರಾಹ್ಯೋ ದಸ್ಯುವದ್ಭವೇತ್ ॥ ೧೮೩ ॥**

**ಅ:** ತಂದೆ ಇರಲಿ, ಮಗನಿರಲಿ, ಹೆಂಡತಿಯಿರಲಿ, ಮಿತ್ರಜನರೇ ಇರಲಿ ಪದ್ಮನಾಭನಾದ ಶ್ರೀಹರಿಯ ದಿನದಂದು ತಿಂದಲ್ಲಿ ಅವರನ್ನು ಕಳ್ಳರಂತೆ ದಂಡನೆಗೆ ಗುರಿಮಾಡಬೇಕು.

**ವಿ:** ೧. ಏಕಾದಶಿಯಂದು ಉಪವಾಸವನ್ನು ಮಾಡದವರು ಹಿರಿಯರೇ ಆಗಲಿ ಕಿರಿಯರೇ ಆಗಲಿ ಶಿಕ್ಷಾರ್ಹರು ಎಂದರ್ಥ. ಕಳ್ಳನಾದವನು ಯಾರೇ ಆಗಿದ್ದರೂ ಅಪರಾಧಕ್ಕೆ ತಕ್ಕ ದಂಡನೆಗೆ ಗುರಿಯಾಗುವಂತೆ ಈ ಪ್ರಸಂಗ ಮಹಾಭಾರತದ ಶಂಖಲಿಖಿತೋಪಾಖ್ಯಾನದಲ್ಲಿ ಕಳ್ಳತನ ಮಾಡಿದ ತನ್ನ ತಮ್ಮ ಲಿಖಿತನಿಗೆ ಶಂಖಮುನಿ ಶಿಕ್ಷೆ ವಿಧಿಸಿದ ಪ್ರಸಂಗವನ್ನು ಇಲ್ಲಿ ಗಮನಿಸಬಹುದು.

೨. ಜನ್ಮ ನೀಡಿದ ತಂದೆ, ಉಪನಯನ ಮಾಡಿದವನು, ವಿದ್ಯೆ ನೀಡಿದವನು, ಅನ್ನ ನೀಡಿದವನು ಹಾಗೂ ಆಪತ್ತಿನಿಂದ ಪಾರು ಮಾಡುವವನು ಈ ಐವರೂ ಪಿತೃಗಳು ಎನ್ನಿಸುವರು :

**ಜನಿತಾ ಚೋಪನೀತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ ।**
**ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥ – (ಸ್ಮೃ.ಕೃ)**

೩. ಇಂತಹ ಶಿಕ್ಷೆಯ ಬಗೆಯೂ ಸಹ ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಬಂದಿರುವ ಭೀಮವಚನದಂತೆ ಉತ್ತಮರಿಗೆ ಮಾತಿನ ಶಿಕ್ಷೆ, ಮಧ್ಯಮರಿಗೆ ದಂಡ, ಚಿಕ್ಕವರಿಗೆ ದೇಹದಂಡನೆ ಎಂದು ಮೂರು ಬಗೆಯಾದುದು ಎಂಬುದನ್ನು ತಿಳಿಯಬೇಕು (೨೧/೩೩೯) :

**ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಮ್ ।**
**ಅಧಮೇ ದೇಹದಂಡಶ್ಚ......................... ॥**

೪. ಈ ಎರಡು ಶ್ಲೋಕಗಳು ನಾರದಪುರಾಣದಲ್ಲಿನ ರುಕ್ಮಾಂಗದವಚನಗಳು.

★★

## ಏಕಾದಶಿಯ ಆಚರಣೆ ಸರ್ವಪಾಪಪರಿಹಾರಕ

### ಬ್ರಹ್ಮಾ

**ಉಪೋಷ್ಯ ದ್ವಾದಶೀಂ ಪುಣ್ಯಾಂ ಸರ್ವಪಾಪಕ್ಷಯಪ್ರದಾಮ್[1] ।**
**ನ ಪಶ್ಯತಿ ಯಮಂ ವಾಽಪಿ ನರಕಾಣಿ [2]ನ ಯಾತನಾಃ ॥ ೧೮೪ ॥**

ಅ: ಸರ್ವಪಾಪಗಳನ್ನು ಪರಿಹರಿಸುವಂತಹ ದ್ವಾದಶಿಯಂದು ಉಪವಾಸ ಮಾಡುವವನು ಯಮನನ್ನಾಗಲಿ, ನರಕಗಳನ್ನಾಗಲಿ, ಯಾತನೆಗಳನ್ನಾಗಲಿ ಕಾಣಲಾರನು.

ವಿ: ೧. ಇಲ್ಲಿ ದ್ವಾದಶಿ ಉಪವಾಸವೆಂದರೆ ದಶಮ್ಯಾದಿದಿನತ್ರಯಗಳು ಒಟ್ಟಾಗಿ ಒಂದು ವ್ರತ ಎಂಬ ವಿವಕ್ಷೆಯಿಂದ ಏಕಾದಶೀ ಉಪವಾಸ ಎಂದೇ ಅರ್ಥ.

೨. ದ್ವಾದಶೀ ಎಂಬುದಕ್ಕೆ ಶ್ರವಣದ್ವಾದಶೀ, ಅತಿರಿಕ್ತದ್ವಾದಶೀ ಮೊದಲಾದ ಅರ್ಥಗಳೂ ವಿವಕ್ಷಿತ; ಅದರಂತೆ ಏಕಾದಶಿಯು ದಶಮಿ ವಿದ್ಧವಾದಾಗ ವಿಹಿತವಾದ ದ್ವಾದಶಿ ಉಪವಾಸ ಎಂದು ತಿಳಿಯಬೇಕು.

★★

## ಪುರಾಣಗಳಲ್ಲಿ ಏಕಾದಶಿಯ ನಿರೂಪಣೆ

**ರಟಂತಿ ಹಿ[2] ಪುರಾಣಾನಿ ಭೂಯೋ ಭೂಯೋ ವರಾನನೇ ।**
**ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ॥ ೧೮೫ ॥**

ಅ : ಎಲೈ ಸುಂದರಿಯೇ ! ಪುರಾಣಗಳು ಮತ್ತೆ ಮತ್ತೆ ಸಾರುತ್ತಿವೆ: ''ಹರಿದಿನದಂದು ತಿನ್ನಕೂಡದು, ತಿನ್ನಕೂಡದು''.

---

೧. ಉಪೋಷ್ಯ ದ್ವಾದಶೀಂ ಪುಣ್ಯಾಂ ಸರ್ವಪಾಪಕ್ಷಯಪ್ರದಾಮ್ ।( ಪಾ.) ; ೨.ನ ಯಾತನಾಮ್ ( ಪಾ.)
೨. ರಟಂತೀಹ ( ಪಾ.)

ವಿ: ೧. ಇದು ಪದ್ಮಪುರಾಣದಲ್ಲಿ ಪಾರ್ವತಿಯನ್ನು ಕುರಿತು ಶಿವ ಹೇಳಿದ ಮಾತು.

೨. ಪೈಂಗಿಶ್ರುತಿ, ಬಾಭ್ರವ್ಯಶ್ರುತಿ, ಮೈತ್ರಾವರುಣೋಪನಿಷತ್ತು ಮೊದಲಾದ ಶ್ರುತಿಗಳಲ್ಲೂ ಸಹ ಏಕಾದಶೀವ್ರತವು ವಿಹಿತವಾಗಿದೆ ಎಂದು ನಿರ್ಣಯರತ್ನಾದಿ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ; **'ಹರಿದಿನದಲ್ಲಿ ಉಂಡ ನರರಿಗೆ ಘೋರ ನರಕ ತಪ್ಪದು ಎಂದು ಶ್ರುತಿಯು ಸಾರುತಲಿದೆ'** ಎಂಬ ಶ್ರೀಪುರಂದರದಾಸರ ಮಾತಿನಲ್ಲೂ ಈ ವಿವರ ಬಂದಿದೆ.

೩. ಶತಪಥಬ್ರಾಹ್ಮಣದಲ್ಲೂ ಏಕಾದಶೀವ್ರತದ ಉಲ್ಲೇಖ ಬಂದಿದೆ.

**ಮಹಾದೋಷಮಯಂ ಚಾನ್ನಮೇಕಾದಶ್ಯಾಂ ಭವೇದ್ಯತಃ ।**
**ನ ದಾತವ್ಯಂ ನ ಭೋಕ್ತವ್ಯಂ ನ ಘ್ರಾತವ್ಯಂ ವಿಶೇಷತಃ ॥ - ಸ್ಮೃತಿಮುಕ್ತಾವಲೀ**

**ಸರ್ವಥಾ ನಾನ್ನಮಶ್ನೀಯಾನ್ನಿರಯಮಾಣೋಽಪಿ ವೈಷ್ಣವಃ ।**
**ಮಹಾಪದ್ಯಪಿ ಯೋಽಶ್ನೀಯಾದನ್ನಮೇಕಾದಶೀದಿನೇ ॥**
**ತಸ್ಯಾಪರಾಧಂ ನ ಸಹೇ ಲಕ್ಷ್ಮ್ಯಾದಿಪ್ರಾರ್ಥಿತೋಽಪಿ ಸನ್ ॥**
**- ವರಾಹಪುರಾಣ ( ಚಾತುರ್ಮಾಸ್ಯಕಲ್ಪ)**

೪. ಅನ್ನದ ಲಕ್ಷಣ (ಬೇಯಿಸಿದ ಧಾನ್ಯ, ಉಪ್ಪಿನೊಂದಿಗೆ ಕೂಡಿದ ಹಿಟ್ಟು ಹಾಗೂ ಇದರ ಸಂಪರ್ಕ ಹೊಂದಿದ ಹಣ್ಣುಗಳು ಅನ್ನ ಎನಿಸುವುದು) :

**ತಂಡುಲೋಽಗ್ನ್ಯಂಬುಸಂಯೋಗಾಲ್ಲವಣಂ ಪಿಷ್ಟಯೋಗತಃ ।**
**ಫಲಂ ತ್ರಿತಯಸಂಯೋಗಾದನ್ನಂ ಭವತಿ ತತಕ್ಷಣಾತ್ ॥**
**ಮಾಷಂ ಚ ಲವಣಂ ಮಾಂಸಂ ಯೋಽಶ್ನೀಯಾತ್ ತಿಲಮಾತ್ರತಃ ।**
**ಏಕಾದಶ್ಯಾಂ ತತಃ ಸರ್ವಂ ವ್ರತಂ ನಿಷ್ಫಲತಾಂ ವ್ರಜೇತ್ ॥ - ವರಾಹಪುರಾಣ**

ಏಕಾದಶೀವ್ರತವನ್ನು ಒಮ್ಮೆಯೂ ತೊರೆಯಕೂಡದು –

**ಏಕದಾಽಪಿ ಚ ಯೋ ಹನ್ಯಾದ್ ವ್ರತಮೇತನ್ನರಾಧಮಃ ।**
**ಸ ಕಲ್ಪಮಾತ್ರಂ ನರಕೇ ರೌರವೇ ಪತತಿ ಧ್ರುವಮ್ ॥ - ವರಾಹಪುರಾಣ**

೫. ತಿಳಿಯದೆ ಏಕಾದಶಿಯಂದು ಆಹಾರ ಸ್ವೀಕರಿಸಿದರೆ ಪ್ರಾಯಶ್ಚಿತ್ತವಾಗಿ ಲಕ್ಷ ನಮಸ್ಕಾರಗಳನ್ನು ಶ್ರೀಹರಿಗೆ ಸಮರ್ಪಿಸಬೇಕು ಅಥವಾ ಹತ್ತು ಗೋವುಗಳನ್ನು ದಾನ ಮಾಡಬೇಕು ಅಥವಾ ಹತ್ತು ಪ್ರಾಜಾಪತ್ಯಗಳನ್ನು ಆಚರಿಸಬೇಕು :

**ಅಜ್ಞಾನಾದ್ವಾ ಪ್ರಮಾದಾದ್ವಾ ಯೋಽನ್ನಮತ್ತಿ ಹರೇರ್ದಿನೇ ।**
**ನಮಸ್ಕಾರಸ್ಯ ಲಕ್ಷಂ ತತ್ಪ್ರಾಯಶ್ಚಿತ್ತಂ ಪ್ರಕೀರ್ತಿತಮ್ ॥**
**ದಶ ಗಾವೋಽಥವಾ ದೇಯಾ ಪ್ರಾಜಾಪತ್ಯಾನಿ ವಾ ದಶ ॥ - ವರಾಹಪುರಾಣ**

ಏಕಾದಶಿಯಂದು ಜಾಗರಣವೂ ವಿಹಿತ –

ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ।
ಪುಣ್ಯಂ ಕೋಟಿಗುಣಂ ಗೌರಿ ವಿಷ್ಣೋರ್ಜಾಗರಣೇ ಕೃತೇ॥
ಸತ್ಯಂ ಶೌಚಂ ತಪೋಽಧೀತಂ ದತ್ತಮಿಷ್ಟಂ ಶ್ರುತಂ ತಥಾ।
ತಸ್ಯ ಸರ್ವಮಿದಂ ವ್ಯರ್ಥಂ ವಿನಾ ಜಾಗರಣಂ ಹರೇಃ॥ – ಸ್ಕಂದಪುರಾಣ

ಏಕಾದಶಿಯಂದು ಅನ್ನದ ನೈವೇದ್ಯ ನಿಷಿದ್ಧ –

ಹರಿಶ್ಚ ದೇವತಾಃ ಸರ್ವಾಃ ಪಿತರಶ್ಚ ಮಹರ್ಷಯಃ।
ನಾಶ್ನಂತಿ ಗರ್ಹಿತಾನ್ನಂ ತು ಸಂಪ್ರಾಪ್ತೇ ಹರಿವಾಸರೇ॥ – ವಿಷ್ಣುರಹಸ್ಯ

ಏಕಾದಶಿಯಂದು ಶ್ರಾದ್ಧಹೋಮಾದಿಗಳು ನಿಷಿದ್ಧ –

ನ ಶ್ರಾದ್ಧಂ ತತ್ರ ಕುರ್ವೀತ ನ ಹೋಮಂ ನ ಚ ತರ್ಪಣಮ್।
ಯದಿ ಮೋಹಾತ್ಪ್ರಕುರ್ವೀತ ವ್ರತಹಾನಿರ್ಭವೇದ್ ಧ್ರುವಮ್॥
– ಸ್ಮೃತಿಮುಕ್ತಾವಲೀ

ಏಕಾದಶಿಯಂದು ಸುದರ್ಶನಹೋಮಕ್ಕೆ ಮಾತ್ರ ವಿನಾಯಿತಿ –

'ಸುದರ್ಶನಹೋಮಸ್ತು ಶಯನಬೋಧೇನ್ಯೈಕಾದಶೀದಿನೇ ಕರ್ತವ್ಯಃ – ಇತ್ಯಭಿಧಾನಾತ್ ತಸ್ಯ ಚ ವಿಷ್ಣುಮಾತ್ರವಿಷಯತ್ವಾತ್ ಘೃತೇನೈವ ಕಾರ್ಯತ್ವಾಚ್ಚ ತತ್ಕರಣೇ ನ ದೋಷಃ।
– ಸ್ಮೃತಿಮುಕ್ತಾವಲೀ

ಶ್ರುತಿಗಳಲ್ಲಿ ಏಕಾದಶೀವ್ರತದ ಪ್ರತಿಪಾದನೆ –

ದೇವಾ ವೈ ಪ್ರಾಜಾಪತಿಮಬ್ರುವನ್ ಕೇನ ವೈ ಮನುಷ್ಯಾಸ್ತರಂತೀತಿ। ಸ ಹೋವಾಚ ಜ್ಞಾನಕರ್ಮಣೋಸ್ತರಂತೀತಿ। ಜ್ಞಾನಮುಪದಿಷ್ಟಮ್। ಕರ್ಮ ವ್ಯಾಖ್ಯಾಸ್ಯಾಮೋ ನಿತ್ಯಂ ನೈಮಿತ್ತಿಕಮ್। ತದ್ವೇದಾಃ – ಸಂಧ್ಯಾ ಹೋಮವ್ರತಾದಯೋ ವ್ರತೇಽಪ್ಯಹ್ನಿ ಪರಬ್ರಹ್ಮಣಃ ಉಪವಸೇತ್ ಸ ಹಿ ಶ್ರೇಷ್ಠಂ ಪರಂ ಪಾರಂ ತಾರಯತೀತಿ। ತೇ ಹೋಚುಃ ಕಥಂ ಭಗವ ಇತಿ ಸ ಹೋವಾಚ। ತಸ್ಮಿನ್ ಬ್ರಹ್ಮದಿವಸೇ ನಾಗ್ನಿಂ ಜುಹುಯಾನ್ನ ಶ್ರಾದ್ಧಂ ಕುರ್ಯಾತ್ ನ ಕಿಮಪಿ ನಿತ್ಯನೈಮಿತ್ತಿಕಾದಿ। ದೇವರ್ಷಿಪಿತೄನ್ ನ ತರ್ಪಯೇತ್ ಸ್ವಾಧ್ಯಾಯಂ ವಿನಾ ಪಂಚಮಹಾಯಜ್ಞಾನ್। ತಸ್ಮಾದ್ಯದಿಹ ವಾ ವ ತರ್ಪಯೇತ್ ಸ ಪಿತೃಹಾ ಮಾತೃಹಾ ಸ ದೇವಹಾ ಸೋಽಗ್ನಿಹಾ ಸ ಸರ್ವಹಾ ಭವತೀತಿ ಸ ಬ್ರಹ್ಮಣಃ ಸಾಯುಜ್ಯತಾಂ ಸಲೋಕತಾಂ ನ ಗಚ್ಛತಿ ಏವಂ ವೇದ ಇತ್ಯುಪನಿಷತ್॥೧॥ – ಬಾಭ್ರವ್ಯಶ್ರುತಿ (ಶತಪಥಬ್ರಾಹ್ಮಣ)

(ಈ ಶ್ರುತಿಯು ವೈಶ್ವನಾಥಿನಾರಾಯಣಪಂಡಿತಾಚಾರ್ಯರಿಂದ ದಿನತ್ರಯಮೀಮಾಂಸಾದಲ್ಲೂ ಛಲಾರಿ ಶೇಷಾಚಾರ್ಯರಿಂದ ನಿರ್ಣಯರತ್ನದಲ್ಲೂ ಉದ್ಧೃತವಾಗಿದೆ).

**- ಅಥೇದಾನೀಂ ಜ್ಞಾನೋಪಸರ್ಗಾ ರಾಜನ್ ಮೋಹಜಾಲಸ್ಯೈತೇ ಯೋನಯಃ ಅಥ ಯೇ ಚಾನ್ಯೇ ವ್ರತವಿಲೋಪಿನೋ ವಿಕರ್ಮಸ್ಥಾಃ ಹರಿದಿನೇ ಹ ವೈ ನಿತ್ಯನೈಮಿತ್ತಿಕಶ್ರಾದ್ಧ-ಹೋಮತರ್ಪಣಾದಿಕಾರಣಃ ॥ - [೧]ಮೈತ್ರಾವರುಣೋಪನಿಷತ್**

**ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ।**
**ನ ಶ್ರಾದ್ಧಹೋಮೌ ಕುರ್ವೀತ ದೇವಾದೀನ್ನ ತು ತರ್ಪಯೇತ್ ॥ - [೨]ಪೈಂಗಿಸ್ಮೃತಿ**

೩. ಗರ್ಭಿಣಿಯರು, ಬಾಣಂತಿಯರು ಮೊದಲಾದ ಅಶಕ್ತರು ಏಕಾದಶೀಯಂದು ಫಲಾಹಾರ ಸ್ವೀಕರಿಸಲು ಶಾಸ್ತ್ರಗಳು ಅವಕಾಶ ನೀಡಿವೆ. ಇಲ್ಲಿ ಫಲಾಹಾರವೆಂದರೆ ಕೇವಲ ನೀರು, ಹಾಲು ಇತ್ಯಾದಿಗಳೇ ಹೊರತು ಚಪಾತಿ ಮೊದಲಾದ ಆಹಾರವಲ್ಲ ಎಂಬುದು ವರಾಹಪುರಾಣದಿಂದ ತಿಳಿಯುವುದು. ಎಂತಹ ಸಂದರ್ಭದಲ್ಲೂ ಉಪ್ಪು ಹಾಗೂ ಉದ್ದನ್ನು ಮಾತ್ರ ಸರ್ವಥಾ ಏಕಾದಶಿಯಂದು ಸ್ವೀಕರಿಸಬಾರದು ಎಂಬ ವಿಶೇಷವೂ ಸಹ ಅಲ್ಲಿ ನಿರೂಪಿತವಾಗಿದೆ. ಬೇಯಿಸಿದ ಧಾನ್ಯ, ಉಪ್ಪುಬೆರೆತ ಹಿಟ್ಟುಗಳೂ ಸಹ ಅನ್ನ ಎನ್ನಿಸುತ್ತವೆ. ಇಂತಹ ಫಲಾಹಾರವನ್ನೂ ಸಹ ಇತರದಿನ ಸ್ವೀಕರಿಸುವ ಆಹಾರದ ನಾಲ್ಕನೆಯ ಒಂದು ಭಾಗ ಮಾತ್ರ ಸ್ವೀಕರಿಸಬೇಕು ಎಂಬ ಎಚ್ಚರಿಕೆಯನ್ನು ವರಾಹ ಪುರಾಣ ವಿಧಿಸಿದೆ.

೪. ಏಕಾದಶೀಯಂದು ಜಾಗರವೂ ಸಹ ವಿಹಿತವಾಗಿದೆ. ಪ್ರತಿಜಾವದ ಜಾಗರಕ್ಕೂ ವಿಶೇಷಫಲ ಎಂಬ ಮಾತು ಶ್ರೀಪುರಂದರದಾಸರ ಕೀರ್ತನೆಯಲ್ಲೂ ಬಂದಿದೆ: 'ಜಾವದ ಜಾಗರ ಕ್ರತು ನಾಲ್ಕುಸಾವಿರ ....'.

★★

## ಏಕಾದಶಿಯು ಆಜೀವಕರ್ತವ್ಯ

**ದ್ವಾದಶೀ ನ ಪ್ರಮೋಕ್ತವ್ಯಾ ಯಾವದಾಯುಃ ಪ್ರವರ್ತತೇ ।**
**ಅರ್ಚನೀಯೋ ಹೃಷೀಕೇಶೋ ವಿಶುದ್ಧೇನಾಂತರಾತ್ಮನಾ ॥ ೧೮೬ ॥**

ಅ : ಆಯುಷ್ಯ ಇರುವವರೆಗೂ ದ್ವಾದಶಿಯನ್ನು ಬಿಡಕೂಡದು ; ಹೃಷೀಕೇಶನಾದ ಶ್ರೀಹರಿಯನ್ನು ವಿಶುದ್ಧವಾದ ಮನಸ್ಸಿನಿಂದ ಪೂಜಿಸಲೇಬೇಕು.

ವಿ: ೧. ಹಿಂದೆ ಎಂಭತ್ತು ತುಂಬುವವರೆಗೂ ಏಕಾದಶಿ ಉಪವಾಸ ಎಂಬ ಮಾತು ಬಂದಿತ್ತು; ಅದರ ಸ್ಪಷ್ಟೀಕರಣವಾಗಿ ಈ ಶ್ಲೋಕವಿದೆ. ಇದರಂತೆ ಎಂಭತ್ತು ತುಂಬಿದ ನಂತರವೂ ಆಯುಷ್ಯ ಇರುವವರೆಗೂ ಏಕಾದಶಿಯು ಕಡ್ಡಾಯ ಎಂದಾಗುವುದು.

---

೧. ಈ ಶ್ರುತಿ ಛಲಾರಿನರಸಿಂಹಾಚಾರ್ಯರಿಂದ ಸ್ಮೃತ್ಯರ್ಥಸಾಗರದಲ್ಲೂ, ಛಲಾರಿಶೇಷಾ-ಚಾರ್ಯರಿಂದ ನಿರ್ಣಯರತ್ನದಲ್ಲೂ ಉದ್ಧೃತವಾಗಿದೆ.

೨. ಇದು ಛಲಾರಿಶೇಷಾಚಾರ್ಯರಿಂದ ನಿರ್ಣಯರತ್ನದಲ್ಲಿ ಉದಾಹೃತ.

೨. ಏಕಾದಶ್ಯುಪವಾಸದಂತೆ ಹೃಷಿಕೇಶನಾದ ಶ್ರೀಹರಿಯ ಪೂಜೆಯೂ ಸಹ ಏಕಾದಶ್ಯುಪವಾಸದಂತೆ ಆಯುಷ್ಯಪೂರ್ತಿಯಾಗಿ ಮಾಡಲೇ ಬೇಕಾದ ಮುಖ್ಯಕಾರ್ಯ ಎಂಬ ವಿಶೇಷಾಂಶ ಇಲ್ಲಿದೆ :

ಏಕಾದಶ್ಯುಪವಾಸಶ್ಚ ಸರ್ವೇಷಾಂ ಸರ್ವದಾ ಭವೇತ್ ।
ಯತ್ಕಿಂಚನ ನ ಭಕ್ಷೇತ ಶುಭೇಪ್ಸುಃ ಸರ್ವಥಾ ದಿನೇ ॥
ನಾಸ್ಮಿಂಸ್ತು ಮೃತಿಪರ್ಯಂತಂ ರೋಗಾಭಾವೇ ಪುಮಾನ್ ಕ್ವಚಿತ್ ॥
- ವಿಷ್ಣುತೀರ್ಥೀಯ ( ಸಂ. ಪ.೩/೧೭೩)

ಪರಮಾಪದಮಾಪನ್ನೋಽಹರ್ಷೇ ವಾ ಸಮುಪಸ್ಥಿತೇ ।
ನೈಕಾದಶೀಂ ತ್ಯಜೇದ್ಯಸ್ತು ಯಸ್ಯ ದೀಕ್ಷಾಽಸ್ತಿ ವೈಷ್ಣವೀ ॥
ಸಮಾತ್ಮಾ ಸರ್ವಜೀವೇಷು ಸದಾಚಾರಾದವಿಚ್ಯುತಃ ।
ವಿಷ್ಣ್ವರ್ಪಿತಾಖಿಲಾಚಾರಃ ಸ ಹಿ ವೈಷ್ಣವ ಉಚ್ಯತೇ ॥ - ಸ್ಕಂದಪುರಾಣ

★★

## ಹರಿಭಕ್ತಿಯೇ ಸರ್ವಶ್ರೇಷ್ಠವಾದ ಸಾಧನ

**ಭಕ್ತ್ಯಾ ಗ್ರಾಹ್ಯೋ ಹೃಷೀಕೇಶೋ ನ ಧನೈರ್ಧರಣೀಸುರಾಃ ।**
**ಭಕ್ತ್ಯಾ ಸಂಪೂಜಿತೋ ವಿಷ್ಣುಃ ಫಲಂ [೧] ಧತ್ತೇ ಸಮೀಹಿತಮ್ ॥ ೧೯೭ ॥**

**ಅ:**ಎಲೈ ಭೂಸುರರೇ ! ಶ್ರೀಹರಿಯು ಲಭಿಸುವುದು ಭಕ್ತಿಯಿಂದಲೇ ಹೊರತು ಧನಗಳಿಂದ ಸರ್ವಥಾ ಅಲ್ಲ ; ಭಕ್ತಿಯಿಂದ ಪೂಜಿತನಾಗುವ ವಿಷ್ಣುವು ನಾವು ಬಯಸುವ ಸಕಲ ಫಲಗಳನ್ನೂ ನೀಡುವನು.

ವಿ: ೧. ಶ್ರೀಹರಿಯು ಲಭಿಸುವುದು ಕೇವಲ ಭಕ್ತಿಯಿಂದಲೇ ಹೊರತು ಧನಾದಿ ಇತರ ಸಾಧನಗಳಿಂದಲ್ಲ; ಶ್ರೀಹರಿಯು ಐಶ್ವರ್ಯಾದಿ ಸಕಲಗುಣಪೂರ್ಣನಾದ್ದರಿಂದ ಅವನಿಗೆ ಭಕ್ತಿಯ ಹೊರತು ಬೇರಾವವೂ ಪ್ರಿಯವೆನ್ನಿಸವು ಎಂದರ್ಥ.

ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥
- ಮಹಾಭಾರತತಾತ್ಪರ್ಯನಿರ್ಣಯೋದ್ಧೃತಭವಿಷ್ಯತ್ಪರ್ವವಚನ

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಯನ್ಮಮ ।
ಭಕ್ತಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ॥ - ಗೀತಾ (೧೧/೫೩)

---

೧. ದತ್ತೇ ( ಪಾ.) ॥ - ನಾರದೀಯಪುರಾಣ ಉತ್ತರಭಾಗ (೩/೩)

**ನ ವೇದೈರ್ನ ಚ ದಾನೈಶ್ಚ ನ ಯಜ್ಞೈರ್ನ ವ್ರತೈರಪಿ।**
**ಪ್ರಾಪ್ತುಂ ಚ ಶಕ್ಯಂ ಗಿರಿಜೇ ವಿಷ್ಣುಲೋಕಃ ಸನಾತನಃ॥**
**ಭಕ್ತ್ಯಾ ತ್ವನನ್ಯಯಾ ಪ್ರಾಪ್ತುಂ ಶಕ್ಯಂ ವಿಷ್ಣುಪದಂ ನೃಣಾಮ್।**
**ತಸ್ಮಾತ್ ಸಂಪೂಜಯೇನ್ನಿತ್ಯಂ ಭಕ್ತ್ಯಾ ದೇವಂ ಜನಾರ್ದನಮ್॥**
**- ಪದ್ಮಪುರಾಣ ಉತ್ತರಖಂಡ (೨೫೭/೧೫೨,೩)**

೨. ಇಲ್ಲಿ ಧನಾದಿಗಳಿಂದ ಪೂಜೆಯನ್ನು ನಿಷೇಧಿಸಿಲ್ಲ; ಆದರೆ ಭಕ್ತಿಯಿಲ್ಲದೆ ಕೇವಲ ಧನಾದಿಗಳಿಂದ ಪೂಜೆ ನಿಷಿದ್ಧ ಎನ್ನಲಾಗಿದೆ. ಧನಾದಿಗಳೂ ಸಹ ಭಕ್ತಿಯಿಂದ ಸಮರ್ಪಿತವಾದಾಗ ಮಾತ್ರವೇ ಶ್ರೀಹರಿಗೆ ಪ್ರಿಯ ಎಂಬ ವಿಶೇಷಾರ್ಥ ಸೂಚಿತ. ಭಕ್ತಿಯಿಲ್ಲದ ಧನಾದಿಗಳನ್ನು ಮಾತ್ರ ಶ್ರೀಹರಿಯು ಸರ್ವಥಾ ಸ್ವೀಕರಿಸಲಾರ ಎಂಬುದು ತಾತ್ಪರ್ಯ.

೩. ಶ್ರೀಕೃಷ್ಣ ದುರ್ಯೋಧನನು ನೀಡಿದ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನೆಲ್ಲಾ ಅವನು ಭಕ್ತಿಹೀನ ಎಂಬ ಕಾರಣದಿಂದ ನಿರಾಕರಿಸಿದ ಮಹಾಭಾರತದ ಪ್ರಸಂಗ ಇದಕ್ಕೆ ನಿದರ್ಶನ.

★★

## ಕೇವಲ ಜಲದಿಂದ ಪೂಜಿಸಿದರೂ ಹರಿಯು ಪ್ರೀತನಾಗುವನು

**ಜಲೇನಾಪಿ ಜಗನ್ನಾಥಃ ಪೂಜಿತಃ ಕ್ಲೇಶನಾಶನಃ।**
**ಪರಿತೋಷಂ [1]ಪ್ರಯಾತ್ಯಾಶು ತೃಷಾರ್ತಾಸ್ತು ಯಥಾ ಜಲೈಃ ॥ ೧೮೮ ॥**

**ಅ:** ಜಗನ್ನಾಥನಾದ ಶ್ರೀಹರಿ ಕೇವಲ ನೀರಿನಿಂದ ಮಾತ್ರವೇ ಪೂಜಿತನಾದರೂ ಕಷ್ಟಗಳನ್ನೆಲ್ಲಾ ಕೂಡಲೇ ಪರಿಹರಿಸುವನು ; ಬಾಯಾರಿದವರು ನೀರಿನಿಂದ ಹೇಗೋ ಹಾಗೆ ಅಪಾರವಾದ ಸಂತೋಷವನ್ನು ಹೊಂದುವನು.

**ವಿ:** ೧. ಹಿಂದೆ ಬಂದಿದ್ದ **ದ್ರವ್ಯಾಣಾಮಪ್ಯಭಾವೇ ತು (ಶ್ಲೋ. ೧೭)** - ಇತರ ಸಾಧನೆಗಳು ಇಲ್ಲವಾದಾಗ ಕೇವಲ ನೀರಿನಿಂದ ಪೂಜಿಸಿದರೂ ಶ್ರೀಹರಿ ಕೈವಲ್ಯ ನೀಡುವನು - ಎಂಬ ಮಾತಿಗೆ ಇದು ವಿವರಣೆಯಾಗಿದೆ.

೨. ಬಾಯಾರಿದವರಿಗೆ ಕೇವಲ ನೀರು ಮಾತ್ರವೇ ಸಂಪೂರ್ಣ ತೃಪ್ತಿನೀಡುವಂತೆ ಶ್ರೀಹರಿಗೆ ಭಕ್ತಿಮಾತ್ರವೇ ಅತ್ಯಂತ ಪ್ರಿಯವಾದುದು.

★★

---

೧. ವ್ರಜತ್ಯಾಶು ( ಪಾ.) ; ತೃಷಾರ್ತಸ್ತು ( ಪಾ.) । - ನಾರದೀಯಪುರಾಣ ಉತ್ತರಭಾಗ(೩/೫)

## ಅಪೂರ್ವ ಪ್ರಾರ್ಥನಾಶ್ಲೋಕಗಳು

**ಆಸೀನಸ್ಯ ಶಯಾನಸ್ಯ ತಿಷ್ಠತೋ ವ್ರಜತೋಽಪಿ ವಾ ।**
**ರಮಸ್ವ ಪುಂಡರೀಕಾಕ್ಷ ಹೃದಯೇ ಮಮ ಸರ್ವದಾ ॥ ೧೮೯ ॥**

**ಅ:** ಕುಳಿತಿರುವ, ಮಲಗಿರುವ, ನಿಂತಿರುವ ಹಾಗೂ ಓಡಾಡುವ ಸಮಯದಲ್ಲೆಲ್ಲ, ಎಲೈ ಪುಂಡರೀಕಾಕ್ಷನಾದ ಶ್ರೀಹರಿಯೇ ! ನೀನು ನನ್ನ ಹೃದಯದಲ್ಲಿ ಸರ್ವದಾ ವಿಹರಿಸು.

ವಿ: ೧. ಕೂಡುವುದು ಮಲಗುವುದೂ ಮೊದಲಾದ ಪ್ರತಿಯೊಂದು ಕಾರ್ಯ-ಗಳಲ್ಲೂ ಮನಸ್ಸಿನಲ್ಲಿ ಶ್ರೀಹರಿಯೇ ಅವುಗಳಿಗೆಲ್ಲಾ ಪ್ರೇರಕ ನಿಯಾಮಕ ಎಂದು ತಿಳಿದು ಅವನ ಮಹೋಪಕಾರವನ್ನು ಭಕ್ತಿಯಿಂದ ನೆನೆಯುತ್ತಿರಬೇಕು ಎಂದರ್ಥ.

೨. ಶ್ರೀಜಗನ್ನಾಥದಾಸರ ಈ ಕೆಳಗಿನ ಪದ್ಯವು ಇದರ ವಿವರಣೆಯಂತಿದೆ :

**ಮಲಗುವಾಗಲಿ ಏಳುವಾಗಲಿ**
**ಕುಳಿತು ಮಾತಾಡುತಲಿ ಮನೆಯೊಳು**
**ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ।**
**ಕಲುಷದೂರನ ಸಕಲಠಾವಿಲಿ**
**ತಿಳಿಯೆ ತತ್ತನ್ನಾಮರೂಪವ**
**ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ॥**

**- ನಾಮಸ್ಮರಣಸಂಧಿ (೧೩/೩)**

★★

**ಸರ್ವಗಶ್ಚೈವ ಸರ್ವಾತ್ಮಾ ಸರ್ವಾವಸ್ಥಾಸು ಚಾಚ್ಯುತ।**
**ರಮಸ್ವ ಪುಂಡರೀಕಾಕ್ಷ ನೃಸಿಂಹ ಹೃದಯೇ ಮಮ ॥ ೧೯೦ ॥**

**ಅ:** ಎಲೈ ಅಚ್ಯುತನೇ ! ನೀನು ಸರ್ವತ್ರ ನೆಲೆಸಿರುವವನು ; ಸರ್ವಸ್ವಾಮಿಯು; ಎಲೈ ಪುಂಡರೀಕಾಕ್ಷನೆ ! ನರಸಿಂಹನೇ ! ನನ್ನ ಹೃದಯದಲ್ಲಿ ನೀನು ಸಕಲ ಅವಸ್ಥೆ-ಗಳಲ್ಲೂ ವಿಹರಿಸು.

★★

**ಕರಾವಲಂಬನಂ ದೇಹಿ ಶ್ರೀಕೃಷ್ಣ ಕಮಲೇಕ್ಷಣ।**
**ಭವಪಂಕಾರ್ಣವೇ ಘೋರೇ ಮಜ್ಜತೋ ಮಮ [೧] ಶಾಶ್ವತ ॥ ೧೯೧ ॥**

---

೧. 'ಶಾಶ್ವತೇ' (ಪಾ)

ಅ: ಎಲೈ ಶ್ರೀಕೃಷ್ಣನೇ ! ಪುಂಡರೀಕಾಕ್ಷನೇ ! ಶಾಶ್ವತನೇ ! ಸಂಸಾರವೆಂಬ ಘೋರ-ವಾದ ಕೆಸರಿನ ಸಮುದ್ರದಲ್ಲಿ ಮುಳುಗುತ್ತಿರುವ ನನಗೆ ನಿನ್ನ ಕೈಯ ಆಸರೆಯನ್ನು ನೀಡು.

ವಿ: ೧. ಶ್ರೀಹರಿಯನ್ನು ಪ್ರಾರ್ಥಿಸುವ ಬಗೆಯನ್ನು ತಿಳಿಸುವ ಅಪೂರ್ವ ಶ್ಲೋಕವಿದು.

೨. ಕೆಸರಿನ ಸಮುದ್ರದಲ್ಲಿ ಮುಳುಗುವವನಿಗೆ ಈಜುವುದು ಮೊದಲಾದ ಬೇರೆಲ್ಲ ಪ್ರಯತ್ನಗಳೆಲ್ಲಾ ನಿರರ್ಥಕವೆನಿಸುವಂತೆ ಸಂಸಾರವೆಂಬ ಕೆಸರಿನ ಸಮುದ್ರದಲ್ಲಿ ಮುಳು-ಗುವವನಿಗೆ ಬೇರೆ ಎಲ್ಲ ಬಗೆಯ ಸಾಧನಗಳೂ ವ್ಯರ್ಥ ಎಂಬ ಸಂದೇಶ ಇಲ್ಲಿದೆ.

೩. ಶ್ರೀಹರಿಯ ಕರಾವಲಂಬವನ್ನು ಪ್ರಾರ್ಥಿಸುವ ಈ ಸ್ತೋತ್ರ 'ವೇದವ್ಯಾಸಕರಾವ-ಲಂಬನಸ್ತೋತ್ರ' ಮೊದಲಾದ ಅನೇಕ ಕರಾವಲಂಬನಸ್ತೋತ್ರಗಳಿಗೆ ಮೂಲಪ್ರೇರಣೆ-ಯಂತಿರುವುದು ಗಮನಾರ್ಹ.

೪. ಭಗವದ್ಗೀತೆಯಲ್ಲಿನ **'ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರ ಸಾಗ-ರಾತ್ । ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್'** ಎಂಬ ಶ್ಲೋಕ ಇಂತಹ ಭಕ್ತರ ಪ್ರಾರ್ಥನೆಗೆ ಶ್ರೀಹರಿಯು ನೀಡುವ ಭರವಸೆಯಂತಿದೆ ಎಂಬುದನ್ನು ಗಮನಿಸಬೇಕು.

★★

**ತ್ರಾಹಿ ತ್ರಾಹಿ ಜಗನ್ನಾಥ ವಾಸುದೇವಾಚ್ಯುತಾವ್ಯಯ ।**
**ಮಾಂ ಸಮುದ್ಧರ ಗೋವಿಂದ [೧]ದುಃಖಸಂಸಾರಸಾಗರಾತ್ ॥ ೧೯೨ ॥**

ಅ : ಜಗತ್ತಿನ ಒಡೆಯನೇ ! ನಾಶವಿಲ್ಲದವನೇ ! ಅವ್ಯಯನೇ ! ವಾಸು-ದೇವನೇ ! ಗೋವಿಂದ ! ನನ್ನನ್ನು ದುಃಖವೆಂಬ ಸಂಸಾರಸಾಗರದಿಂದ ಉದ್ಧರಿಸು.

ವಿ: ಇದೂ ಸಹ ಭಗವಂತನನ್ನು ಪ್ರಾರ್ಥಿಸುವ ಅಪೂರ್ವಶ್ಲೋಕ ; ಸಂಸಾರವನ್ನು ಮತ್ತೊಮ್ಮೆ ದುಃಖದ ಸಾಗರ ಎಂದು ಕರೆಯುವ ಮೂಲಕ ಅದು ಮಹಾಘೋರ ಎಂಬುದನ್ನು ನಿರೂಪಿಸುತ್ತಾ ಅಂತಹ ಸಂಸಾರದ ಬಂಧನವನ್ನು ಸರ್ವಾತ್ಮನಾ ಹೊಂದದ ಶ್ರೀಹರಿಯನ್ನೇ ಅದರ ಬಿಡುಗಡೆಗಾಗಿ ಪ್ರಾರ್ಥಿಸಬೇಕು ಎಂಬ ತತ್ವವನ್ನು ಇಲ್ಲಿ ತಿಳಿಸಿರುವರು.

೨. 'ವಾಸುದೇವ' ಶಬ್ದದ ಅರ್ಥ ಹೀಗಿದೆ:

---

೧. ಮೃತ್ಯುಸಂಸಾರಸಾಗರಾತ್ ( ಪಾ.)

ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಮ್ ।
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥ -( ಸ್ಮೃತಿಃ)

೩. 'ಅಚ್ಯುತ', 'ಅವ್ಯಯ' ಎಂದರೆ ಚತುರ್ವಿಧನಾಶರಹಿತ ಎಂದರ್ಥ:

ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥
- ಗೀತಾಭಾಷ್ಯೋದಾಹೃತಮಹಾವರಾಹವಚನ (೨/೧೭)

★★

## ಗ್ರಂಥಪ್ರಶಸ್ತಿ

**ಏತತ್ ಪುಣ್ಯಂ ಪರಂ ಗುಹ್ಯಂ ಪವಿತ್ರಂ ಪಾಪನಾಶನಮ್ ।**
**ಆಯುಷ್ಯಂ ಚ ಯಶಸ್ಯಂ ಚ [೧]ಕಲೌ ದುಃಖಪ್ರಣಾಶನಮ್ ॥ ೧೯೩ ॥**

**ಅ:** ಇದು ಅತ್ಯಂತ ಪುಣ್ಯಕರವಾದುದು, ರಹಸ್ಯವಾದುದು, ಪವಿತ್ರವಾದುದು; ಕಲಿಯುಗದಲ್ಲಿ ಪಾಪನಾಶಕವಾದುದು; ಆಯುಷ್ಕರವಾದುದು; ಕೀರ್ತಿಕರ-ವಾದುದು. ದುಃಖವನ್ನು ಸಂಪೂರ್ಣವಾಗಿ ನಾಶ ಮಾಡುವಂತಹದು.

**ವಿ:** ೧. ಕಲಿಯುಗದಲ್ಲಿ ಈ ರೀತಿಯಾದ ಪ್ರಾರ್ಥನೆ ಅತ್ಯಂತ ಪುಣ್ಯಕರ ಎಂದು ತಿಳಿಸುವ ಮೂಲಕ ಕೃತಾದಿಯುಗಗಳಲ್ಲಿ ಮಾಡುವ ವಿಶೇಷಸಾಧನೆಗೆ ಕಲಿಯುಗದಲ್ಲಿ ಮಾಡುವ ಪ್ರಾರ್ಥನಾ ರೂಪವಾದ ಕಾರ್ಯ ಸಾಟಿಯೆನ್ನಿಸುವುದು ಎಂಬ ಸಂದೇಶ ಇಲ್ಲಿದೆ.

೨. ಇತರ ಎಲ್ಲ ಯುಗಗಳಲ್ಲೂ ಸಹ ಶ್ರೀಹರಿಯ ಪ್ರಾರ್ಥನೆಯು ವಿಹಿತವಾಗಿ-ದ್ದರೂ ಕಲಿಯುಗದಲ್ಲಿ ಅದು ವಿಶೇಷವಾಗಿ ಪುಣ್ಯಕರ ಎಂದು ಭಾವ.

★★

## ಹರಿಸ್ಮರಣೆಯಿಂದ ಸಕಲಪಾತಕಗಳ ಹಾನಿ

**ಕಲೌ ಪಾಪಂ ಕಿಯನ್ಮಾತ್ರಂ ಹತ್ಯಾಸ್ತೇಯಾದಿಸಂಭವಮ್ ।**
**ಸ್ಮೃತೇ ಮನಸಿ ಗೋವಿಂದೇ ದಹ್ಯತೇ ತೂಲರಾಶಿವತ್ ॥ ೧೯೪ ॥**

**ಅ:** ಕಲಿಯುಗದಲ್ಲಿ ಹತ್ಯೆ ಚೌರ್ಯ ಮೊದಲಾದವುಗಳಿಂದಾಗಿ ಉಂಟಾದ ಎಲ್ಲ ಬಗೆಯ ಪಾಪವೂ ಶ್ರೀಹರಿಯನ್ನು ಮನಸ್ಸಿನಲ್ಲಿ ಸ್ಮರಿಸಿದಾಗಲೇ ಹತ್ತಿಯ ರಾಶಿಯಂತೆ ಸುಟ್ಟು ಹೋಗುವುದು.

---

೧. ಕಲಿದುಃಸ್ವಪ್ನನಾಶನಮ್ ( ಪಾ.)

ವಿ: ೧. ಕಲಿಯುಗದಲ್ಲಿ ಹರಿಸ್ಮರಣೆಯು ಸಕಲ ಪಾಪರಾಶಿಗಳನ್ನೂ ಸಹ ಬೆಂಕಿ ಹತ್ತಿಯ ರಾಶಿಯನ್ನು ಸುಡುವಂತೆ ನಾಶಪಡಿಸುವುದು ಎಂದರ್ಥ.

೨. 'ಕಲಿಯುಗದಲ್ಲಿ ಹರಿ ನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವು' ಎಂಬ ಪುರಂದರದಾಸರ ಮಾತು ಇದರ ವಿವರಣೆಯಂತಿದೆ :

**ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಸಂಗಃ ಪರಂ ವ್ರಜೇತ್ ॥**-ಭಾಗವತ (೧೨/೩/೫೧)

★★

## ಹರಿಭಕ್ತರಿಗೆ ಎಂದೂ ಭಯವಿಲ್ಲ

**ಕಲೌ ಕೇಶವಭಕ್ತಾನಾಂ ನ ಭಯಂ ವಿದ್ಯತೇ ಕ್ವಚಿತ್ ।**
**ಸ್ಮೃತೇ ಸಂಕೀರ್ತಿತೇ ಧ್ಯಾತೇ ಸಂಕ್ಷಯಂ ಯಾತಿ ಪಾತಕಮ್ ॥ ೧೯೫ ॥**

**ಅ:** ಕಲಿಯುಗದಲ್ಲಿ ಕೇಶವನಾದ ಶ್ರೀಹರಿಯ ಭಕ್ತರಿಗೆ ಎಲ್ಲೂ ಭಯ ಇರದು. ಅವನನ್ನು ಸ್ಮರಿಸಿದರೆ, ಕೀರ್ತಿಸಿದರೆ, ಧ್ಯಾನಿಸಿದರೆ ಪಾತಕವು ಸಂಪೂರ್ಣವಾಗಿ ನಾಶ ಹೊಂದುವವು.

ವಿ: ಕಲಿಯುಗದಲ್ಲಿ ಹರಿಸ್ಮರಣೆ, ಕೀರ್ತನೆ, ಧ್ಯಾನಗಳು ಸಕಲಪಾತಕಗಳನ್ನು ಪರಿಹರಿಸುವವು ಎಂದರ್ಥ. ಇತರಯುಗಗಳಲ್ಲೂ ಹರಿಸ್ಮರಣೆಯು ವಿಹಿತವೇ ಆಗಿದೆ; ಕಲಿಯುಗದಲ್ಲಿ ಅದಕ್ಕೆ ಇನ್ನೂ ಹೆಚ್ಚಿನ ಮಹತ್ತ್ವ ಎಂದು ತಿಳಿಯಬೇಕು.

★★

## ಅಧ್ಯಯನದ ಮಹತ್ವ

**ಅಧ್ಯೇತವ್ಯಮಿದಂ ಶಾಸ್ತ್ರಂ [1]ಶ್ರೋತವ್ಯಂ ಚ ಪ್ರಯತ್ನತಃ ।**
**ಭಕ್ತೇಭ್ಯಶ್ಚ ಪ್ರದಾತವ್ಯಂ ಧಾರ್ಮಿಕೇಭ್ಯಃ ಪುನಃ ಪುನಃ ॥ ೧೯೬ ॥**

**ಅ:** ಈ ಶಾಸ್ತ್ರವನ್ನು ಪ್ರಯತ್ನಪೂರ್ವಕವಾಗಿ ಅಧ್ಯಯನ ಮಾಡಬೇಕು; ಶ್ರವಣ ಮಾಡಬೇಕು; ಧಾರ್ಮಿಕರಾದ ಭಕ್ತರಿಗೆ ಪುನಃಪುನಃ ಧಾರೆಯೆರೆಯಬೇಕು.

ವಿ: ೧. ಇಲ್ಲಿಂದ ಒಟ್ಟು ಐದು ಶ್ಲೋಕಗಳಲ್ಲಿ ಶ್ರೀಕೃಷ್ಣಾಮೃತಮಹಾರ್ಣವ ಕೃತಿಯ ಮಹತ್ತ್ವ ನಿರೂಪಿತವಾಗಿದೆ.

೨. ಇದು ಮತ್ತೆ ಮತ್ತೆ ಪ್ರಯತ್ನಪೂರ್ವಕ ಶ್ರವಣಮಾಡಲೇಬೇಕಾದಂತಹ, ಅಧ್ಯಯನ ಮಾಡಲೇಬೇಕಾದಂತಹ ವಿಶೇಷ ಶಾಸ್ತ್ರಗ್ರಂಥ; ಅದರಂತೆ ಧರ್ಮಿಷ್ಠರಾದ ಭಕ್ತರಿಗೆ ಮತ್ತೆ ಮತ್ತೆ ಉಪದೇಶಿಸಬೇಕಾದ ಶ್ರೇಷ್ಠಕೃತಿ ಎಂದರ್ಥ.

---

೧. ಶ್ರೋತವ್ಯಮನಸೂಯಯಾ ( ಪಾ.)

೩. ಅಧ್ಯಯನ ಶ್ರವಣ ಪ್ರವಚನಗಳಿಗೆ ಕೃಷ್ಣಾಮೃತಮಹಾರ್ಣವ ತುಂಬಾ ಪ್ರಶಸ್ತ-ವಾದ ಕೃತಿ ಎಂದರ್ಥ. ಆದರೆ ಇಂದು ಇದರ ಅಧ್ಯಯನಾದಿಗಳು ನಡೆಯುತ್ತಿಲ್ಲ ಎಂಬುದು ಅತ್ಯಂತ ವಿಷಾದಕರ ಸಂಗತಿ; ಅದರಿಂದಾಗಿಯೇ ನಿರೀಕ್ಷಿತವಾದ ಸುಖಶಾಂತಿಗಳು ಲಭಿಸುತ್ತಿಲ್ಲ ಎಂದೂ ತಿಳಿಯಬಹುದು.

★★

## ಇದರ ಅಧ್ಯಯನದಿಂದ ಸರ್ವಪಾತಕಗಳ ಪರಿಹಾರ

**[೧]ಅಧೀಯಾನಾ ಇದಂ ನಿತ್ಯಂ ವಿಷ್ಣೋರ್ಮಾಹಾತ್ಮ್ಯಮುತ್ತಮಮ್ ।**
**[೨]ಸರ್ವಪಾಪವಿನಿರ್ಮುಕ್ತಾಃ ಪ್ರಾಪ್ನುವಂತಿ ಪರಂ ಪದಮ್ ॥ ೧೯೭ ॥**

**ಅ:** ವಿಷ್ಣುವಿನ ಉತ್ತಮವಾದ ಮಾಹಾತ್ಮ್ಯೆಯನ್ನು ತಿಳಿಸುವ ಇದನ್ನು ನಿತ್ಯದಲ್ಲೂ ಅಧ್ಯಯನ ಮಾಡುವವರು ಸಕಲಪಾಪಗಳಿಂದ ಬಿಡುಗಡೆ ಹೊಂದಿದವರಾಗಿ ಶ್ರೇಷ್ಠವಾದ ಸ್ಥಾನವನ್ನು ಹೊಂದುವರು.

ವಿ: ಕೃಷ್ಣಾಮೃತಮಹಾರ್ಣವವು ವಿಷ್ಣುಮಾಹಾತ್ಮ್ಯವಾಗಿದೆ; ಇದರ ಶ್ರವಣ ಸಕಲ ಪಾಪಪರಿಹಾರಕ ಎಂಬ ವಿಶೇಷಾಂಶ ಇಲ್ಲಿ ನಿರೂಪಿತ.

★★

## ಗ್ರಂಥಶ್ರವಣದ ಅಪೂರ್ವ ಫಲಶ್ರುತಿ

**ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।**
**ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ [೩]ವಿಂದತಿ ॥ ೧೯೮ ॥**

**ಅ:** ಇದನ್ನು ಕೇಳಿ ಧರ್ಮವನ್ನು ತಿಳಿಯುವನು; ಇದನ್ನು ಕೇಳಿ ದುರ್ಬುದ್ಧಿ-ಯನ್ನು ತ್ಯಜಿಸುವನು; ಇದನ್ನು ಕೇಳಿ ಜ್ಞಾನವನ್ನು ಹೊಂದುವನು; ಇದನ್ನು ಕೇಳಿ ಮೋಕ್ಷವನ್ನು ಪಡೆಯುವನು.

ವಿ: ೧. ಕೃಷ್ಣಾಮೃತಮಹಾರ್ಣವದ ಶ್ರವಣ ಧರ್ಮದ ಪರಿಜ್ಞಾನ, ದುರ್ಬುದ್ಧಿಯ ಪರಿಹಾರ, ಜ್ಞಾನಪ್ರಾಪ್ತಿ ಹಾಗೂ ಮೋಕ್ಷಪ್ರಾಪ್ತಿ ಎಂಬ ಶ್ರೇಷ್ಠಫಲಗಳಿಗೆ ಸಾಧನ ಎಂದರ್ಥ.

---

೧. ಅಧೀಯಾನ ಇದಂ ಸತ್ಯಂ ( ಪಾ. ) ।
೨. ಸರ್ವಪಾಪವಿನಿರ್ಮುಕ್ತಃ ( ಪಾ. ) ಪ್ರಾಪ್ನೋತಿ ಪರಮಂ ಪದಮ್ । ( ಪಾ. ) ಪ್ರಾಪ್ನೋತಿ ಚ ಪರಂ ಪದಮ್ ಇತಿ ಹಿ ಕ್ವಚಿತ್ ।
೩. 'ಗಚ್ಛತಿ' (ಪಾ.)

೨. 'ಶ್ರುತ್ವಾ' ಎಂಬುದು ನಾಲ್ಕು ಬಾರಿ ಈ ಶ್ಲೋಕದಲ್ಲಿ ಬಂದಿದ್ದು ಶ್ರವಣವು ಚತುರ್ವಿಧಪುರುಷಾರ್ಥಕ್ಕೂ ಸಾಧನ ಎಂಬ ತತ್ತ್ವವನ್ನು ಸೂಚಿಸುವಂತಿದೆ.

೩. ಕೇಳುವುದರಿಂದ ಧರ್ಮಜ್ಞಾನ; ಅದರಿಂದ ದುರ್ಬುದ್ಧಿಯ ಪರಿತ್ಯಾಗ; ಅದರಿಂದ ಜ್ಞಾನಪ್ರಾಪ್ತಿ, ಜ್ಞಾನದಿಂದ ಮೋಕ್ಷಪ್ರಾಪ್ತಿ ಎಂಬ ಕಾರಣ ಪರಂಪರೆಯೂ ಇಲ್ಲಿ ವಿವಕ್ಷಿತ.

೪. ಶಾಸ್ತ್ರಶ್ರವಣದ ಹಾಗೂ ಶ್ರವಣಭಕ್ತಿಯ ಮಹಿಮೆಯನ್ನು ಅತ್ಯಂತಸುಂದರವಾಗಿ ತಿಳಿಸುವ ಅಪೂರ್ವಶ್ಲೋಕವಿದು. ಶ್ರೀಜಗನ್ನಾಥದಾಸರ –

**ಶ್ರವಣಮನಕಾನಂದವೀವದು**
**ಭವಜನಿತದುಃಖಗಳ ಕಳೆವದು**
**ವಿವಿಧಭೋಗಗಳಿಹಪರಂಗಳಲಿತ್ತು ಸಲಹುವದು ।**
**ಭುವನಪಾವನವೆನಿಪ ಲಕ್ಷ್ಮೀ-**
**ಧವನ ಮಂಗಳಕಥೆಯ ಪರಮೋ-**
**ತ್ಸವದಿ ಕಿವಿಗೊಟ್ಟಾಲಿಪದು ಭೂಸುರರು ದಿನದಿನದಿ ॥**

**– (ಕರುಣಾಸಂಧಿ ಶ್ಲೋ ೧.)**

ಮತ್ತು ಶ್ರೀಕನಕದಾಸರ,

**ಕೇಳುವುದು ಹರಿಕಥೆಯ ಕೇಳಲು**
**ಹೇಳುವುದು ಹರಿಭಕುತಿ ಮನದಲಿ**
**ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ ।**
**ಊಳಿಗವ ಮಾಡುವುದು ವಿಷಯವ**
**ಹೂಳುವುದು ನಿಜಮುಕ್ತಿಕಾಂತೆಯ-**
**ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ॥**

**– (ಹರಿಭಕ್ತಿಸಾರ-೧೦೨)**

– ಎಂಬ ಎರಡು ಪದ್ಯಗಳು ಈ ಶ್ಲೋಕದ ವಿವರಣೆಯಂತಿರುವುದು ಗಮನಾರ್ಹ.

೫. **'ಶ್ರುತ್ವಾ ಶ್ರುತ್ವಾ'** ಎಂದು ಪುನಃಪುನಃ ಹೇಳುವ ಮೂಲಕ ಶ್ರವಣಾದಿ ಸಾಧನವನ್ನು ಆವರ್ತನೆ ಮಾಡಬೇಕು ಎಂದು ಸೂಚಿಸಿರುವರು; **'ಆವೃತ್ತಿರಸಕೃದುಪದೇಶಾತ್'** ಎಂಬ ಬ್ರಹ್ಮಸೂತ್ರದ ವಿವರಣೆ ಇದಾಗಿದೆ.

೬. ಮೇಲ್ನೋಟಕ್ಕೆ ಈ ಕೃತಿಯ ಫಲಶ್ರುತಿಯಂತಿರುವ ಈ ಶ್ಲೋಕ ಒಟ್ಟಾಗಿ ಸಕಲ ಶಾಸ್ತ್ರಶ್ರವಣಾದಿಗಳ ಮಹತ್ತ್ವವನ್ನು ನಿರೂಪಿಸುವ ಅಪೂರ್ವಶ್ಲೋಕವಾಗಿದೆ.

★★

## ಅಯೋಗ್ಯರಿಗೆ ಇದರ ಉಪದೇಶ ನಿಷಿದ್ಧ

**ತಸ್ಮಾದಿದಂ [೧]ಸದಾ ಶ್ರಾವ್ಯಂ ಶ್ರೋತವ್ಯಂ ಚ ಸದೈವ ಹಿ ।**
**ಕುತರ್ಕದಾವದಗ್ಧೇಭ್ಯೋ ನ ದಾತವ್ಯಂ [೨]ಕದಾಚನ ॥ ೧೯೯ ॥**

**ಅ:** ಆದ್ದರಿಂದ ಇದನ್ನು ಸದಾ ಶ್ರವಣ ಮಾಡಲೇಬೇಕು; ಇತರರಿಗೂ ಸದಾ ಕೇಳಿಸಲೇಬೇಕು. ಆದರೆ ಕುಯುಕ್ತಿಗಳೆಂಬ ಕಾಡ್ಗಿಚ್ಚಿನಿಂದ ದಗ್ಧರಾದವರಿಗೆ ಮಾತ್ರ ಎಂದೂ ಇದನ್ನು ಹೇಳಲೇಕೂಡದು.

**ವಿ:** ೧. ಹಿಂದಿನ ಶ್ಲೋಕದಲ್ಲಿ ಇದರ ಶ್ರವಣಾದಿಗಳ ಮಹತ್ತ್ವವನ್ನು ತಿಳಿಸಿ ಈ ಶ್ಲೋಕದಲ್ಲಿ ಇತರರಿಗೂ ಸಹ ಇದನ್ನು ಶ್ರವಣಮಾಡಿಸಬೇಕು ಎಂಬ ಸಂದೇಶ ನೀಡಿ, ಅಂತಹ ಶ್ರವಣವನ್ನು ಅಯೋಗ್ಯರಿಗೆ ಸರ್ವಥಾ ಮಾಡಿಸಬಾರದು ಎಂಬ ಎಚ್ಚರಿಕೆ-ಯನ್ನೂ ಇತ್ತಿರುವರು:

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋऽಭ್ಯಸೂಯತಿ ॥**

**-ಗೀತಾ(೧೮/೬೭)**

೨. ಅಯೋಗ್ಯರ ಲಕ್ಷಣವನ್ನು **ಕುತರ್ಕದಾವದಗ್ಧರು** ಎಂದು ಕರೆದಿರುವುದು ಇಲ್ಲಿಯ ಸ್ವಾರಸ್ಯ. ಎಂದರೆ ಕುಯುಕ್ತಿಗಳಿಂದ ವಾದಿಸುವ ಜನ ಅನಧಿಕಾರಿಗಳು ಎಂದರ್ಥ. ಅವರು ಪ್ರಯೋಗಿಸುವ ಕುಯುಕ್ತಿ ಕಾಡ್ಗಿಚ್ಚಿನಂತೆ ಜೀವನವನ್ನೇ ನಾಶಪಡಿಸುವ ಮಹಾಅನರ್ಥ ಎಂಬ ಇಲ್ಲಿಯ ನಿರೂಪಣೆಯ ಸ್ವಾರಸ್ಯ ಅಪೂರ್ವವಾದುದು.

೩. ಉದಾಹರಣೆಗೆ ಏಕಾದಶ್ಯುಪವಾಸ ಸರ್ವಪಾಪನಾಶಕ ಎಂಬ ಇಲ್ಲಿಯ ಮಾತನ್ನು ಅಲ್ಲಿಯ ಜನ "ಒಂದು ಉಪವಾಸದಿಂದ ಸಕಲ ಪಾಪಗಳ ನಾಶ ಹೇಗೆ? ಈ ಒಂದೇ ವ್ರತ ಸಕಲಯಜ್ಞಯಾಗಾದಿಗಳಿಗಿಂತ ತೀರ್ಥಕ್ಷೇತ್ರಗಳಿಗಿಂತ ಮಿಗಿಲಾದ ಪುಣ್ಯವನ್ನು ಹೇಗೆ ಕೊಟ್ಟೀತು?" ಎಂದು ಮೊದಲಾಗಿ ವಾದಿಸುವುದು ಕುತರ್ಕಮೂಲ ಎಂದು ಭಾವ.

೪. ಶ್ರೀಹರಿಯು ಸರ್ವೋತ್ತಮನಾದ್ದರಿಂದ ಅವನಿಗೆ ಸಂಬಂಧಿಸಿದ ಪ್ರತಿಯೊಂದೂ ಸಹ ಅತ್ಯುತ್ತಮ ಎಂದು ತಿಳಿಯದ ಈ ಜನ ಅಂತಹ ಕುಯುಕ್ತಿಗಳನ್ನು ಪ್ರಯೋಗಿಸು-ವರು; ಆದ್ದರಿಂದ ಅವರು ಅನಧಿಕಾರಿಗಳು ಎಂದು ತಾತ್ಪರ್ಯ.

★★

---

೧. ಸಮಾಶ್ರಾವ್ಯಂ (ಪಾ.) ; ಸದಾ ಸೇವ್ಯಂ (ಪಾ.)
೨. ಕಥಂಚನ

## ಕೃಷ್ಣಾಮೃತಮಹಾರ್ಣವದ ಹಿರಿಮೆ

**ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।**
**ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ[೧] ॥ ೨೦೦ ॥**

**ಅ:** ಸಂಸಾರ ಎಂಬ ವಿಷದ ಪಾನದಿಂದ ಭೂಮಿಯಲ್ಲಿ ಸತ್ತಂತಾಗಿರುವ ಜನರನ್ನು ಬದುಕಿಸಲೆಂದು ಈ ಕೃಷ್ಣಾಮೃತಮಹಾರ್ಣವವು ರಚಿತವಾಗಿದೆ.

ವಿ: ೧. ಸಂಸಾರವೆಂದರೆ ವಿಷ ಎಂದು ತಿಳಿಸುತ್ತಾ ಕೇವಲ ಸಂಸಾರದಲ್ಲಿ ಮಗ್ನರಾಗುವವರು 'ಮೃತರು'; ಎಂದರೆ ಮೃತಪ್ರಾಯರು ಎಂಬ ಎಚ್ಚರಿಕೆಯನ್ನು ಇಲ್ಲಿ ನೀಡಿರುವರು. ಮೃತಪ್ರಾಯರಾದ ಜನಗಳನ್ನು ಈ ಕೃಷ್ಣಾಮೃತಮಹಾರ್ಣವವು ಬದುಕಿಸುವದು ಎಂದರ್ಥ.

೨. ಮೃತರ ಮೇಲೆ ಅಮೃತದ ಸೇಚನವಾದಾಗ ಅವರು ಮರಳಿ ಬದುಕುವಂತೆ ಸಂಸಾರದಲ್ಲಿ ಹರಿಯನ್ನು ಮರೆತು ಸತ್ತಂತೆ ಬದುಕುವ ಜನ ಈ ಕೃಷ್ಣಾಮೃತ-ಮಹಾರ್ಣವದ ಶ್ರವಣದಿಂದ ನಿಜಕ್ಕೂ ಸನ್ಮಾರ್ಗವನ್ನು ಕಂಡುಕೊಳ್ಳುವ ಮೂಲಕ ಮರಳಿ ಬದುಕುವರು ಎಂಬುದು ಇದರ ತಾತ್ಪರ್ಯ.

೩. ಇದನ್ನು ಅಮೃತದ ಮಹಾರ್ಣವ ಎಂದು ಕರೆಯುವ ಮೂಲಕ ಸಕಲ ಯೋಗ್ಯಜೀವರಿಗೂ ಉದ್ಧಾರದ ಹಾದಿ ತೋರಿಸುವ ಮಹಾಸಾಮರ್ಥ್ಯ ಹೊಂದಿದೆ ಎಂಬುದನ್ನು ಸೂಚಿಸಿರುವರು.

೪. ಕೃಷ್ಣನೇ ಸತ್ತವರನ್ನು ಬದುಕಿಸುವ ಅಮೃತಮಹಾರ್ಣವ ಎಂಬ ಮತ್ತೊಂದು ಅರ್ಥವು ಇಲ್ಲಿ ವಿವಕ್ಷಿತ; ಪ್ರಾರಂಭದಲ್ಲಿ (ಶ್ಲೋಕ-೨) ಹೇಗೋ ಹಾಗೆ.

೫. ಹನುಮಂತನಾಗಿದ್ದಾಗ ಸಂಜೀವನವನ್ನು ತಂದು ಮೃತರಾಗಿದ್ದ ಕೋಟಿಗಟ್ಟಲೆ ಕಪಿಗಳನ್ನು ಬದುಕಿಸಿದ ವಾಯುದೇವರೇ ಮಧ್ವರೂಪದಿಂದ ಕೃಷ್ಣಾಮೃತಮಹಾರ್ಣವ-ವೆಂಬ ಈ ಕೃತಿಯ ಮೂಲಕ ಮೃತಪ್ರಾಯರಾದ ಜೀವರನ್ನು ಮರಳಿ ಬದುಕಿಸಿರುವರು ಎಂಬುದು ಗಮನಾರ್ಹ.

೬. ಶ್ರೀವಾಯುದೇವರು ಹನುಮದ್ರೂಪದಿಂದ ತಂದದ್ದು ಮಹಾಪರ್ವತವನ್ನಾದರೆ, ಮಧ್ವರೂಪದಿಂದ ತಂದದ್ದು ಮಹಾರ್ಣವವನ್ನು ಎಂಬುದು ವಿಶೇಷ.

೭. ಅಗಸ್ತ್ಯರು ಸಮುದ್ರಪಾನ ಮಾಡಿದವರೆಂದು ಪ್ರಸಿದ್ಧಿ. ಆದರೆ, ಶ್ರೀಮಧ್ವಾಚಾರ್ಯರು ಕೃಷ್ಣಾಮೃತಮಹಾರ್ಣವವನ್ನೇ ತಂದಿತ್ತ ಮಹಾಗುರುಗಳು ಎಂಬುದು ವಿಶೇಷ.

---

೧. ಸಮಾಧಿನಾಽನುಸ್ಮರ ಯದ್ವಿಚೇಷ್ಟಿತಮ್ । -ಭಾಗವತ (೧/೫/೧೩)
ಸ್ಮರಣಂ ಗ್ರಂಥಕೃತಿಃ - ಭಾಗವತತಾತ್ಪರ್ಯವಚನ ।

೮. ಹನುಮಂತ ಸಂಜೀವನ ತಂದಾಗ ಬದುಕಿದವರು ಕೇವಲ ಕಪಿಗಳೇ ಹೊರತು ರಾಕ್ಷಸರಲ್ಲ; ಅದರಂತೆ ಶ್ರೀಮದಾಚಾರ್ಯರ ಈ ಕೃಷ್ಣಾಮೃತಮಹಾರ್ಣವದ ಸದುಪ-ಯೋಗವನ್ನು ಪಡೆದು ಜೀವನ ಸಾರ್ಥಕ ಮಾಡಿಕೊಳ್ಳುವವರು ಸುಜೀವಿಗಳೇ ಹೊರತು ಇತರರಲ್ಲ ಎಂಬ ಧ್ವನಿಯನ್ನು ಸಹ ಇಲ್ಲಿ ಗುರುತಿಸಬಹುದು.

★★

## ಹರಿಪಾದೋದಕದ ಪ್ರೋಕ್ಷಣೆಯ ಫಲ

**ಕ್ಲಿನ್ನಂ ಪಾದೋದಕೇನೈವ ಯಸ್ಯ ನಿತ್ಯಂ ಕಲೇವರಮ್ ।**
**ತೀರ್ಥಕೋಟಿಸಹಸ್ರೈಸ್ತು ಸ್ನಾತೋ ಭವತಿ ಪ್ರತ್ಯಹಮ್ ॥ ೨೦೧ ॥**

ಅ: ಯಾವನ ಶರೀರವು ಶ್ರೀಹರಿಯ ಪಾದೋದಕದಿಂದ ಪ್ರತಿನಿತ್ಯ ನೆನೆಯುವುದೋ, ಅವನು ಪ್ರತಿದಿನವೂ ಸಾವಿರಾರು ಕೋಟಿ ತೀರ್ಥಗಳಲ್ಲಿ ಮಿಂದವನಾಗುವನು.

ವಿ: ಶ್ರೀಹರಿಪಾದೋದಕದ ಮಹಿಮೆಯನ್ನು ಇಲ್ಲಿ ಪುನಃ ವಿವರಿಸುತ್ತಿರುವರು; ಪ್ರತಿದಿನವೂ ಹರಿಪಾದೋದಕದ ಪ್ರೋಕ್ಷಣೆ ಸಾವಿರಾರು ಕೋಟಿ ತೀರ್ಥಗಳ ಸ್ನಾನ ಫಲಕ್ಕೆ ಕಾರಣ ಎಂದರ್ಥ.

★★

## ಶಾಲಗ್ರಾಮತೀರ್ಥದ ಹಿರಿಮೆ

**ತೋಯಂ ಯದಿ ಪಿಬೇನ್ನಿತ್ಯಂ ಶಾಲಗ್ರಾಮಶಿಲಾಚ್ಯುತಮ್ ।**
**ತೀರ್ಥಕೋಟಿಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಮ್ ॥ ೨೦೨ ॥**

ಅ: ಶಾಲಗ್ರಾಮದ ಶಿಲೆಯಿಂದ ಹೊಮ್ಮುವ ಜಲವನ್ನು ಪ್ರತಿನಿತ್ಯ ಪಾನ ಮಾಡಿದಲ್ಲಿ ಸಾವಿರಾರು ಕೋಟಿ ತೀರ್ಥಗಳನ್ನು ಸೇವಿಸಿ ಏನು ಫಲ?

ವಿ: ತೀರ್ಥಪ್ರಾಶನಮಾಡುವುದು ಸಕಲತೀರ್ಥಕ್ಷೇತ್ರಗಳ ಸೇವನೆಗಿಂತ ಶ್ರೇಷ್ಠ ಎಂದು ಭಾವ.

★★

## ಶಾಲಗ್ರಾಮ ಸ್ಪರ್ಶದ ಮಹಿಮೆ

**ಶಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದಿನೇ ದಿನೇ ।**
**ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ ॥ ೨೦೩ ॥**

ಅ: ಯಾರು ದಿನದಿನವೂ ಶಾಲಗ್ರಾಮಶಿಲೆಯನ್ನು ಸ್ಪರ್ಶಿಸುವರೋ ಅವರ ಹಸ್ತಸ್ಪರ್ಶವನ್ನು ಮಾಡಲು ಇಂದ್ರಸಮೇತರಾದ ಸಕಲದೇವತೆಗಳೂ ಬಯಸುವರು.

ವಿ: ೧. ಶಾಲಗ್ರಾಮದ ಪೂಜೆಯಂತೆ, ಶಾಲಗ್ರಾಮದ ಸ್ಪರ್ಶವೂ ಸಹ ಸಕಲದೇವತೆಗಳ ಅನುಗ್ರಹಕ್ಕೂ ಸಾಧನ ಎಂದರ್ಥ. ಇಲ್ಲಿ ಸ್ಪರ್ಶ ಎನ್ನುವುದು ಒಟ್ಟು ಪೂಜೆಗೆ ಉಪಲಕ್ಷಕ ಎಂದು ತಿಳಿಯಬೇಕು.

೨. ಅತ್ಯಂತ ಆಪತ್ಕಾಲದಲ್ಲಿ ಸಮಗ್ರ ಪೂಜಾದಿಗಳು ಅಶಕ್ಯವಾದಾಗ ಶಾಲಗ್ರಾಮದ ಸ್ಪರ್ಶವೂ ಸಹ ತಾರಕ ಎಂದೂ ತಿಳಿಯಬಹುದು.

೩. ದೇವತೆಗಳು ಕರಸ್ಪರ್ಶವನ್ನು ಬಯಸುವರು ಎಂದರೆ ಕೈಯ ಆಸರೆಯನ್ನು ನೀಡಿ ಉದ್ಧರಿಸಬಯಸುವರು ಎಂದರ್ಥ.

★★

## ಹರಿಸ್ಮರಣಕೀರ್ತನೆಗಳಿಂದ ನರಕದ ಭಯಪರಿಹಾರ

**ದುಃಸಹೋ ನಾರಕೋ ವಹ್ನಿರ್ದುಃಸಹಾ ಯಮಕಿಂಕರಾಃ ।**
**ವಿಷಮಶ್ಚಾಂತಕಪಥಃ ಪ್ರೇತತ್ವಂ ಚಾತಿದಾರುಣಮ್ ॥ ೨೦೪ ॥**
**ವಿಚಿಂತ್ಯ ಮನಸಾಽಪ್ಯೇವಂ ಪಾತಕಾದ್ವಿನಿವರ್ತಯೇತ್ ।**
**ಸ್ಮರಣಂ ಕೀರ್ತನಂ ವಿಷ್ಣೋಃ ಸದೈವ ನ ಪರಿತ್ಯಜೇತ್ ॥ ೨೦೫ ॥**

ಅ: ನರಕದ ತಾಪ ದುಃಸಹವಾದುದು; ಯಮದೂತರು ಸಹಿಸಲಾಗದವರು[೧]; ಯಮಲೋಕದ ಹಾದಿ ಅತ್ಯಂತ ವಿಷಮವಾದುದು ; ಪ್ರೇತತ್ವವು ಸಹ ಅತ್ಯಂತ ದಾರುಣವಾದುದು. ಮನಸ್ಸಿನಿಂದ ಇದನ್ನೆಲ್ಲ ಪರ್ಯಾಲೋಚಿಸಿಯಾದರೂ ಪಾಪಕಾರ್ಯಗಳಿಂದ ದೂರ ಉಳಿಯಬೇಕು. ವಿಷ್ಣುವಿನ ಸ್ಮರಣ ಕೀರ್ತನೆಗಳನ್ನು ಮಾತ್ರ ಎಂದೂ ತೊರೆಯಕೂಡದು.

ವಿ: ೧. ಪಾಪಕಾರ್ಯವನ್ನು ಬಿಡುವ ನಿಶ್ಚಯಕ್ಕೆ ಪ್ರೇರಕವಾಗುವ ಅಪೂರ್ವ ಮಾತುಗಳು ಇಲ್ಲಿವೆ. ನರಕ, ನರಕದ ಹಾದಿ, ಯಮದೂತರು, ಪ್ರೇತದೇಹ ಮೊದಲಾದ ಒಂದೊಂದೂ ಸಹ ಅತ್ಯಂತ ದಾರುಣ. ಅವುಗಳಿಂದ ಪಾರಾಗಬೇಕೆಂದರೆ ಪಾಪ ತೊರೆಯುವುದೊಂದೇ ಮಾರ್ಗ; ಶ್ರೀಹರಿಸ್ಮರಣೆ ಕೀರ್ತನೆಗಳು ಪಾಪಪರಿಹಾರಕವಾದ ಅತ್ಯಂತ ಮುಖ್ಯಸಾಧನ ಎಂದು ಇಲ್ಲಿಯ ಭಾವ.

---

೧. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ – ಶ್ರೀಪುರಂದರದಾಸರು
ಕಾಲನ ದೂತರು ಕಾಲ್ಪಿಡಿದೆಳೆವಾಗ ತಾಳುತಾಳೆಂದರೆ ತಾಳುವರೆ – ಶ್ರೀಪುರಂದರದಾಸರು

೨. ವಿಷಮಶ್ವಾಂತಕಪಥಃ - ಯಮಲೋಕದ ಹಾದಿ ಅತ್ಯಂತ ದುಃಖಕರವಾದುದು ಎಂಬ ಈ ಮಾತು ಸ್ಫುಟಪಡಲು ಗರುಡಪುರಾಣದ ಪ್ರೇತಕಾಂಡದಲ್ಲಿನ ಮಾತುಗಳನ್ನು ನೋಡಬೇಕು.

೩. ಪ್ರೇತತ್ವಂ ಚಾತಿದಾರುಣಂ - ಮರಣಾನಂತರದ ಪ್ರೇತದೇಹ ಹಾಗೂ ಪಾಪಕರ್ಮದಿಂದಾಗಿ ಒದಗುವ ಪ್ರೇತಯೋನಿ - ಎರಡೂ ಸಹ ಇಲ್ಲಿಯ ಪ್ರೇತತ್ವ ಪದದಿಂದ ವಿವಕ್ಷಿತ. ಪ್ರೇತದೇಹದ ಕ್ಲೇಶ ಒಂದು ಬಗೆಯದಾದರೆ, ಪ್ರೇತಯೋನಿಯ ಕ್ಲೇಶ ಮತ್ತೂ ದಾರುಣವೆನಿಸುವಂತಹ ಇನ್ನೊಂದು ಬಗೆಯದು ಎಂಬುದು ವಿಶೇಷ.

೪. ಪಾಪಕಾರ್ಯ ಮಾಡುವವರು ಅದರಿಂದಾಗುವ ದುಷ್ಪರಿಣಾಮವನ್ನು ಗಮನಿಸುವುದಿಲ್ಲ; ತತ್ಕಾಲಕ್ಕೆ ಸುಖಕರವೆಂದು ತೋರುವ ಅದು ಕೊನೆಗೆ ನರಕಕ್ಕೆ ತಲುಪಿಸುವುದು ಅತ್ಯಂತ ಖಚಿತ ಎಂಬ ಎಚ್ಚರವಿದ್ದಲ್ಲಿ ಪಾಪಕರ್ಮಕ್ಕೆ ಮನಸ್ಸು ಒಪ್ಪದು ಎಂಬುದು ಇದರಿಂದ ತಿಳಿಯುವ ಮುಖ್ಯವಾದ ಅಂಶ.

೫. ಸುಖಲೋಲುಪರಾದ ಜನ ಅದರಿಂದ ಆಗುವ ಅನರ್ಥವನ್ನು ಗಮನಿಸದಿರುವುದೇ ಪಾಪಕಾರ್ಯಗಳ ಮುಖ್ಯ ಹಿನ್ನೆಲೆ; ಅವುಗಳ ಬಗ್ಗೆ ಎಚ್ಚರವನ್ನು ಹೊಂದಿದಾಗ ಅವುಗಳಿಂದ ಪಾರಾಗುವ ಶ್ರೇಷ್ಠ ಉಪಾಯವಾಗಿ ಶ್ರೀಹರಿಯ ಸ್ಮರಣೆ ಕೀರ್ತನೆಗಳು ವಿಹಿತವಾಗಿವೆ:

**ಸುಖಂ ದುಃಖಂ ತಥಾ ನಿಂದಾಂ ಬಹುಮಾನಂ ಜಯಾಜಯೌ ।**
**ಶೋಕಂ ದುಃಖಂ ಚ ಹಾನಿಂ ಚ ಲಾಭಾಲಾಭೌ ಜರಾ ಮೃತೀ ॥**
**ಪೂರ್ವಕರ್ಮಾನುರೂಪೇಣ ದೈವಮೇವ ದದಾತಿ ಹಿ ।**
**ಯಸ್ಮಿನ್ ಕಾಲೇ ಯದಾ ದೇಶೇ ವಯಸಾ ಯಾದೃಶೇನ ಚ ॥**
**ಯಾದೃಗೇವ ಕೃತಂ ಕರ್ಮ ಜೀವೈಃ ಸಂಸಾರವರ್ತಿಭಿಃ ।**
**ತಸ್ಮಿನ್ ಕಾಲೇ ಚ ದೇಶೇ ಚ ವಯಸಾ ತಾದೃಶೇನ ಚ ॥**
**ಅವಶ್ಯಂ ವೈ ಜನ್ಯೈರೇವ ತಾದೃಗೇವಾನುಭೂಯತೇ ॥**

**- ವಾಯುಪುರಾಣ ಮಾಘಮಾಹಾತ್ಮ್ಯ**

೬. ಭಯದಿಂದಾಗಿ ಪಾಪಕಾರ್ಯ ತೊರೆಯುವುದು ಕೆಳಹಂತದ ಸಾಧನೆ; ಜ್ಞಾನಿಗಳು ಸಹಜವಾಗಿಯೇ ಪಾಪಕರ್ಮಗಳಿಂದ ದೂರವಿರುವರು ಎಂಬುದು ವಿಶೇಷ:

'ನಿಷಿದ್ಧಂ ಮನಸಾ ಕಲ್ಪ್ಯ ಭೀತೋ ವಿಹಿತಮಾಚರೇತ್ ।
ಅಜ್ಞೋ ಜ್ಞಸ್ಯ ತು ಸಂಕಲ್ಪಃ ಸ್ವಭಾವಾದ್ವಿಹಿತಾನುಗಃ ।
ಶರೀರಧರ್ಮಿಣಃ ಕ್ವಾಪಿ ನಿಷಿದ್ಧೇಽಪಿ ಮನೋ ವ್ರಜೇತ್ ।
ತಥಾಪಿ ತಸ್ಯ ನಾನರ್ಥೋ ಮೋಕ್ಷೇ ಚೈವಾನ್ಯಥಾ ವ್ರಜೇತ್' ॥

- ಧರ್ಮತತ್ತ್ವ (ಭಾ. ತಾ. ೧೧/೧೮/೩೮)

## ನಾಮತ್ರಯ ಮಹಿಮೆ

**ವ್ಯಾಸಃ**

**ತೀರ್ಥಕೋಟಿಸಹಸ್ರೈಸ್ತು ಸೇವಿತೈಃ ಕಿಂಪ್ರಯೋಜನಮ್ ।**
**ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾಃ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್[೧] ॥ ೨೦೬ ॥**

ಅ: ಸಾವಿರಾರು ಕೋಟಿ ತೀರ್ಥಗಳನ್ನು ಸೇವಿಸಿ ಏನು ಫಲ? 'ಅಚ್ಯುತ ಅನಂತ ಗೋವಿಂದ' ಎಂಬ ನಾಮಗಳ ಉಚ್ಚಾರಣೆಯ ಔಷಧಿಯಿಂದ ಸಕಲರೋಗಗಳೂ ಸಹ ಪರಿಹಾರವಾಗುವವು. ನಾನು ಹೇಳುತ್ತಿರುವುದು ಸತ್ಯ ಸತ್ಯ!

ವಿ: ೧. ರೋಗ ಪರಿಹಾರದ ಸಾಧನವನ್ನಾಗಿ ಶ್ರೀಹರಿಯ ಅಚ್ಯುತ, ಅನಂತ ಮತ್ತು ಗೋವಿಂದ ಎಂಬ ನಾಮಗಳ ಉಚ್ಚಾರಣೆಯನ್ನು ಇಲ್ಲಿ ತಿಳಿಸಲಾಗಿದೆ. ತೀರ್ಥಸೇವನೆ ರೋಗಪರಿಹಾರಕ ಎಂಬುದು ಪ್ರಸಿದ್ಧ: 'ಅಕಾಲಮೃತ್ಯುಹರಣಂ ಸರ್ವವ್ಯಾಧಿನಿವಾರಣಂ'. ಅದರಂತೆ ಇತರ ತೀರ್ಥಗಳ ಯಾತ್ರೆಯೂ ಸಹ ರೋಗನಿವಾರಕವೇ. ಆದರೆ ಕೇವಲ ಶ್ರೀಹರಿಯ ಈ ಮೂರು ನಾಮಗಳ ಉಚ್ಚಾರಣೆಯೇ ಸರ್ವರೋಗ ನಿವಾರಕ ಎಂಬುದು ವಿಶೇಷ: ಸಂಧ್ಯಾದಿಗಳ ಕೊನೆಯಲ್ಲಿ 'ಮಧ್ಯೇ ಮಂತ್ರತಂತ್ರಸ್ವರವರ್ಣಲೋಪಪ್ರಾಯಶ್ಚಿ-ತ್ತಾರ್ಥವಾಗಿ ಈ ನಾಮತ್ರಯಮಂತ್ರಜಪ ವಿಹಿತವಾಗಿರುವುದರ ಹಿನ್ನೆಲೆ ಇದರಿಂದ ತಿಳಿಯುವುದು.

೨. ಇದರಂತೆ ಶ್ರೀಹರಿಯ ಇತರ ಸಕಲನಾಮಗಳೂ ರೋಗಪರಿಹಾರಕವೇ ಆಗಿದ್ದರೂ ಈ ಮೂರು ನಾಮಗಳ ಉಚ್ಚಾರಣೆ ವಿಶೇಷರೋಗನಾಶಕ ಎಂಬುದು ವಿಶೇಷಾಂಶ.

೩. ಈ ಮೂರು ನಾಮಗಳ ಉಚ್ಚಾರಣೆಯಿಂದಲೇ ತಾವು ಕಾಲಕೂಟದಂತಹ ಘೋರವಿಷದ ಬಾಧೆಗೆ ಒಳಗಾಗದೆ ಸುರಕ್ಷಿತವಾಗಿ ಉಳಿದುಕೊಂಡದ್ದನ್ನು ಶ್ರೀರುದ್ರ-ದೇವರು ಪಾರ್ವತೀದೇವಿಗೆ ತಿಳಿಸಿದ ವಿವರ ಪದ್ಮಪುರಾಣದಲ್ಲಿ ಬಂದಿದೆ.

★★

## ಹರಿಸರ್ವೋತ್ತಮತ್ವದ ಸಮರ್ಥನೆ

**ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ॥ ೨೦೭ ॥**

ಅ: ನಾನು ಹೇಳುತ್ತಿರುವುದು ಸತ್ಯ ! ಸತ್ಯ ! ತೋಳೆತ್ತಿ ಸಾರುತ್ತಿರುವೆ. ವೇದ-ಶಾಸ್ತ್ರಗಳಿಗಿಂತ ಮಿಗಿಲಾದದ್ದಿಲ್ಲ; ಕೇಶವನಿಗಿಂತ ಮಿಗಿಲಾದ ಪರದೈವವಿಲ್ಲ.

---

೧. ವಿಷ್ಣುಸ್ಮೃತಿ ಶ್ಲೋ. ೯೯

ವಿ: ೧. ಇದು ಹರಿವಂಶದ ಶ್ಲೋಕ; ವೇದವ್ಯಾಸರ ವಾಣಿ. ವೇದಶಾಸ್ತ್ರಗಳು ಶ್ರೀಹರಿಯನ್ನು ಪ್ರತಿಪಾದಿಸುವ ಶ್ರೇಷ್ಠಪ್ರಮಾಣವಾದರೆ, ಕೇಶವನಾದ ಶ್ರೀಹರಿ ಆ ಶಾಸ್ತ್ರಗಳಿಂದ ಸರ್ವೋತ್ತಮತ್ವೇನ ಪ್ರತಿಪಾದ್ಯನಾದ ಪರದೇವತೆ.

೨. ಇಲ್ಲಿ ವೇದಶಾಸ್ತ್ರಗಳು ಎಂದರೆ ವೇದಗಳು, ಪಂಚಮವೇದವಾದ ಇತಿಹಾಸ ಪುರಾಣಗಳು, ಹಾಗೂ ವೇದಾರ್ಥವನ್ನು ತಿಳಿಸಿಕೊಡುವ ಬ್ರಹ್ಮಸೂತ್ರಾದಿಶಾಸ್ತ್ರಗಳು ಎಂದರ್ಥ. ಅಪೌರುಷೇಯಶಾಸ್ತ್ರವಾಗಿ ವೇದಗಳಿಗೆ ಮಹತ್ತ್ವವಿದ್ದರೆ, ಅಂತಹ ವೇದಾರ್ಥಗಳ ನಿರ್ಣಯ ಎಂಬ ಕಾರಣದಿಂದಾಗಿ ಬ್ರಹ್ಮಸೂತ್ರಾದಿಶಾಸ್ತ್ರಗಳಿಗೆ ಮಹತ್ತ್ವವಿದೆ ಎಂದರ್ಥ.

೩. ಶ್ರೀಹರಿಯು ಸರ್ವೋತ್ತಮನೆಂಬುದನ್ನು **ಕೇಶವ** ಶಬ್ದವು ಅರ್ಥಗರ್ಭಿತವಾಗಿ ತಿಳಿಸುವುದು. **'ಕ'** ಎಂದರೆ ಬ್ರಹ್ಮ; **'ಈಶ '** ಎಂದರೆ ಶಿವ; ಅವರಿಬ್ಬರನ್ನೂ ಸೃಷ್ಟ್ಯಾದಿ-ಗಳಿಂದ ನಿಯಮಿಸುವುದರಿಂದ ಶ್ರೀಹರಿಗೆ ಕೇಶವ ಎಂದು ಹೆಸರು; ಈ ಬಗ್ಗೆ ಹೆಚ್ಚಿನ ವಿವರಗಳನ್ನು ಮೊದಲನೆಯ ಶ್ಲೋಕದ ವಿವರಣೆಯಲ್ಲಿ ನೋಡಬಹುದು.

೪. ಶ್ರೀಮದಾಚಾರ್ಯರ ದ್ವಾದಶಸ್ತೋತ್ರದ ಈ ಕೆಳಗಿನ ಶ್ಲೋಕ ಇದರ ವಿವರಣೆಯಂತಿರುವುದು ಗಮನಾರ್ಹ (೩/೪):

**ಶ್ರುಣುತಾಮಲಸತ್ಯವಚಃ ಪರಮಂ ಶಪಥೇರಿತಮುಚ್ಛ್ರಿತಬಾಹುಯುಗಮ್ ।**
**ನ ಹರೇಃ ಪರಮೋ ನ ಹರೇಃ ಸದೃಶಃ ಪರಮಃ ಸ ತು ಸರ್ವಚಿದಾತ್ಮಗಣಾತ್ ॥**

★★

## ಹರಿನಾಮಸ್ಮರಣೆಯ ಹಿರಿಮೆ

**ಸಕೃದುಚ್ಚಾರಿತಂ ಯೇನ ಹರಿರಿತ್ಯಕ್ಷರದ್ವಯಮ್ ।**
**ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೨೦೮ ॥**

**ಅ:** ಯಾವನು ಹರಿಯೆಂಬ ಎರಡು ಅಕ್ಷರಗಳನ್ನು ಒಮ್ಮೆಯಾದರೂ ಉಚ್ಚರಿಸುವನೋ ಅವನು ಮೋಕ್ಷಕ್ಕೆ ತೆರಳಲು ಸಾಧನವನ್ನು ಅಣಿಮಾಡಿ-ಕೊಂಡಂತೆಯೇ ಸರಿ.

ವಿ: ೧. ಹರಿ ಎಂಬ ಎರಡಕ್ಷರಗಳ ಉಚ್ಚಾರಣೆಯು ಮೋಕ್ಷ ಎಂಬ ಎರಡಕ್ಷರದ ಸಿದ್ಧಿಗೆ ಖಚಿತ ಸಾಧನ ಎಂದರ್ಥ; ಹರಿಯನ್ನು ಮರೆಯುವುದು ನರಕದ ಖಚಿತಸಾಧನವಾದರೆ, ಹರಿಯನ್ನು ಸ್ಮರಿಸುವುದು ಮೋಕ್ಷದ ಹಾದಿ.

೨. ಇಲ್ಲಿ **ಉಚ್ಚಾರಿತಂ** ಎಂಬ ಪದದಿಂದ ಮತ್ತೊಬ್ಬರಿಂದ ಉಚ್ಚಾರಣೆ ಮಾಡಿಸು-ವನೋ ಎಂಬ ಅರ್ಥವಿಶೇಷವು ಸಹ ಸೂಚಿತ; ಎಂದರೆ ತಾನು ಹರಿನಾಮವನ್ನು

ಉಚ್ಚರಿಸುವ ಮೂಲಕ ವೈಷ್ಣವದೀಕ್ಷೆಯನ್ನು ಹೊಂದಿದರೆ ಇನ್ನೊಬ್ಬರ ಮೂಲಕ ಆ ನಾಮವನ್ನು ಉಚ್ಚರಿಸುವುದು ಅವರಿಗೆ ವೈಷ್ಣವದೀಕ್ಷೆಯನ್ನು ನೀಡುವುದಕ್ಕೆ ಸಂಕೇತ ಎಂಬುದು ಇಲ್ಲಿಯ ವಿಶೇಷ; ಒಟ್ಟಾಗಿ ಇತರರಿಗೆ ಹರಿಸರ್ವೋತ್ತಮತ್ವ ಜ್ಞಾನವನ್ನು ಮೂಡಿಸುವ ಪಾಠಪ್ರವಚನಗಳು ಮೋಕ್ಷಸಿದ್ಧಿಗೆ ಮುಖ್ಯಸಾಧನಗಳು ಎಂದು ತಾತ್ಪರ್ಯ.

**

## ಹರಿಕೀರ್ತನೆಯು ದೇವತೆಗಳಿಗೂ ಋಷಿಗಳಿಗೂ ವಿಹಿತ

**ಏವಂ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।**
**ಕೀರ್ತಯಂತಿ ಸುರಶ್ರೇಷ್ಠಂ ದೇವಂ ನಾರಾಯಣಂ ಪ್ರಭುಮ್ ॥ ೨೦೯ ॥**

**ಅ:** ಹೀಗೆ ಬ್ರಹ್ಮಾದಿದೇವತೆಗಳು ಹಾಗೂ ತಪೋಧನರಾದ ಋಷಿಗಳು ಸಹ ಪ್ರಭುವೂ, ದೇವನೂ ಆದ ನಾರಾಯಣನನ್ನು ದೇವೋತ್ತಮ ಎಂಬುದಾಗಿ ಕೊಂಡಾಡುತ್ತಿರುವರು.

ವಿ: ೧. ಹರಿಸರ್ವೋತ್ತಮತ್ವವನ್ನು ಬ್ರಹ್ಮಾದಿದೇವತೆಗಳು ಋಷಿಮುನಿಗಳು ನಿರೂಪಿಸುವುದರಿಂದ ಅದು ಶ್ರೇಷ್ಠವಾದ ಪರಮಪ್ರಮೇಯ ಎಂಬುದು ಖಚಿತ ಎಂದರ್ಥ.

೨. ಇಲ್ಲಿ ನಾರಾಯಣನನ್ನು ಸುರಶ್ರೇಷ್ಠನೆಂದೂ, ದೇವನೆಂದೂ, ಪ್ರಭುವೆಂದೂ ಕೀರ್ತಿಸುವರು ಎಂಬ ಅನ್ವಯವು ವಿವಕ್ಷಿತ; ಇದರಿಂದ ನಾರಾಯಣನನ್ನು ಸಾಮಾನ್ಯವಾಗಿ ಸ್ತುತಿಸದೇ ದೇವೋತ್ತಮ, ಕ್ರೀಡಾದಿಗುಣಸಂಪನ್ನ, ಸರ್ವಸ್ವಾಮಿ ಎಂದು ತಿಳಿಸುವರು ಎನ್ನುವ ಮೂಲಕ ಹರಿಸರ್ವೋತ್ತಮತ್ವದಂತೆ ದೇವತಾತಾರತಮ್ಯ, ಶ್ರೀಹರಿಯ ಸರ್ವಸ್ವಾಮಿತ್ವಗಳು ಸಹ ಮುಖ್ಯಪ್ರಮೇಯಗಳು ಎಂಬ ವಿಶೇಷಾಂಶ ಸೂಚಿತ.

**

## ಹರಿಧ್ಯಾನವು ದಾನತೀರ್ಥಾದಿಗಳಿಗಿಂತ ಶ್ರೇಷ್ಠ

**ಕಿಂ ತಸ್ಯ ದಾನೈಃ ಕಿಂ ತೀರ್ಥೈಃ ಕಿಂ ತಪೋಭಿಃ ಕಿಮಧ್ವರೈಃ ।**
**ಯೋ ನಿತ್ಯಂ ಧ್ಯಾಯತೇ ದೇವಂ ನಾರಾಯಣಮನನ್ಯಧೀಃ ॥ ೨೧೦ ॥**

**ಅ:** ಯಾವನು ನಿತ್ಯವೂ ದೇವನಾದ ನಾರಾಯಣನನ್ನು ಅನನ್ಯಮನಸ್ಕನಾಗಿ ಧ್ಯಾನಿಸುವನೋ ಅವನಿಗೆ ದಾನಗಳಿಂದೇನು? ತೀರ್ಥಗಳಿಂದೇನು? ತಪಸ್ಸುಗಳಿಂದೇನು? ಯಜ್ಞಗಳಿಂದೇನು?

ವಿ: ೧. ಹಿಂದೆ ತಿಳಿಸಿರುವಂತೆ ಶ್ರೀಹರಿಯ ಧ್ಯಾನವು ದಾನ, ತೀರ್ಥ ಮೊದಲಾದ ಸಕಲ ಇತರ ಸಾಧನಗಳಿಗಿಂತಲೂ ಅತ್ಯಂತ ಮಿಗಿಲಾದುದು ಎಂದರ್ಥ.

೨. ಇತರ ಸಾಧನೆಗಳ ಗುರಿ ಶ್ರೀಹರಿಯ ಧ್ಯಾನವೇ ಆದ್ದರಿಂದ ಧ್ಯಾನನಿರತರಿಗೆ ದಾನಾದಿಗಳ ಅಗತ್ಯವಿಲ್ಲ ಎಂಬ ವಿಶೇಷಾರ್ಥವು ಇಲ್ಲಿದೆ: ..'ತಸ್ಯ ಕಾರ್ಯಂ ನ ವಿದ್ಯತೇ ..(ಗೀತಾ-೩/೧೭)'.

★★

## ಹರಿಧ್ಯಾನವು ನಿತ್ಯಮಂಗಲ

**ನಿತ್ಯೋತ್ಸವೋ ಭವೇತ್ ತೇಷಾಂ ನಿತ್ಯಶ್ರೀರ್ನಿತ್ಯಮಂಗಲಮ್[೧] ।**
**ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನಂ ಹರಿಃ ॥ ೨೧೧ ॥**

ಅ: ಯಾರ ಹೃದಯದಲ್ಲಿ ಮಂಗಲಗಳ ನೆಲೆಯಾದ ಭಗವಾನ್ ಶ್ರೀಹರಿ ನೆಲೆಸಿರುವನೋ ಅವರಿಗೆ ನಿತ್ಯೋತ್ಸವ, ನಿತ್ಯಸಂಪತ್ತು ಹಾಗೂ ನಿತ್ಯಮಂಗಲ ಉಂಟಾಗುವವು.

ವಿ: ಶ್ರೀಹರಿಯನ್ನು ಮನಸ್ಸಿನಲ್ಲಿ ಸದಾ ಚಿಂತಿಸುವುದು ಸಕಲವಿಧವಾದ ಮಂಗಲಗಳಿಗೆ ಸಾಧನ; ಅದರಂತೆ ಶ್ರೀಹರಿಯನ್ನು ಹೃದಯದಲ್ಲಿ ನೆಲೆಸಿರುವವನು ಎಂದು ಚಿಂತಿಸುವುದೂ ಅತ್ಯಂತ ಶುಭಕರ ಎಂಬ ಎರಡು ಅರ್ಥಗಳು ಇಲ್ಲಿ ವಿವಕ್ಷಿತ. ಇದು –

**ಲಾಭಸ್ತೇಷಾಂ ಯಶಸ್ತೇಷಾಂ ಕುತಸ್ತೇಷಾಂ ಪರಾಭವಃ ।**
**ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ ॥**
**– ಪದ್ಮಪುರಾಣ ಉತ್ತರಖಂಡ (೮/೧೬೫)**

**ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।**
**ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥**

– ಎಂಬ ಶ್ಲೋಕಗಳ ವಿವರಣೆಯಂತಿದೆ.

★★

## ಕರ್ಮಾದಿಗಳು ಸಾಕ್ಷಾತ್ ಮೋಕ್ಷಸಾಧನವಲ್ಲ

**ಜೀವಂಶ್ಚತುರ್ದಶಾದೂರ್ಧ್ವಂ ಪುರುಷೋ ನಿಯಮೇನ ತು ।**
**ಸ್ತ್ರೀ ವಾಽಪ್ಯನೂನದಶಕಂ ದೇಹಂ [೨]ಮಾನುಷಮಾರ್ಜತೇ ॥ ೨೧೨ ॥**

---

೧. ನಿತ್ಯೋತ್ಸವೋ ನಿತ್ಯತಾ ಚ ನಿತ್ಯಶ್ರೀರ್ನಿತ್ಯಶೋ ಜಯಃ । ( ಪಾ.)

೨. ಮಾನುಷಮಾರ್ಜಯೇತ್ ( ಪಾ.)

ಅ: ಪ್ರತಿಯೊಬ್ಬ ಪುರುಷನಾಗಲೀ, ಸ್ತ್ರೀಯಾಗಲೀ ಹದಿಮೂರನೆಯ ವರ್ಷದ ಅನಂತರವೂ ಬದುಕಿದ್ದಲ್ಲಿ ನಿಯಮೇನ ಹತ್ತಕ್ಕೆ ಕಡಿಮೆಯಿರದ ಮನುಷ್ಯಜನ್ಮಗಳನ್ನು ಪಡೆಯುವನು.

ವಿ: ೧. ಹದಿಮೂರನೆಯ ವರ್ಷದವರೆಗೆ ಒಬ್ಬ ವ್ಯಕ್ತಿ ಮಾಡುವ ಪುಣ್ಯಪಾಪಗಳ ಲೇಪ ವಿಶೇಷವಾಗಿ ಅವನ ತಂದೆ ತಾಯಿಗಳಿಗೆ ಪೋಷಕರಿಗೆ ತಟ್ಟುವುದು ; ಆದರೆ ಹದಿನಾಲ್ಕನೆಯ ವರ್ಷದಿಂದ ಅವನು ಮಾಡುವ ಸಕಲಕರ್ಮಗಳ ಲೇಪವು ಅವನದೇ; ಅದರ ಫಲವಾಗಿ ಮುಂದೆ ಅತಿ ಕಡಿಮೆಯೆಂದರೂ ಹತ್ತು ಮನುಷ್ಯಜನ್ಮಗಳನ್ನು ಪಡೆಯುವಷ್ಟು ಕರ್ಮವನ್ನು ಅವನು ಪ್ರತಿದಿನವೂ ಸಹ ಮಾಡುವನು ಎಂದರ್ಥ.

೨. ಒಂದು ಕಾಲಕ್ಕೆ ಈ ವಿನಾಯತಿ ಹನ್ನೆರಡನೆಯ ವರ್ಷದವರೆಗೆ ಮಾತ್ರವೇ ಆಗಿತ್ತು. ಆಣಿಮಾಂಡವ್ಯರ ಪ್ರಸಂಗದಲ್ಲಿ ಅವರ ವಿಶೇಷವಚನದಿಂದ ಈ ನಿಯಮ ಹದಿನಾಲ್ಕನೆಯ ವರ್ಷದಿಂದ ಅನ್ವಯಿಸುವಂತೆ ಆಯಿತೆಂಬ ವಿವರ ಮಹಾಭಾರತದಲ್ಲಿದೆ:

**ಆಚತುರ್ದಶಕಾದ್ವರ್ಷಾನ್ನ ಭವಿಷ್ಯತಿ ಪಾತಕಮ್ ।**
**ಪರತಃ ಕುರ್ವತಾಮೇವಂ ದೋಷ ಏವ ಭವಿಷ್ಯತಿ ॥**
**- ಭಾರತದಲ್ಲಿ ಯಮನನ್ನು ಕುರಿತು ಅಣೀಮಾಂಡವ್ಯವಚನ(೧/೧೦೭/೧೭)**

**ಮುನಿಃ ಸುಕರ್ಮಶೀಲೋಽಪಿ ಜೀವನ್ನೇಕದಿನೇನ ವೈ ।**
**ದಶಾವರಾಣಾಂ ದೇಹಾನಾಂ ಕಾರಣಂ ಪ್ರತಿಪದ್ಯತೇ ॥ - ವಾಯುಪುರಾಣ**
**ವರ್ಷಾಚ್ಚತುರ್ದಶಾದೂರ್ಧ್ವಂ ಯೇ ನ ವಿದ್ಯುಃ ಶುಭಾಶುಭಮ್ ।**
**ತೇಷಾಮಜ್ಞಾನಜೋ ದೋಷಃ ಸುಮಹಾನ್ ಕರ್ಮಜಾದಪಿ ।**
**ತಿರಶ್ಚಾಮಿಂದ್ರಿಯಾಸಕ್ತೇರ್ನ ದೋಷೋಽಜ್ಞಾನಜೋ ಭವೇತ್ ।**
**ಗುಣೋಽಪಿ ನೈವ ಕಶ್ಚಿತ್ಸ್ಯಾದ್ಯತೋ ಜ್ಞಾನಬಹಿಷ್ಕೃತಾ ।**
**-ಅತೋ ಮೂರ್ಖಾಣಾಮದೋಷ ಇತಿ ನ ॥ - ಭಾ.ತಾ.**

★★

## ಬ್ರಹ್ಮಜ್ಞಾನದಿಂದಲೇ ಮೋಕ್ಷ

**ಚತುರ್ದಶೋರ್ಧ್ವಜೀವೀನಿ ಸಂಸಾರಶ್ಚಾದಿವರ್ಜಿತಃ ।**
**ಅವಿದಿತ್ವಾ[೧] ಪರಂ ದೇವಂ ಮೋಕ್ಷಾಶಾ ಕಾ ಮಹಾಮುನೇ ॥ ೨೧೩ ॥**

ಅ: ಮಹಾಮುನಿಯೇ ! ಅನೇಕರು ಹದಿನಾಲ್ಕರ ನಂತರವೂ ಬದುಕುವರು; ಸಂಸಾರವಾದರೋ ಆದಿ ಇಲ್ಲದಂತಹದು. ಆದ್ದರಿಂದ ಸರ್ವೋತ್ತಮನಾದ ಶ್ರೀಹರಿಯನ್ನು ಅರಿಯದೇ ಮೋಕ್ಷದ ಆಸೆಯೆಂತು?

೧. ಅತೋಽವಿತ್ವಾ (ಪಾ.) ; ಇದು ಬ್ರಹ್ಮಾಂಡಪುರಾಣದ ವಚನ ಎಂಬುದಾಗಿ ಗೀತಾಭಾಷ್ಯದಲ್ಲಿ ಉದಾಹೃತ (೩/೪)

ವಿ: ೧. ಹದಿನಾಲ್ಕರ ಅನಂತರ ಬದುಕುವ ಜೀವಿಗಳಿಗೆ ಪ್ರತಿನಿತ್ಯವೂ ಮುಂದೆ ಹತ್ತು ಮನುಷ್ಯ ಜನ್ಮ ಪಡೆಯುವಂತಹ ಕರ್ಮಗಳ ಲೇಪವಿದೆ; ಎಂದರೆ ಈ ಜನ್ಮದ ಕರ್ಮಗಳೇ ಊಹಿಸಲಾಗದಷ್ಟು ಅಪಾರ. ಇನ್ನು ಹಿಂದಿನ ಜನ್ಮಗಳು ಅನಂತ. ಎಂದರೆ ಅನುಭವಿಸ-ಬೇಕಾದ ಕರ್ಮದ ಫಲಕ್ಕೆ ಕೊನೆಯೇ ಇಲ್ಲ. ಇದರಿಂದ ಕೇವಲ ಕರ್ಮಾಚರಣೆಯಿಂದ ಎಂದೂ ಮೋಕ್ಷ ಲಭಿಸದು ಎಂದು ಸ್ಥಿರ ಪಡುವುದು.

೨. ಕರ್ಮಫಲವನ್ನು ಕರ್ಮಾಚರಣೆಯಿಂದಲೇ ಕಳೆದುಕೊಳ್ಳುವ ಪ್ರಯತ್ನವನ್ನು ಕೆಸರಿಂದ ಕೆಸರನ್ನು ತೊಳೆಯುವ ಪ್ರಯತ್ನ ಎಂದು ಶ್ರೀಮದ್ಭಾಗವತ ಟೀಕಿಸಿದೆ: **''ಯಥಾ ಪಂಕೇನ ಪಂಕಾಂಭಃ ಸುರಯಾ ವಾ ಸುರಾಕೃತಮ್ । ಭೂತಹತ್ಯಾಂ ತಥೈವೈನಾಂ ನ ಯಜ್ಞೋ ಮಾರ್ಷ್ಟುಮರ್ಹತಿ ॥'** (ಭಾಗ. ೧/೯/೭); ಅದರ ಭಾವವನ್ನು ಶ್ರೀಗೋಪಾಲದಾಸರು **'ಕೆಸರಿಂದ ಕೆಸರು ತೊಳೆದಂತೆ ಕರ್ಮದ ಪಥವು'** ಎಂದು ವಿವರಿಸಿರುವರು.

೩. ಹೀಗೆ ಕೇವಲ ಕರ್ಮಾಚರಣೆಯಿಂದ ಸದ್ಗತಿ ಲಭಿಸುವುದಿಲ್ಲವಾದ್ದರಿಂದ ಬ್ರಹ್ಮಜ್ಞಾನ ಪಡೆಯುವುದೊಂದೇ ಮೋಕ್ಷಕ್ಕೆ ಖಚಿತವಾದ ಸಾಧನ ಎಂದು ತಿಳಿಯಬೇಕು ಎಂಬುದು ಇಲ್ಲಿಯ ಸಂದೇಶ.

★★

## ಸಕಲಕರ್ಮಕ್ಷಯಕ್ಕೂ ಬ್ರಹ್ಮಜ್ಞಾನವೇ ಸಾಧನ

**ಆಚತುರ್ದಶಮಾದ್ವರ್ಷಾತ್ ಕರ್ಮಾಣಿ ನಿಯಮೇನ ತು ।**
**ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ।**
**ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥ ೨೧೪ ॥**

**ಅ:** ಹದಿನಾಲ್ಕನೆಯ ವರ್ಷದಿಂದ ನಿಯಮೇನ ಮುಂದೆ ಅತಿಕಡಿಮೆ-ಯೆಂದರೂ ಹತ್ತು ಜನ್ಮಗಳು ಬರುವಂತಹ ಕರ್ಮಗಳನ್ನು ಜೀವಿ ಮಾಡುವನು; ಆದ್ದರಿಂದ ಕರ್ಮವು ತೀರಿ ಮುಕ್ತಿ ಹೇಗೆ ತಾನೇ ಲಭಿಸೀತು?

ವಿ: ೧. ಕೇವಲ ಕರ್ಮಾಚರಣೆಯಿಂದ ಮುಕ್ತಿ ಲಭಿಸದು ಎಂಬುದನ್ನು ಪುನಃ ವಿವರಿಸುವ ಮತ್ತೊಂದು ಶ್ಲೋಕವಿದು:

**ಆಚತುರ್ದಶವಾಕ್ಯಂ ಸ್ಯಾತ್ ಜ್ಞಾನಲೋಪವಿವಕ್ಷಯಾ ।**
**ಚತುರ್ದಶಾದೂರ್ಧ್ವವಚಸ್ತ್ವವಿವೇಕವಿವಕ್ಷಯಾ ॥ (ತಾ)**

೨. ಇಲ್ಲಿಯೂ ಸಹ ನಿಯಮೇನ ಎಂಬ ಪದದಿಂದ ಪ್ರತಿಯೊಬ್ಬನೂ ಪ್ರತಿನಿತ್ಯವೂ ಹದಿನಾಲ್ಕು ತುಂಬಿದ ಅನಂತರ ಮುಂದೆ ಕನಿಷ್ಠ ಹತ್ತು ಜನ್ಮಗಳನ್ನು ಹೊಂದುವಷ್ಟು ಕರ್ಮಗಳನ್ನು ಮಾಡುವುದು ಅತ್ಯಂತಖಚಿತ ಎಂಬ ಅಂಶ ಸೂಚಿತ.

೩. ಕರ್ಮಕ್ಷಯವಾಗುವವರೆಗೂ ಮೋಕ್ಷವಿಲ್ಲ ; ಕೇವಲ ಕರ್ಮಾಚರಣೆಯಿಂದ ಕರ್ಮ ಕ್ಷಯಿಸುವುದೂ ಇಲ್ಲ. ಆದ್ದರಿಂದ ಬ್ರಹ್ಮಜ್ಞಾನವೇ ಮೋಕ್ಷದ ಮುಖ್ಯಸಾಧನೆ ಎಂದು ಭಾವ.

೪. ಬ್ರಹ್ಮಜ್ಞಾನ ಸಂಚಿತವಾದ ಸಕಲಕರ್ಮಗಳನ್ನೂ ಸುಟ್ಟು ಹಾಕುವುದು ; ಆಗಾಮಿ ಕರ್ಮಗಳಿಗೆ ಲೇಪವನ್ನು ತಪ್ಪಿಸುವುದು; ಉಳಿಯುವ ಪ್ರಾರಬ್ಧವನ್ನು ಅನುಭವಿಸುವುದರಿಂದ ತೀರಿಸಬಹುದು; ಆದ್ದರಿಂದ ಬ್ರಹ್ಮಜ್ಞಾನದಿಂದ ಕರ್ಮವು ಕ್ಷಯಿಸಿ ಮೋಕ್ಷವಾಗುವದರಲ್ಲಿ ಸಂದೇಹವಿಲ್ಲ ಎಂದರ್ಥ.

೫. ಜ್ಞಾನವು ಸಕಲಕರ್ಮಗಳನ್ನು ಸುಟ್ಟು ಹಾಕುವ ಮಹತ್ತರವಾದ ಅಗ್ನಿ ಎಂಬ ಮಾತು ಗೀತೆಯಲ್ಲಿದೆ:

'ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥'(೪/೩೭)

೬. ಕೇವಲ ಕರ್ಮದಿಂದಲೇ ಮುಕ್ತಿ ಎಂಬ ಮೀಮಾಂಸಕರ ಮತದ ಖಂಡನೆಯಾಗಿಯೂ ಸಹ ಈ ಮಾತು ಅತ್ಯಂತ ಗಮನಾರ್ಹವಾದುದು.

★★

## ಯೋಗ್ಯತಾನುಗುಣವಾದ ಪೂಜೆಯೇ ವಿಹಿತ

**ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ।**
**ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ ಭ್ರಶ್ಯತೇ ಹಿ ಸಃ (ಇತಿ ಪಾದ್ಮೇ) ॥೨೧೫॥**

ಅ: ಸಮರಾದವರಿಗೆ ವಿಷಮಪೂಜೆ, ಸಮರಲ್ಲದವರಿಗೆ ಸಮಾನಪೂಜೆ ಇವನ್ನು ಯಾವನು ಮಾಡುವನೋ ಅವನು ದೇವತೆಯಾದರೂ ಸಹ ತನ್ನ ಪದವಿಯಿಂದ ಭ್ರಷ್ಟನಾಗುವನು (ಎಂದು ಪದ್ಮಪುರಾಣದಲ್ಲಿದೆ).

ವಿ: ೧. ಸಮರಾದವರನ್ನು ಸಮರೆಂದೇ ಪೂಜಿಸಬೇಕು; ಸಮರಲ್ಲದವರನ್ನು ಸಮರಲ್ಲ- ದವರೆಂದೇ ಪೂಜಿಸಬೇಕು; ಹಾಗೆ ಮಾಡದೇ ಸಮರಲ್ಲದವರನ್ನು ಸಮರೆಂದೂ, ಸಮರಾದವರನ್ನು ಸಮಾನರಲ್ಲವೆಂದೂ ಪೂಜಿಸುವುದು ಅನರ್ಥಕರ ಎಂದರ್ಥ:

ಅಚೇತನಮಯೋಗ್ಯಂ ಚ ತಥೈವಾತಾತ್ತ್ವಿಕಂ ಕ್ವಚಿತ್ ।
ನೋಪಾಸೀತ ಪರೋಽನರ್ಥಃ ಸ್ಯಾತ್ತಥೋಪಾಸನಾಕೃತಃ ।

- ಛಾಂದೋಗ್ಯೋಪನಿಷದ್ಭಾಷ್ಯ

'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಮ್'

ಸಂಕರ್ಷಣಸೂತ್ರ । - ಛಾಂದೋಗ್ಯೋಪನಿಷದ್ಭಾಷ್ಯ

೨. ಇಲ್ಲಿ ಸಮ ಎಂದರೆ ಯೋಗ್ಯತೆಯಲ್ಲಿ ಸಮ ಎಂದರ್ಥ; ಎಂದರೆ ಯೋಗ್ಯತೆಯಲ್ಲಿ ಸಮರಾದ ಬ್ರಹ್ಮವಾಯುಗಳನ್ನು ಸಮರಲ್ಲವೆಂದೂ, ಯೋಗ್ಯತೆಯಲ್ಲಿ ಸಮರಲ್ಲದ ಗರುಡಶೇಷಾದಿಗಳನ್ನು ಬ್ರಹ್ಮವಾಯುಗಳಿಗೆ ಸಮರೆಂದು ಉಪಾಸನೆ ಮಾಡುವುದು ಅನರ್ಥಕರ ಎಂದು ಭಾವ.

೩. ದೇವತಾತಾರತಮ್ಯವನ್ನು ಶಾಸ್ತ್ರೋಕ್ತಕ್ರಮದಲ್ಲಿ ತಿಳಿದುಕೊಂಡೇ ಯಥಾ-ಯೋಗ್ಯವಾಗಿ ಆರಾಧಿಸಬೇಕೇ ಹೊರತು ಮನಸ್ಸಿಗೆ ತೋಚಿದ ರೀತಿಯಲ್ಲಿ ಅಲ್ಲ ಎಂಬುದು ಇಲ್ಲಿಯ ಮುಖ್ಯ ಸಂದೇಶ.

೪. ಇಂತಹ ಅಸದುಪಾಸನೆಯನ್ನು ದೇವತೆಗಳು ಮಾಡಿದರೂ ಸಹ ಅವರಿಗೆ ಪದಭ್ರಷ್ಟತೆಯಂತಹ ಪ್ರತ್ಯವಾಯ ಖಚಿತ; ಇನ್ನು ಇತರರು ಮಾಡಿದರಂತೂ ವಿಶೇಷ ಅನರ್ಥ ತಪ್ಪಿದ್ದಲ್ಲ.

೫. ದೇವತೆಗಳಿಗೂ ಇದು ಅನರ್ಥಕರವಾದ ಮಹಾಪಾತಕವಾದ್ದರಿಂದ ಜ್ಞಾನಿಗಳಾದವರೂ ಸಹ ತಾರತಮ್ಯಕ್ಕೆ ವಿಹಿತವಲ್ಲದ ರೀತಿಯಲ್ಲಿ ಉಪಾಸನೆ ಮಾಡುವುದು ನಿಷಿದ್ಧ ಎಂದಾಗುವುದು.

★★

## ಮನ್ನಣೆಗೆ ಅರ್ಹತೆ

**ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।**
**ಏತಾನಿ ಮಾನ್ಯಸ್ಥಾನಾನಿ ಗರೀಯೋ [1]ಹ್ಯುತ್ತರೋತ್ತರಮ್ ॥ ೨೧೬ ॥**

**ಅ:** ಐಶ್ವರ್ಯ, ಬಂಧುತ್ವ, ವಯಸ್ಸು, ಸಾಧನೆ ಹಾಗೂ ಐದನೆಯದಾಗಿ ವಿದ್ಯೆ ಇವು ಮನ್ನಣೆಗೆ ಕಾರಣವಾಗುವ ನಿಮಿತ್ತಗಳು; ಇವುಗಳಲ್ಲಿ ಅನಂತರದ್ದು ಮುಂಚಿನದಕ್ಕಿಂತ ಮಿಗಿಲಾದದ್ದು.

ವಿ: ೧. ದೇವತೆಗಳಲ್ಲಿ ತಾರತಮ್ಯದ ಪರಿಜ್ಞಾನಕ್ಕೆ ಶಾಸ್ತ್ರವಚನಗಳಿವೆ; ಆದರೆ ಅಜ್ಞಾತಸ್ವರೂಪರಾದವರ ತಾರತಮ್ಯವನ್ನು ಗುರುತಿಸುವುದು ಹೇಗೆ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಐಶ್ವರ್ಯ ಮೊದಲಾದವುಗಳು ಯೋಗ್ಯತೆಯನ್ನು ನಿರ್ಣಯಿಸುವ ಸಾಧನಗಳು. ಅವುಗಳಲ್ಲೂ ಐಶ್ವರ್ಯಕ್ಕಿಂತ ಬಂಧುತ್ವ, ಅದಕ್ಕಿಂತ ವಯಸ್ಸು ಅದಕ್ಕಿಂತ ಕರ್ಮ, ಎಲ್ಲಕ್ಕಿಂತಲೂ ಹೆಚ್ಚಾಗಿ ವಿದ್ಯೆ ಹಿರಿಮೆಯ ಮುಖ್ಯಸಾಧನ. ಇವುಗಳನ್ನು ಗಮನಿಸಿ ಅವರನ್ನು ಗೌರವಿಸಬೇಕು ಎಂದರ್ಥ:

**ವಿದ್ಯಾ ಕರ್ಮ ವಯೋ ಬಂಧುರ್ವಿತ್ತಂ ಭವತಿ ಯಸ್ಯ ವೈ ।**
**ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂ ಗುರೂಣಿ ಚ ।**

**-ಔಶನಸಸ್ಮೃತಿ(೧/೪೯)**

---

೧. ಯದ್ಯದುತ್ತರಮ್ (ಪಾ.);

**ವಿದ್ಯಾ ಕರ್ಮ ವಯೋ ಬಂಧುರ್ವಿತ್ತಂ ಭವತಿ ಪಂಚಮಮ್ ।**
**ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂ ಗುರೂತ್ತರಾತ್ ॥**
**- ಕೂರ್ಮಪುರಾಣ (೨/೬/೧೨)**

೨. ವಿತ್ತದಲ್ಲಿ ಸಮಾನನಾದರೂ ಬಂಧುತ್ವದಲ್ಲಿ ಹಿರಿಯನಾಗಿದ್ದರೆ ಅವನಿಗೆ ಮೊದಲ ಮನ್ನಣೆ; ಸಂಪತ್ತು ಬಂಧುತ್ವಗಳೆರಡೂ ಸಮಾನವಾಗಿದ್ದಾಗ ಹೆಚ್ಚು ವಯಸ್ಸಾದವರಿಗೆ ಹೆಚ್ಚು ಮನ್ನಣೆ; ಈ ಮೂರೂ ಸಮನಾಗಿದ್ದಾಗ ಅವರು ಮಾಡಿದ ಸಾಧನೆಗೆ ಹೆಚ್ಚು ಮನ್ನಣೆ; ಇವೆಲ್ಲವೂ ಇದ್ದಾಗ ವಿದ್ಯಾವಂತನಾದವನಿಗೆ ಇನ್ನೂ ವಿಶೇಷವಾದ ಮನ್ನಣೆ ಎಂದು ಇದರ ಸಾಮಾನ್ಯವಾದ ಭಾವ.

೩. ಮತ್ತೊಂದು ಅರ್ಥದಲ್ಲಿ ದರಿದ್ರನಾಗಿದ್ದರೂ ಬಂಧುತ್ವದಲ್ಲಿ ಹಿರಿಯನಾದವ-ನಿಗೆ ಮನ್ನಣೆ ಸಲ್ಲಿಸಲೇಬೇಕು; ಐಶ್ವರ್ಯ ಬಂಧುತ್ವ ಎರಡೂ ಇಲ್ಲದಿದ್ದರೂ ವಯೋವೃದ್ಧನಿಗೆ ಗೌರವ ಸಲ್ಲಬೇಕು; ಇವು ಮೂರು ಇಲ್ಲವಾದರೂ ಹೆಚ್ಚಿನ ಸಾಧನೆ ಮಾಡಿದವನಿಗೆ ಗೌರವ ಸಲ್ಲಿಸಲೇಬೇಕು. ಇದು ಯಾವುದೂ ಇಲ್ಲದೇ ಕೇವಲ ವಿದ್ಯೆಯಿದ್ದವನು ಉಳಿದೆಲ್ಲವನ್ನು ಹೊಂದಿರುವವರಿಗಿಂತಲೂ ಅತ್ಯಂತಶ್ರೇಷ್ಠ ಎಂಬುದು ವಿಶೇಷವಾದ ಅರ್ಥ.

೪. ಜ್ಞಾನವಿರುವವನಿಗೆ ಎಲ್ಲ ರೀತಿಯಲ್ಲೂ ಸಹ ಸರ್ವೋತ್ಕೃಷ್ಟವಾದ ಗೌರವ ಸಲ್ಲಲೇಬೇಕು; ಆದ್ದರಿಂದ ಜ್ಞಾನಕ್ಕೆ ಸಮವಾದ ಮತ್ತೊಂದು ವಸ್ತುವಿಲ್ಲ ಎಂದಾಗುವುದು: **'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'**.

೫. ಇವೆಲ್ಲವನ್ನೂ ಹೊಂದಿದ್ದವರಂತೂ ಅತ್ಯಂತ ವಿಶೇಷವಾಗಿ ಪೂಜ್ಯರು ಎಂಬುದು ಮುಖ್ಯಸಿದ್ಧಾಂತ; ಶ್ರೀಹರಿಯು ಸಂಪತ್ತಿನ ಅಭಿಮಾನಿನಿಯಾದ ಮಹಾಲಕ್ಷ್ಮಿಯ ಪತಿ; ಸರ್ವರಿಗೂ ತಂದೆ, ತಾಯಿ ಮೊದಲಾಗಿ ಎಲ್ಲ ವಿಧವಾದ ಸಂಬಂಧಿ; ವಯಸ್ಸಿನಲ್ಲಿ ಪ್ರಾಕೃತದೇಹವೇ ಇಲ್ಲದ ಜ್ಞಾನಾನಂದಮಯನಾದ ಪರಮಪುರುಷ; ಕರ್ಮಗಳಲ್ಲಿ ಜಗಜ್ಜನ್ಮಾದಿಗಳನ್ನೆಲ್ಲಾ ಸರ್ವದಾ ಸರ್ವರಿಗೂ ಮಾಡುವ ಮಹನೀಯ; ವಿದ್ಯೆಯಲ್ಲಂತೂ ಸ್ವತಃ ಸರ್ವಜ್ಞ ಹಾಗೂ ಸರ್ವಶಾಸ್ತ್ರಪ್ರತಿಪಾದ್ಯ. ಆದ್ದರಿಂದ ಶ್ರೀಹರಿಯೇ ಅಗ್ರಪೂಜೆಗೆ ಅರ್ಹ ಎಂಬುದು ಇಲ್ಲಿಯ ಮುಖ್ಯಧ್ವನಿ.

೬. ಅನಂತರ ಬ್ರಹ್ಮವಾಯುಗಳು ಶ್ರೀಶಬ್ದವಾಚ್ಯರಾದ ಸರಸ್ವತಿ ಭಾರತಿಯರಿಗೆ ಪತಿಗಳು; ದೇಹ ನೀಡುವ ದೇಹಸಂರಕ್ಷಿಸುವ, ತತ್ತ್ವೋಪದೇಶಮಾಡುವ ಮೂಲಕ ಗುರು ಮೊದಲಾದ ಸಂಬಂಧವನ್ನು ಹೊಂದಿದವರು: - **'ಮಾತರ್ಮೇ ಮಾತರಿಶ್ವನ್'** (ವಾಯುಸ್ತುತಿ); ವಯಸ್ಸಿನಲ್ಲಿ ಇತರ ಎಲ್ಲರಿಗಿಂತಲೂ ಮುಂಚಿತವಾಗಿ ಶ್ರೀಹರಿಯಿಂದ ಜನಿಸಿ ಬಂದವರು. ಕರ್ಮದಲ್ಲಿ ಶ್ವಾಸೋಚ್ಛ್ವಾಸಾದಿಗಳನ್ನು ಮಾಡುವ ಕಾರ್ಯದಿಂದ

ಹಿಡಿದು ಸಕಲಕಾರ್ಯಗಳಿಗೂ ಪ್ರವರ್ತಕರಾದವರು; ವಿದ್ಯೆಯಲ್ಲಂತೂ ಪೂರ್ಣ-ಪ್ರಜ್ಞರು; ಆದ್ದರಿಂದ ಇವರ ಸ್ಥಾನ ಲಕ್ಷ್ಮೀನಾರಾಯಣರ ಅನಂತರದ ಸ್ಥಾನ ಎಂದರ್ಥ.

೭. ಇದೇ ರೀತಿಯಲ್ಲಿ ಅನ್ವಯ ಮಾಡಿಕೊಂಡಾಗ ಇತರ ದೇವತೆಗಳಲ್ಲೂ ಈ ಗುಣಗಳು ಮೇಲಿನವರಿಗೆ ತಮಗಿಂತ ಕಡಿಮೆಯಾದವರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವವು ಎಂದು ತಿಳಿಯಬೇಕು.

೮. ಸಂಪತ್ತು ಮೊದಲಾದವುಗಳು ಯೋಗ್ಯತೆಗೆ ತಕ್ಕಂತೆ ಸಾಮಾನ್ಯವಾಗಿ ಸ್ವೋತ್ತಮ-ರಲ್ಲಿ ಸ್ವಾವರರಿಗಿಂತ ಹೆಚ್ಚಾಗಿ ಇರುವವು ಎಂಬುದು ವಿಶೇಷ.

೯. ಐಶ್ವರ್ಯದಲ್ಲೂ ತಾರತಮ್ಯ, ಬಂಧುತ್ವದಲ್ಲೂ ತಂದೆ ತಾಯಿ ಗುರು ಮೊದಲಾದ ತಾರತಮ್ಯ ಮೊದಲಾದವುಗಳನ್ನು ಸಹ ಗಮನಿಸಬೇಕು.

೧೦. ಇದರಂತೆ ವರ್ಣತಃ ಹಿರಿಮೆ, ಆಶ್ರಮದ ನಿಮಿತ್ತದಿಂದಾಗಿ ಹಿರಿಮೆ ಮೊದಲಾದ ಇತರ ಕಾರಣಗಳೂ ಸಹ ತಾರತಮ್ಯಕ್ಕೆ ಕಾರಣವಾಗುವ ಅಂಶಗಳು ಎಂಬ ವಿಶೇಷ ವಿವರಗಳನ್ನು ಗ್ರಂಥಾಂತರಗಳಿಂದ ತಿಳಿಯಬೇಕು.

೧೧. ಹೀಗೆ ಈ ಶ್ಲೋಕ ತಾರತಮ್ಯದ ಸ್ವರೂಪವನ್ನು ಅತ್ಯಂತ ಸ್ಫುಟವಾಗಿ ವಿವೇಚಿಸುವ ಮಹತ್ತ್ವಪೂರ್ಣವಾದ ಶ್ಲೋಕ.

೧೨. ಇದು ಮನುಸ್ಮೃತಿಯ ವಚನ ಎಂಬುದಾಗಿ ಗೀತಾಭಾಷ್ಯ(೬/೯)ದಲ್ಲಿದೆ. ಮನುಸ್ಮೃತಿಯಲ್ಲಿ ಈ ವಚನ ಉಪಲಬ್ಧವೂ ಇದೆ (೨/೧೩೬).

★★

## ಸಮದೃಷ್ಟಿಯ ಮಹಿಮೆ

**ಗುಣಾನುಸಾರಿಣೀಂ ಪೂಜಾಂ ಸಮಾಂ ದೃಷ್ಟಿಂ ಚ ಯೋ ನರಃ ।**
**ಸರ್ವಭೂತೇಷು ಕುರುತೇ ತಸ್ಯ ವಿಷ್ಣುಃ ಪ್ರಸೀದತಿ[1] ॥ ೨೧೭ ॥**

ಅ: ಯಾವ ಮನುಷ್ಯನು ಗುಣಕ್ಕೆ ಅನುಸಾರವಾಗಿ ಪೂಜೆಯನ್ನೂ ಸಮಾನ-ದೃಷ್ಟಿಯನ್ನೂ ಸಕಲಪ್ರಾಣಿಗಳಲ್ಲೂ ಮಾಡುವನೋ ಅವನಿಗೆ ಮಹಾವಿಷ್ಣುವು ಪ್ರಸನ್ನನಾಗುವನು.

ವಿ: ೧. ಹಿಂದಿನ ಶ್ಲೋಕದಲ್ಲಿ ಹೇಳಿದ ಗುಣಗಳನ್ನು ಗಮನಿಸಿ ಸಕಲಪ್ರಾಣಿಗಳಿಗೂ ಅವುಗಳಿಗೆ ವಿಹಿತವಾದ ರೀತಿಯಲ್ಲಿ ತಾರತಮ್ಯೋಕ್ತವಾದ ಪೂಜೆಯನ್ನು ಸಲ್ಲಿಸುವುದು ಹರಿಪ್ರಸಾದಕ್ಕೆ ವಿಶೇಷ ಸಾಧನ ಎಂದರ್ಥ.

---

೧. ಇದು ಬ್ರಹ್ಮವೈವರ್ತವಚನ ಎಂಬುದಾಗಿ ಗೀತಾಭಾಷ್ಯದಲ್ಲಿ ಉದಾಹೃತವಾಗಿದೆ(೬/೯)

೨. ಇದರ ಬಗ್ಗೆ ಹೆಚ್ಚಿನ ವಿವರಣೆಗಳನ್ನು ಗೀತಾಭಾಷ್ಯ, ಗೀತಾತಾತ್ಪರ್ಯಾದಿ-ಗ್ರಂಥಗಳಿಂದ ತಿಳಿಯಬಹುದು:

**ನತು ಸಾಧುಪಾಪಾದೀನಾಂ ಪೂಜಾದಿಸಾಮ್ಯಮ್ ।**
**ತತ್ರ ದೋಷಸ್ಮೃತೇಃ ........................ ॥ - ಗೀತಾಭಾಷ್ಯ (೬/೯)**

**ಸುಹೃದಾದಿಷು ಶಾಸ್ತ್ರೋಕ್ತಪೂಜಾದಿಕೃತಿರನ್ಯೂನಾಧಿಕಾ ಯಾ ಸಾಽಪಿ ಸಮಾ ।**
**-ಗೀತಾಭಾಷ್ಯ (೬/೯)**

೩. ಮುಂದಿನ ಶ್ಲೋಕದಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳು ಬಂದಿವೆ.

★★

## ಸಮಬುದ್ಧಿಯ ವಿವರಣೆ

**ಯಥಾ ಸುಹೃತ್ಸು ಕರ್ತವ್ಯಂ [೧]ಪಿತೃಶತ್ರುಸುತೇಷು ಚ ।**
**ತಥಾ ಕರೋತಿ [೨]ಪೂಜಾದಿ ಸಮಬುದ್ಧಿಃ ಸ ಉಚ್ಯತೇ ॥ ೨೧೮ ॥**

**ಅ:** ಸ್ನೇಹಿತರಲ್ಲಿ ಹೇಗೆ ನಡೆದುಕೊಳ್ಳಬೇಕೋ, ಅದರಂತೆ ತಂದೆ ಶತ್ರುಗಳು ಪುತ್ರರು ಮೊದಲಾದವರಲ್ಲಿ ಹೇಗೆ ವರ್ತಿಸಬೇಕೋ ಹಾಗೆ ಪೂಜೆ ಮೊದಲಾದವುಗಳನ್ನು ಅವರವರಿಗೆ ಯಾವನು ಮಾಡುವನೋ ಅವನು ಸಮಬುದ್ಧಿಯವನು ಎನ್ನಿಸುವನು.

ವಿ: ೧. ಹಿಂದಿನ ಶ್ಲೋಕದಲ್ಲಿ ಬಂದ ಸಮಬುದ್ಧಿಯ ವಿವರಣೆ ಇಲ್ಲಿದೆ. ಸಮಬುದ್ಧಿಯೆಂದರೆ ಎಲ್ಲರನ್ನೂ ಸಮಾನವಾಗಿ ನೋಡುವ ಬುದ್ಧಿ ಎಂದರ್ಥವಲ್ಲ. ಅವರವರ ಯೋಗ್ಯತೆ ಅನುಗುಣವಾಗಿ ನೋಡುವುದೇ ಸಮಬುದ್ಧಿ ಎಂದರ್ಥ. ಎಂದರೆ, ಸ್ನೇಹಿತರನ್ನು ಸ್ನೇಹಿತರಂತೆಯೂ, ತಂದೆತಾಯಿ ಮೊದಲಾದವರನ್ನು ತಂದೆತಾಯಿ ಮೊದಲಾದ-ವರಂತೆಯೂ, ಶತ್ರುಗಳನ್ನು ಶತ್ರುಗಳನ್ನಾಗಿಯೂ, ಮಕ್ಕಳನ್ನು ಮಕ್ಕಳನ್ನಾಗಿಯೂ ನೋಡಿ ಅವರನ್ನು ಉಚಿತವಾದ ರೀತಿಯಲ್ಲಿ ಆದರಿಸುವುದೇ ನಿಜವಾದ ಪೂಜೆ ಎಂದರ್ಥ :

**ಯಸ್ಯ ಯತ್ರ ಯಥಾ ವೃತ್ತಿರ್ವಿಹಿತಾ ವರ್ತನಂ ತಥಾ ।**
**ಜ್ಞಾನಂ ವಾಽಪಿ ಸಮತ್ವಂ ತದ್ವಿಷಮತ್ವಮತೋಽನ್ಯಥಾ' ॥**
**- ಮಹಾವಿಷ್ಣುಪುರಾಣ - ಗೀತಾತಾತ್ಪರ್ಯ (೬/೯)**

೨. 'ಬಡಿಸುವಾಗ ಸಮನಾಗಿ ಬಡಿಸುವುದು' ಎಂದರೆ ಹೇಗೋ ಹಾಗೆಯೇ ಇಲ್ಲಿಯ 'ಸಮಬುದ್ಧಿ' ಎಂಬುದಕ್ಕೆ ಅರ್ಥ; 'ಬಡಿಸುವಾಗ ಸಮವಾಗಿ ಬಡಿಸುವುದು' ಎಂದರೆ

---

೧. ಪಿತೃಮಾತೃಸುತೇಷು ಚ ( ಪಾ.)
೨. ಪೂಜಾಂ ವೈ ( ಪಾ.) ॥ ಗಾರುಡವಚನಮಿತಿ ಗೀತಾಭಾಷ್ಯೇ (೬/೯)

'ಊಟಮಾಡುವವರ ಯೋಗ್ಯತೆಗೆ ಅನುಗುಣವಾಗಿ ಚಿಕ್ಕವರಿಗೆ ಸ್ವಲ್ಪ ಪದಾರ್ಥವನ್ನೂ ದೊಡ್ಡವರಿಗೆ ಹೆಚ್ಚು ಪದಾರ್ಥವನ್ನೂ ರೋಗಿಗಳು ಮೊದಲಾದವರಿಗೆ ಅವರವರಿಗೆ ಪಥ್ಯವೆನಿಸುವ ಪದಾರ್ಥವನ್ನು ಬಡಿಸುವುದು' ಎಂದರ್ಥ; ಅದರಂತೆಯೇ ಮನ್ನಣೆಯ ಕಾರ್ಯವೂ ಸಹ ಎಂದು ತಿಳಿಯಬೇಕು. ವೈದ್ಯ ರೋಗಿಗಳಿಗೆ ಔಷಧಿಯನ್ನು ಸಮವಾಗಿ ಕೊಡುವುದು ಎಂದರೆ ಅವರವರ ರೋಗಕ್ಕೆ ತಕ್ಕಂತೆ ಔಷಧಿ ಕೊಡುವುದು ಎಂದರ್ಥವೇ ಹೊರತು ಎಲ್ಲರಿಗೂ ಒಂದೇ ಔಷಧಿ ಕೊಡುವುದು ಎಂದೇನೂ ಅರ್ಥವಾಗದಷ್ಟೆ ! ನಿಷ್ಪಕ್ಷಪಾತವರ್ತನೆ ಎಂಬುದು ಸಮಬುದ್ಧಿ ಎಂಬುದರ ಅರ್ಥ.

೩. ಈ ಎರಡು ಶ್ಲೋಕಗಳೂ ಭಗವದ್ಗೀತೆಯಲ್ಲಿನ –

ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ – ಗೀತಾ (೬/೯)
ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥' – ಗೀತಾ (೫/೧೮)

– ಎಂಬ ಶ್ಲೋಕಗಳ ವ್ಯಾಖ್ಯಾನರೂಪವಾಗಿರುವುದು ಗಮನಾರ್ಹ.

★★

## ತಿರ್ಯಕ್ಪುಂಡ್ರಧಾರಣೆ ಸರ್ವಥಾ ನಿಷಿದ್ಧ

**ತಿರ್ಯಕ್ಪುಂಡ್ರಂ ನ ಕುರ್ವೀತ ಸಂಪ್ರಾಪ್ತೇ ಮರಣೇಽಪಿ ವಾ ।**
**ನ ಚಾನ್ಯನ್ನಾಮ ವಿಬ್ರೂಯಾತ್ [೧]ಪರಂ ನಾರಾಯಣಾದೃತೇ ॥ ೨೧೯ ॥**

ಅ: ಮರಣ ಒದಗಿದರೂ ಸರಿ ಅಡ್ಡನಾಮವನ್ನು ಧರಿಸಲೇಕೂಡದು. ಸರ್ವೋತ್ತಮನಾದ ನಾರಾಯಣನ ನಾಮವೊಂದರ ಹೊರತು ಮತ್ತೊಬ್ಬರ ನಾಮವನ್ನು ಉಚ್ಚರಿಸಕೂಡದು.

ವಿ: ೧. ಈ ಶ್ಲೋಕದಲ್ಲಿ ನಾಮಧಾರಣೆಯ ಬಗ್ಗೆ ವಿಶೇಷವಿವರವಿದೆ; ನಾಮಧಾರಣೆ ಕರ್ಮಾಂಗಗಳಲ್ಲಿ ಒಂದು; ಆದರೆ ಅಂತಹ ನಾಮ ಸರ್ವಥಾ ಅಡ್ಡನಾಮವಾಗಿರ-ಬಾರದು ಎಂಬ ಸಂದೇಶ ಇಲ್ಲಿದೆ:

ತಿರ್ಯಕ್ಪುಂಡ್ರಾದ್ಗತಿಸ್ತಿರ್ಯಗೂರ್ಧ್ವಪುಂಡ್ರಾದಥೋರ್ಧ್ವಗಾ ।
ಮುದ್ರಾ ಹಿ ಧ್ರಿಯತೇ ನಿತ್ಯಂ ಬ್ರಹ್ಮನಾಡ್ಯನುಸಾರಿಣೇ ॥
ಇತಿ ಶ್ಲೋಕಾಶ್ಚ ಬಹುಶೋ ಜ್ಞಾಯಂತೇ ವ್ಯಾಸನಿರ್ಮಿತಾಃ ॥
–ವಿಷ್ಣುತೀರ್ಥೀಯ (೩/೫೩)

---

೧. ಪರಾನ್ನಾರಾಯಣಾದೃತೇ ( ಪಾ.)

೨. ನಮ್ಮ ದೇಹದಲ್ಲಿನ ನಾಡಿಗಳ ಗತಿ ಊರ್ಧ್ವಮುಖವಾದ್ದರಿಂದ ಅದಕ್ಕನು-ಗುಣವಾಗಿ ನಾಮಗಳ ಧಾರಣೆಯೂ ಸಹ ಊರ್ಧ್ವಮುಖವಾಗಿರಬೇಕು. ಅಡ್ಡನಾಮ ಧರಿಸುವುದು ನಾಡಿಗಳ ಗತಿಗೆ ವಿರುದ್ಧವಾಗುವುದರಿಂದ ಆರೋಗ್ಯ ಮೊದಲಾದವುಗಳ ಮೇಲೆ ದುಷ್ಪರಿಣಾಮಕ್ಕೆ ಕಾರಣವಾಗುವುದು ಎಂದರ್ಥ.

೩. ನಾರಾಯಣನ ನಾಮೋಚ್ಚಾರಣೆಯನ್ನೇ ಅಂತ್ಯಕಾಲದಲ್ಲೂ ಸಹ ವಿಶೇಷವಾಗಿ ಮಾಡಬೇಕೇ ಹೊರತು ಇತರದೇವತೆಗಳ ನಾಮೋಚ್ಚಾರಣೆಯನ್ನಲ್ಲ ಎಂಬ ವಿಶೇಷಾಂಶ ಇಲ್ಲಿದೆ.

೪. ಇತರ ದೇವತೆಗಳ ನಾಮವನ್ನು ಉಚ್ಚರಿಸಕೂಡದು ಎಂದರೆ ಸರ್ವೋತ್ತಮರು ಎಂಬ ಚಿಂತನೆಯಿಂದ ಉಚ್ಚರಿಸಕೂಡದು ಎಂದರ್ಥ; ಸರ್ವನಾಮಗಳೂ ಸಹ ಶ್ರೀಹರಿಯ ನಾಮಗಳು ಎಂಬ ಅನುಸಂಧಾನದಿಂದ ಉಚ್ಚರಿಸುವುದಂತೂ ಮುಖ್ಯ-ಕರ್ತವ್ಯವೇ ಆಗಿದೆ:

೫. ತಾಪ, ಪುಂಡ್ರ, ನಾಮ, ಮಂತ್ರ ಹಾಗೂ ಯಾಗ ಎಂಬ ಐದು ಸಂಸ್ಕಾರಗಳು ವೈಷ್ಣವದೀಕ್ಷೆಗೆ ಪ್ರಧಾನಸಾಧನಗಳು:

**ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಸ್ತಥೈವ ಚ ।**
**ಅಮೀ ಹಿ ಪಂಚಸಂಸ್ಕಾರಾ ವೈಷ್ಣವತ್ವಸ್ಯ ಹೇತವಃ ॥ (ತಾ)**

★★

## ಶ್ರೀಹರಿನೈವೇದ್ಯದ ಮಹಿಮೆ

**ನೈವೇದ್ಯಶೇಷಂ ದೇವಸ್ಯ ಯೋ ಭುನಕ್ತಿ ದಿನೇ ದಿನೇ ।**
**ಸಿಕ್ಥೇ ಸಿಕ್ಥೇ ಭವೇತ್ ಪುಣ್ಯಂ ಚಾಂದ್ರಾಯಣಶತಾಧಿಕಮ್ ॥ ೨೨೦ ॥**

**ಅ**: ಯಾವನು ದಿನದಿನದಲ್ಲೂ ಶ್ರೀಹರಿಯ ನೈವೇದ್ಯಶೇಷವನ್ನು ಉಣ್ಣುವನೋ ಅವನಿಗೆ ತುತ್ತು ತುತ್ತಿನಲ್ಲೂ ನೂರಾರು ಚಾಂದ್ರಾಯಣಗಳಿಗಿಂತ ಮಿಗಿಲಾದ ಪುಣ್ಯ ಲಭಿಸುವುದು.

ವಿ: ೧. ಶ್ರೀಹರಿಯ ನೈವೇದ್ಯದ ಮಹಿಮೆ ಹಿಂದೆ ನಿರೂಪಿತವಾಗಿದೆ; ಇದರಲ್ಲಿ ಅದರ ಸಂಗ್ರಹನಿರೂಪಣೆ ಬಂದಿದೆ; ಪ್ರತಿನಿತ್ಯವೂ ತಪ್ಪದೇ ಶ್ರೀಹರಿಯ ನೈವೇದ್ಯವನ್ನು ಉಣ್ಣುವುದು ಚಾಂದ್ರಾಯಣಾದಿ ವ್ರತಗಳಿಗಿಂತಲೂ ಶ್ರೇಷ್ಠವಾದ ಸಾಧನ ಎಂದರ್ಥ.

೨. ಒಂದು ದಿನವೂ ಸಹ ಶ್ರೀಹರಿಗೆ ಅನರ್ಪಿತವಾದದ್ದನ್ನು ಸ್ವೀಕರಿಸಕೂಡದು ಎಂಬ ವಿಶೇಷಾಂಶ **ದಿನೇ ದಿನೇ** ಎಂಬ ಮಾತಿನಲ್ಲಿ ಬಂದಿದೆ.

## ಊರ್ಧ್ವಪುಂಡ್ರದ ಮಹಿಮೆ

**ಊರ್ಧ್ವಪುಂಡ್ರಮೃಜುಂ ಸೌಮ್ಯಂ ಲಲಾಟೇ [೧]ಯಸ್ಯ ದೃಶ್ಯತೇ ।**
**ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೨೨೧ ॥**

**ಅ:** ಯಾವನ ಹಣೆಯಲ್ಲಿ ನೇರವಾದ ಸೌಮ್ಯವಾದ ಊರ್ಧ್ವಪುಂಡ್ರವು ಕಾಣುವುದೋ ಅವನು ಚಂಡಾಲನಾಗಿದ್ದರೂ ಶುದ್ಧ ಸ್ವರೂಪನೇ ಆಗಿ ಪೂಜ್ಯನೇ ಎನ್ನಿಸುವನು; ಸಂಶಯವಿಲ್ಲ.

ವಿ: ೧. ಹಣೆಯಲ್ಲಿ ಊರ್ಧ್ವಪುಂಡ್ರಧಾರಣೆ ಪೂಜ್ಯತ್ವಕ್ಕೆ ಸಾಧನ ಎಂದರ್ಥ.

೨. ಊರ್ಧ್ವಪುಂಡ್ರಧರಿಸಿದವನು ಸ್ವರೂಪತಃ ಯೋಗ್ಯಚೇತನನೇ ಆಗಿರುವನು ಎಂಬುವುದು ಇಲ್ಲಿಯ ವಿಶೇಷಾಂಶ.

೩. ಚಂಡಾಲಾದಿಗಳೂ ಸಹ ಊರ್ಧ್ವಪುಂಡ್ರವನ್ನು ಧರಿಸಿ ವೈಷ್ಣವದೀಕ್ಷೆಯನ್ನು ಪಡೆದು ಉದ್ಧಾರ ಹೊಂದಬೇಕು ಎಂಬ ಅರ್ಥವೂ ಇಲ್ಲಿ ಸೂಚಿತ.

೪. ಊರ್ಧ್ವಪುಂಡ್ರವನ್ನು ನೇರವಾಗಿ ಮತ್ತು ಸೌಮ್ಯವಾಗಿ ಧರಿಸುವುದು ವಿಹಿತ ಎಂಬ ಅಂಶವು ಇಲ್ಲಿದೆ.

೫. ಬ್ರಾಹ್ಮಣರಲ್ಲದ ಹರಿಭಕ್ತರೂ ಸಹ ಗೌರವಕ್ಕೆ ಅರ್ಹರು ಎಂದು ಶಾಸ್ತ್ರವಚನ: **'ವಿನಾ ಪ್ರಣಾಮಂ ಪೂಜ್ಯಸ್ತು ವರ್ಣಹೀನೋ ಹರಿಪ್ರಿಯಃ'** (೨೯/೩೧). ಹರಿಭಕ್ತಿಯನ್ನು ಗುರುತಿಸಲು ಊರ್ಧ್ವಪುಂಡ್ರಧಾರಣೆ ಒಂದು ಸಾಧನವಾದ್ದರಿಂದ ಊರ್ಧ್ವಪುಂಡ್ರ ಧರಿಸಿದವನನ್ನು ಗೌರವಿಸಬೇಕು ಎಂದರ್ಥ.

೬. ಊರ್ಧ್ವಪುಂಡ್ರ ಧರಿಸಿದ ವೈಷ್ಣವನನ್ನು ಗೌರವಿಸಬೇಕು ಎಂಬ ಪದದಿಂದ ವೈಷ್ಣವರೆಲ್ಲ ಗೌರವಕ್ಕೆ ಪಾತ್ರರು ಎಂದರ್ಥವು ಸೂಚಿತ; ವೈಷ್ಣವರನ್ನು ಗೌರವಿಸದಿರುವುದು ನವವಿಧದ್ವೇಷಗಳಲ್ಲೊಂದು ಎಂಬ ಮಾತು ಮಹಾಭಾರತತಾತ್ಪರ್ಯನಿರ್ಣಯದಲ್ಲಿದೆ; **'ತದ್ಭಕ್ತದ್ವೇಷ ಏವ ಚ'**(೧/೧೧೧).

★★

## ಊರ್ಧ್ವಪುಂಡ್ರಧಾರಣೆಯ ಹಿರಿಮೆ

**ಅಶುಚಿರ್ವಾಽಪ್ಯನಾಚಾರೋ ಮನಸಾ ಪಾಪಮಾಚರನ್ ।**
**ಶುಚಿರೇವ ಭವೇನ್ನಿತ್ಯಮೂರ್ಧ್ವಪುಂಡ್ರಾಂಕಿತೋ ನರಃ ॥ ೨೨೨ ॥**

---

೧. ತಸ್ಯ ದೃಶ್ಯತೇ ( ಪಾ.) ॥ – ಸ್ಕಾಂದಪುರಾಣ ಮಾರ್ಗಶೀರ್ಷಮಾಹಾತ್ಮ್ಯೆ
(ಪದ್ಮಪುರಾಣ ಉತ್ತರಖಂಡ ೬/೮೪)

ಅ: ಅಶುಚಿಯಾಗಿರಲಿ, ದುರಾಚಾರಿಯಾಗಿರಲಿ, ಮನಸ್ಸಿನಿಂದ ಪಾಪ ಮಾಡಿದನಾ-ಗಿರಲಿ, ಪ್ರತಿನಿತ್ಯ ಊರ್ಧ್ವಪುಂಡ್ರವನ್ನು ಧರಿಸುವ ಮಾನವನು ಶುದ್ಧನೇ ಆಗುವನು.

ವಿ: ೧. ಊರ್ಧ್ವಪುಂಡ್ರ ಶುದ್ಧಿಹೇತುವಾದ್ದರಿಂದ ಅಶುದ್ಧಿ, ದುರಾಚಾರ ಹಾಗೂ ಮಾನಸಿಕಪಾಪಗಳನ್ನು ಪರಿಹರಿಸುವುದು ಎಂದರ್ಥ. ಊರ್ಧ್ವಪುಂಡ್ರಧಾರಣೆಯು ಸಕಲವರ್ಣಗಳ, ಸಕಲಆಶ್ರಮಗಳ ವೈಷ್ಣವರಿಗೂ ವಿಹಿತ; ಸ್ತ್ರೀಯರಿಗೂ ಊರ್ಧ್ವ-ಪುಂಡ್ರಧಾರಣೆ ವಿಹಿತವಾಗಿದೆ ಎಂಬ ವಿಶೇಷಾಂಶ ಪುರಾಣಗಳಲ್ಲಿದೆ.

''ತಸ್ಮಾತ್ ಸರ್ವೈಶ್ಚ ಕಾರ್ಯಾಣಿ ನರೈಸ್ತಾನಿ ಬುಭೂಷುಭಿಃ ।
ನ ವಿಶೇಷೋಽತ್ರ ವರ್ಣಾನಾಮಾಶ್ರಮಾಣಾಂ ತಥೈವ ಚ ।
ಅಯಂ ಭಾಗವತೋ ಧರ್ಮಃ ಸಂಕ್ಲೃಪ್ತೋ ಹರಿಣಾ ಸ್ವಯಮ್''
– ವಿಷ್ಣುತೀರ್ಥೀಯವಚನ (೩/೪೭)

೨. ಊರ್ಧ್ವಪುಂಡ್ರ ಧರಿಸಿ ಯಾವುದೇ ಪಾಪವನ್ನು ಮಾಡಬಹುದು ಎಂಬ ಅರ್ಥವನ್ನು ಇದಕ್ಕೆ ಸರ್ವಥಾ ಮಾಡಕೂಡದು; ಊರ್ಧ್ವಪುಂಡ್ರವು ಶುದ್ಧಿ ಹೇತುವಾದ್ದರಿಂದ ಅದರ ಧಾರಣೆ ಪಾಪಕಾರ್ಯವನ್ನು ಮಾಡದಿರಲು ಸಾಧನವಾಗುವುದು ಎಂದರ್ಥ.

★★

## ಊರ್ಧ್ವಪುಂಡ್ರ ಧರಿಸದವನ ಮುಖಾವಲೋಕನವೂ ನಿಷಿದ್ಧ

**ಊರ್ಧ್ವಪುಂಡ್ರವಿಹೀನಸ್ಯ ಶ್ಮಶಾನಸದೃಶಂ ಮುಖಮ್ ।**
**ಅವಲೋಕ್ಯ ಮುಖಂ ತೇಷಾಮಾದಿತ್ಯಮವಲೋಕಯೇತ್ ॥ ೨೨೩ ॥**

ಅ: ಊರ್ಧ್ವಪುಂಡ್ರ ಧರಿಸದವನ ಸುಡುಗಾಡಿನಂತಹ ಮುಖವನ್ನು ನೋಡಿದರೆ ಸೂರ್ಯದರ್ಶನ ಮಾಡಬೇಕು.

ವಿ: ೧. ಊರ್ಧ್ವಪುಂಡ್ರರಹಿತನ ಮುಖವನ್ನು ನೋಡುವುದು ಸಹ ಅಮಂಗಲ ಎಂಬುದು ಭಾವ; ಅಂತಹ ಅಮಂಗಲದರ್ಶನದ ಪ್ರಾಯಶ್ಚಿತ್ತವಾಗಿ ಸೂರ್ಯದರ್ಶನ ವಿಹಿತ ಎಂದರ್ಥ[೧].

೨. ರಾತ್ರಿಕಾಲದಲ್ಲಿ ಅಂತಹ ಪ್ರಸಂಗ ಬಂದರೆ ಸೂರ್ಯದರ್ಶನಕ್ಕೆ ಅವಕಾಶ ಇರಲಾರದು; ಅಂತಹ ಪ್ರಸಂಗಗಳಲ್ಲಿ ಮಾರನೆಯದಿನ ಸೂರ್ಯದರ್ಶನ ಆದ ನಂತರವೇ ಶುದ್ಧಿ ಎಂಬ ವಿಶೇಷಾಂಶ ಸ್ಮೃತಿಗಳಲ್ಲಿದೆ.

---

೧. ಅವೈಷ್ಣವೇಷು ಸರ್ವೇಷೂಕ್ತವಿಧೋರ್ಧ್ವಪುಂಡ್ರರಾಹಿತ್ಯಮನುಗತಮಿತಿ । ತೇ ಚಾನೇಕವಿಧಾಃ ತಿರ್ಯಕ್ಪುಂಡ್ರಿಣಃ, ಪಾದಾಕಾರಪುಂಡ್ರಿಣಃ, ಶೃಂಗಾಕಾರೋರ್ಧ್ವಪುಂಡ್ರಿಣಃ, ಅಪುಂಡ್ರಿಣಃ ಇತ್ಯಾದಯಃ । (ತಾ)

೩. ಶ್ರೀಹರಿಯ ಲಾಂಛನವನ್ನು ಧರಿಸದಿರುವುದು ಮಹಾಪಾಪ ಎಂಬುದು ಇಲ್ಲಿಯ ಮುಖ್ಯಭಾವ; ಪೋಲೀಸ್ ಮೊದಲಾದ ಹುದ್ದೆಗಳಲ್ಲಿರುವವರು ತಮ್ಮ ಅಧಿಕಾರಕ್ಕೆ ಅನುಗುಣವಾದ ವೇಷಭೂಷಣಗಳನ್ನೂ ಲಾಂಛನಗಳನ್ನೂ ಧರಿಸದಿದ್ದಲ್ಲಿ ಶಿಕ್ಷಾರ್ಹವಾದ ಅಪರಾಧ ಎಂಬುದು ಲೋಕಪ್ರಸಿದ್ಧ; ಅದರಂತೆ ಈ ಮಾತು ಎಂದು ತಿಳಿಯಬೇಕು.

೪. ಗೋಪಿಚಂದನವನ್ನು ಲೇಪಿಸಿಕೊಳ್ಳಬೇಕಾದ ಸ್ಥಾನಗಳ ವಿವರ ಹೀಗಿದೆ :

**ಮೃದಾ ಗೋಪಿಕಯಾ ಚೋರ್ಧ್ವಪುಂಡ್ರಂ ಕುರ್ಯಾತ್ ಸಮಾಹಿತಃ।**
**ಕೇ ಲಲಾಟೇ ಚ ನಾಭೌ ಚ ಹೃದಯೇ ಕಂಠ ಏವ ಚ।**
**ದಕ್ಷಪಾರ್ಶ್ವೇ ಭುಜೇ ಕಂಠೇ ಸವ್ಯಪಾರ್ಶ್ವೇ ಭುಜೇ ಗಲೇ।**
**ಪೃಷ್ಠಮೂಲೇ ಚ ಕಂಠೇ ಚ ಸ್ತನಪಾರ್ಶ್ವೇ ತಥೈವ ಚ॥**
**ಸ್ಥಾನಾನಿ ಚೈವಮುಕ್ತಾನಿ ವಚ್ಮಿ ಸಾಮಾನ್ಯತಃ ಕ್ರಮಾತ್॥**

**-ವಿಷ್ಣುತೀರ್ಥೀಯ (೩/೩೫)**

**ಆಚಮ್ಯ ಪುನರಾಚಮ್ಯ ಗೋಪ್ಯಾ ಪುಂಡ್ರಾಣಿ ಧಾರಯೇತ್।**
**ಸಲಿಲೈರ್ವಾಽಪ್ಯಸೌ ಕುರ್ಯಾತ್ ಲಲಾಟೋದರಹೃದ್ಗಲೇ॥**
**ದಕ್ಷಿಣೇ ಪಾರ್ಶ್ವದೋರ್ಮೂಲೇ ಕಂಠಪಾರ್ಶ್ವೇಷು ಸವ್ಯತಃ।**
**ಪೃಷ್ಠಮೂಲೇ ಚ ಕಕುದಿ ಮೂರ್ಧನ್ಯಾದ್ಯಂತಯೋರಪಿ॥**
**ತನ್ಮನುರ್ದ್ವಾದಶಾರ್ಣಃ ಸ್ಯಾದಪರೇ ಕೇಶವಾದಯಃ।**
**ಸುದರ್ಶನಂ ಚ ಶಂಖಂ ಚ ಮುದ್ರಯೇದ್ ಬಾಹುಮೂಲಯೋಃ॥**

**-ಯೋಗದೀಪಿಕಾ (೨/೪೨-೪೫)**

★★

## ಊರ್ಧ್ವಪುಂಡ್ರವಿಲ್ಲದವನ ಕರ್ಮವೇತಕೆ ?

**ಯಜ್ಞೋ ದಾನಂ ತಪಶ್ಚೈವ ಸ್ವಾಧ್ಯಾಯಃ ಪಿತೃತರ್ಪಣಮ್।**
**ವ್ಯರ್ಥಂ ಭವತಿ ತತ್ ಸರ್ವಮೂರ್ಧ್ವಪುಂಡ್ರಂ ವಿನಾ ಕೃತಮ್ ॥ ೨೨೪ ॥**

**ಅ:** ಊರ್ಧ್ವಪುಂಡ್ರವನ್ನು ಧರಿಸದೇ ಮಾಡಿದ ಯಜ್ಞ, ದಾನ, ತಪಸ್ಸು ಸ್ವಾಧ್ಯಾಯ, ಪಿತೃತರ್ಪಣ ಮೊದಲಾದ ಎಲ್ಲವೂ ವ್ಯರ್ಥವೆನಿಸುವುದು.

ವಿ: ೧. ಊರ್ಧ್ವಪುಂಡ್ರಧಾರಣೆ ಸ್ವತಃ ಪುಣ್ಯಕಾರ್ಯವಾಗಿರುವಂತೆ ಯಜ್ಞ-ದಾನಾದಿ ಇತರ ಸಕಲಸತ್ಕರ್ಮಗಳಿಗೂ ಶುದ್ಧಿಪ್ರದವಾದ ವಿಶೇಷಕರ್ಮಾಂಗ ಎಂಬುದು ಇಲ್ಲಿಯ ವಿಶೇಷಾಂಶ.

೨. ಊರ್ಧ್ವಪುಂಡ್ರವನ್ನು ಧರಿಸದೆ ಯಜ್ಞ ದಾನ ಮೊದಲಾದ ಯಾವುದೇ ದೇವ-ಕಾರ್ಯವನ್ನಾಗಲೀ, ಶ್ರಾದ್ಧ ತರ್ಪಣ ಮೊದಲಾದ ಪಿತೃಕಾರ್ಯಗಳನ್ನಾಗಲೀ

ಮಾಡುವಂತಿಲ್ಲ; ಹಾಗೆ ಮಾಡಿದಲ್ಲಿ ಅವೆಲ್ಲವೂ ನಿರರ್ಥಕವಾಗುವವು ಎಂಬ ವಿಶೇಷಾಂಶ ಇಲ್ಲಿ ನಿರೂಪಿತವಾಗಿದೆ.

೩. **'ಸ್ವಾಧ್ಯಾಯ'** ಎಂದರೆ ಬ್ರಹ್ಮಯಜ್ಞ ಎಂದರ್ಥ :

**ದರ್ಭೇಷು ದರ್ಭಪಾಣಿಃ ಸನ್ ಸ್ವಾಧ್ಯಾಯಂ ತು ಸಮಾರಭೇತ್ ।**
**ವೇದಮಾದೌ ಸಮಾರಭ್ಯ ತತೋಽಪರ್ಯುಪರಿಕ್ರಮಾತ್ ।**
**ಯದಧೀತೇಽನ್ವಹಂ ಶಕ್ತ್ಯಾ ತತ್ ಸ್ವಾಧ್ಯಾಯಂ ಪ್ರಚಕ್ಷತೇ ॥ ಇತಿ ।**

**- ಮಹಾಭಾರತ (ಆಶ್ವಮೇಧಿಕಪರ್ವ)**

★★

## ಗೋಪೀಚಂದನ ಧಾರಣೆಯ ಹಿರಿಮೆ

**ಗೋಪೀಚಂದನಲಿಪ್ತಾಂಗೋ ಯಂ ಯಂ ಪಶ್ಯತಿ ಚಕ್ಷುಷಾ ।**
**ತಂ ತಂ ಶುದ್ಧಂ ವಿಜಾನೀಯಾನ್ನಾತ್ರ ಕಾರ್ಯಾ ವಿಚಾರಣಾ ೨೨೫ ॥**

**ಅ:** ಗೋಪೀಚಂದನವನ್ನು ಮೈಗೆ ಲೇಪಿಸಿಕೊಂಡವನು ಕಣ್ಣಿಂದ ಯಾವು ಯಾವುದನ್ನು ನೋಡುವನೋ ಅದೆಲ್ಲವನ್ನೂ ಶುದ್ಧ ಎಂದೇ ತಿಳಿಯಬೇಕು; ಈ ಬಗ್ಗೆ ವಿಚಾರ ಬೇಕಿಲ್ಲ.

ವಿ: ೧. ಗೋಪೀಚಂದನದ ಧಾರಣೆಯ ಮಹಿಮೆಯನ್ನು ಅಪೂರ್ವರೀತಿಯಲ್ಲಿ ಇಲ್ಲಿ ನಿರೂಪಿಸಲಾಗಿದೆ.

೨. ಗೋಪೀಚಂದನ ಲೇಪಿಸಿಕೊಂಡವನ ಕಣ್ಣಿಗೆ ಬೀಳುವ ಪದಾರ್ಥಗಳೂ ಸಹ ಪವಿತ್ರವೆನ್ನಿಸುವವು ಎಂಬ ಇಲ್ಲಿಯ ನಿರೂಪಣೆ ಗೋಪೀಚಂದನಧಾರಣೆಯ ಮಹತ್ತ್ವ-ವನ್ನು ಅತ್ಯಂತ ಪರಿಣಾಮಕಾರಿಯಾಗಿ ತಿಳಿಸುವುದು.

೩. ಇದರಿಂದ ಗೋಪೀಚಂದನಧಾರಣೆಯಂತೆ ಗೋಪೀಚಂದನ ಧರಿಸಿದ ವೈಷ್ಣವರ ಕಣ್ಣಿಗೆ ಬೀಳುವುದೂ ಸಹ ತುಂಬ ಪುಣ್ಯಪ್ರದ ಎಂಬ ವಿಶೇಷಾಂಶ ಸೂಚಿತ.

★★

## ವೈಷ್ಣವಜನ್ಮದ ಮಹತ್ತ್ವ

**ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ ।**
**ವೈಷ್ಣವೋಽಸ್ಮತ್ಕುಲೇ ಜಾತಃ ಸ ನಃ ಸಂತಾರಯಿಷ್ಯತಿ ॥ ೨೨೬ ॥**

**ಅ:** ಪಿತೃಗಳು ತೋಳು ಚಪ್ಪರಿಸಿಕೊಳ್ಳುವರು ; ಪಿತಾಮಹಂದಿರು ಜೋರಾಗಿ ಕುಣಿಯತೊಡಗುವರು. 'ವೈಷ್ಣವನು ನಮ್ಮ ಕುಲದಲ್ಲಿ ಜನಿಸಿರುವನು ; ಅವನು ನಮ್ಮನ್ನು ಉದ್ಧರಿಸುವನು'.

ವಿ: ೧. ವೈಷ್ಣವಶಿಶು ಜನಿಸಿದಾಗ ಪಿತೃಪಿತಾಮಹರು ನಲಿದಾಡುವ ಬಗೆಯನ್ನು ಇಲ್ಲಿ ವಿವರಿಸಿರುವರು.

೨. ವೈಷ್ಣವನಾಗಿ ಜನಿಸಿದವನು ತಾನು ಮಾತ್ರವಲ್ಲದೇ ತನ್ನ ಪಿತೃಗಳನ್ನೂ ಸಹ ಉದ್ಧರಿಸಿ ವಂಶೋದ್ಧಾರಕನಾಗುವನು ಎಂಬುದು ಇಲ್ಲಿಯ ಆಶಯ.

೩. ವೈಷ್ಣವನಾಗಿ ಬದುಕದೇ ಜೀವನ ನಿರರ್ಥಕ ಮಾಡಿಕೊಂಡಲ್ಲಿ ಅವನಿಗೆ ಮಾತ್ರವಲ್ಲದೇ ಅವನ ಪಿತೃಗಳಿಗೂ ಸಹ ಅನರ್ಥ ತಪ್ಪಿದ್ದಲ್ಲ ಎಂಬ ಎಚ್ಚರಿಕೆಯು ಸಹ ಇದರಿಂದ ಸೂಚಿತ.

★★

## ವೈಷ್ಣವನ ಜೀವನದ ವೈಭವ

**ಜೀವಿತಂ ವಿಷ್ಣುಭಕ್ತಸ್ಯ ವರಂ ಪಂಚದಿನಾನ್ಯಪಿ ।**
**ನ ತು ಕಲ್ಪಸಹಸ್ರೈಸ್ತು ಭಕ್ತಿಹೀನಸ್ಯ ಕೇಶವೇ ॥ ೨೨೭ ॥**

**ಅ:** ವಿಷ್ಣುಭಕ್ತನ ಬದುಕು ಕೇವಲ ಐದು ದಿನಗಳದಾದರೂ ತುಂಬಾ ಶ್ರೇಷ್ಠವೇ; ಕೇಶವನಾದ ಶ್ರೀಹರಿಯಲ್ಲಿ ಭಕ್ತಿಯಿಲ್ಲದವನು ಸಾವಿರ ಕಲ್ಪಗಳು ಬದುಕಿದರೂ ವ್ಯರ್ಥವೇ.

ವಿ: ೧. ವೈಷ್ಣವನ ಜೀವನದ ಹಿರಿಮೆಯನ್ನು ಇಲ್ಲಿ ಮತ್ತೊಂದು ರೀತಿಯಲ್ಲಿ ವರ್ಣಿಸಲಾಗಿದೆ.

೨. ವೈಷ್ಣವನಾಗಿ ಅತ್ಯಲ್ಪಕಾಲ ಜೀವಿಸುವುದರಲ್ಲೂ ಸಾರ್ಥಕ್ಯವಿದೆ; ಅವೈಷ್ಣವನಾಗಿ ಚಿರಂಜೀವಿಯಾಗುವುದಕ್ಕಿಂತ ವೈಷ್ಣವನಾಗಿ ಅಲ್ಪಾಯುವಾಗುವುದೇ ಮೇಲು ಎಂದರ್ಥ.

೩. ಸರ್ಕಾರಿ ಹುದ್ದೆಗಳಲ್ಲಿನ ಸೇವೆ ಅದಕ್ಕನುಗುಣವಾಗಿ ನಿವೃತ್ತಿವೇತನ ಮೊದಲಾದ ಸೌಲಭ್ಯಕ್ಕೆ ಕಾರಣವಾಗುವಂತೆ ವೈಷ್ಣವನ ಬದುಕು ಅವನ ಮುಂದಿನ ಜೀವನಕ್ಕೂ, ಮುಂದಿನವರ ಜೀವನಕ್ಕೂ ಕಲ್ಯಾಣಕಾರಕ ಎಂಬುದು ಇಲ್ಲಿಯ ವಿಶೇಷಪ್ರಮೇಯ.

೪. ಶ್ರೀಮದ್ಭಾಗವತದಲ್ಲಿನ ಈ ಕೆಳಗಿನ ಶ್ಲೋಕ ಇದರ ವಿವರಣೆಯಂತಿರುವುದು ಗಮನಾರ್ಹ :

**ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್**
**ಕ್ಷಣಾಯುಷಾಂ ಭಾರತಭೂಜಯೋ ವರಃ । - ಭಾಗವತ (೫/೧೯/೨೩)**

**ಜನ್ಮಾಂತರಸಹಸ್ರೇಷು ಮಾನುಷತ್ವಂ ಹಿ ಲಭ್ಯತೇ ।**
**ತಲ್ಲಬ್ಧ್ವಾಽಪೀಹ ಯೋ ಧರ್ಮಂ ನ ಕರೋತಿ ಸ ವಂಚಿತಃ ॥**

**ಜನ್ಮಾಂತರಸಹಸ್ರೇಷು ತಪೋಜ್ಞಾನಸಮಾಧಿಭಿಃ।**
**ಯತ್ರ ಕುತ್ರಾಪಿ ಭದ್ರೇಷು ಬ್ರಾಹ್ಮಣೇಷೂಪಜಾಯತೇ ॥**

**- ವಿಷ್ಣುತೀರ್ಥೀಯ (೧/೩೨, ೩೩)**

★★

## ವಿಷ್ಣುಭಕ್ತನಲ್ಲದವನ ಜನ್ಮ ವ್ಯರ್ಥ

**ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನಶತ್ರುಣಾ।**
**ಯೋ ಜಾತೋ ನಾರ್ಚಯೇದ್ವಿಷ್ಣುಂ ನ ಸ್ಮರೇನ್ನಾಪಿ ಕೀರ್ತಯೇತ್ ॥೨೨೮॥**

**ಅ:** ಯಾವನು ವಿಷ್ಣುವನ್ನು ಪೂಜಿಸನೋ, ಸ್ಮರಿಸನೋ, ಕೀರ್ತಿಸನೋ, ಅಂತಹ ಭೂಮಿಗೆ ಭಾರವಾದವನು ಅನ್ನಕ್ಕೆ ಶತ್ರುವಾದವನು ಜನಿಸಿ ಏನು ತಾನೆ ಪ್ರಯೋಜನ?

**ವಿ:** ೧. ವಿಷ್ಣುವಿನ ಪೂಜೆ ಸ್ಮರಣೆ ಕೀರ್ತನೆಗಳನ್ನು ಮಾಡದವನು ಭೂಮಿಗೆ ಭಾರ; ಅವನದು ಕೇವಲ ಹೊಟ್ಟೆಪಾಡಿನ ಬದುಕು ಎಂದರ್ಥ.

೨. ವಿಷ್ಣುಪೂಜೆ ಮೊದಲಾದವುಗಳು ಬಾಳಿಗೆ ಸಾರ್ಥಕ್ಯ ನೀಡುವಂತೆ ಇತರ ಯಾವ ಐಶ್ವರ್ಯಭೋಗಾದಿಗಳು ಸಾರ್ಥಕ್ಯ ನೀಡಲಾರವು ಎಂಬುದು ಇಲ್ಲಿಯ ಸಂದೇಶ.

೩. ಶ್ರೀಜಗನ್ನಾಥದಾಸರ '**ಫಲವಿದು ಬಾಳ್ದುದಕೆ - ಸಿರಿನಿಲಯನ ಗುಣಗಳ ಅರಿತು ಭಜಿಸುವುದೇ ಫಲವಿದು ಬಾಳ್ದುದಕೆ**' ಎಂಬ ಪದ ಇದಕ್ಕೆ ವಿವರಣರೂಪವಾಗಿದೆ.

★★

## ಗೋಪೀಚಂದನದಾನವೂ ವಿಹಿತ

**ಯೋ ದದಾತಿ ದ್ವಿಜಾತಿಭ್ಯಶ್ಚಂದನಂ[೧]ಗೋಪಿಮರ್ದಿತಮ್।**
**ಅಪಿ ಸರ್ಷಪಮಾತ್ರೇಣ ಪುನಾತ್ಯಾಸಪ್ತಮಂ ಕುಲಮ್ ॥ ೨೨೯ ॥**

**ಅ:** ಗೋಪಿಯರು ಲೇಪಿಸಿದ ಚಂದನವನ್ನು ಸಾಸಿವೆ ಕಾಳಿನಷ್ಟಾದರೂ ಪ್ರಮಾಣದಲ್ಲಿ ದ್ವಿಜಾತಿಯವರಿಗೆ ಯಾವನು ದಾನವಾಗಿ ನೀಡುವನೋ ಅವನು ತನ್ನ ಏಳು ಕುಲಗಳನ್ನು ಉದ್ಧರಿಸುವನು.

---

೧. ಗೋಪಿಮರ್ದಿತಂ ದ್ವಾರಕಾಯಾಂ ಕದಾಚಿತ್ ಕೃಷ್ಣಸಂದರ್ಶನಾರ್ಥಂ ಆಗತಾಭಿರ್ಗೋಪೀಭಿಃ ಕೃಷ್ಣಸ್ಯಾಂಗೇ ಮರ್ದಿತಮ್। ಗೋಪೀಕುಚಾದಿಷು ವಾ ಕೃಷ್ಣೇನ ಮರ್ದಿತಂ ರುಷಿತಂ ಚಂದನಂ ತಚ್ಛೇಷಭೂತಮಿತಿ ಯಾವತ್ । (ತಾ); ಗೋಪಿಮರ್ದಿತಂ ಗೋಪಿಕಾಸ್ತ್ರೀಪ್ರಯುಕ್ತಮ್ । ವೈಕುಂಠಸ್ಥಾನಾದಾಹೃತ್ಯ ಮಯಾ ಪ್ರತಿಷ್ಠಾಪಿತಮ್। ಗೋಪೀಭಿಃ ಕ್ಷಾಲನಾತ್ ಈದೃಗ್‌ರೂಪೇಣ ಸ್ಥಿತಂ ವಾ ಚಂದನಮ್। (ಉ).

ವಿ: ೧. ಗೋಪೀಚಂದನಧಾರಣೆಯಂತೆ ಗೋಪೀಚಂದನದ ದಾನವೂ ವಿಹಿತ ಎಂದರ್ಥ. ಗೋಪೀಚಂದನ ದಾನವು ವೈಷ್ಣವದೀಕ್ಷೆಗೆ ಸತ್ಕರ್ಮಗಳಿಗೆ ಅಂಗವಾದ್ದರಿಂದ ದಾನ ಮಾಡಿದವನಿಗೆ ಅದರಲ್ಲಿ ನೆರವಾದ ಪುಣ್ಯ ಒದಗಿ ಅದರಿಂದ ಅವನ ಕುಲವೇ ಪಾವನವಾಗುವುದು ಎಂದರ್ಥ.

೨. ಗೋಪೀಚಂದನ ಶಬ್ದದ ಅರ್ಥವು ಇದರಲ್ಲಿ ನಿರೂಪಿತವಾಗಿರುವುದು ವಿಶೇಷ. ಗೋಪೀಚಂದನವೆಂದರೆ ಗೋಪಿಕಾಸ್ತ್ರೀಯರು ಶ್ರೀಕೃಷ್ಣನಿಗೆ ಲೇಪಿಸಿದ ಗಂಧ ಎಂದು ಇದರ ಅರ್ಥ; ಆ ಗೋಪಿಕಾಸ್ತ್ರೀಯರು ಪರಮಭಕ್ತಿಯಿಂದ ಶ್ರೀಕೃಷ್ಣನಿಗೆ ಲೇಪಿಸಿದ ಶ್ರೀಗಂಧವೇ ಗೋಪೀಚಂದನವಾಗಿ ಲಭಿಸಿದೆ ಎಂದರೆ ಅದು ನಿರ್ಮಾಲ್ಯಗಂಧ. ಆದ್ದರಿಂದ ಅದನ್ನು ನೇರವಾಗಿ ಲೇಪಿಸಿಕೊಂಡೇ ಸಕಲ ಕರ್ಮಗಳನ್ನೂ ಮಾಡುವುದು ವಿಹಿತ ಎಂದರ್ಥ. ಶ್ರೀಹರಿಗೆ ಗಂಧ ಲೇಪನದಂತೆ ಗೋಪೀಚಂದನದ ಲೇಪನ ವಿಹಿತವಾಗದೇ ಇರಲು ಅದು ನಿರ್ಮಾಲ್ಯ ಎಂಬುದೇ ಮುಖ್ಯಕಾರಣ ಎಂದಾಗುವುದು.

೩. ಗೋಪೀಚಂದನವನ್ನು ಸಾಸಿವೆಕಾಳಿನಷ್ಟು ನೀಡಿದರೂ ಸಾರ್ಥಕ ; ಆದ್ದರಿಂದ ಅದನ್ನು ಹೆಚ್ಚು ಹೆಚ್ಚಾಗಿ ನೀಡುವುದು ಇನ್ನೂ ಪುಣ್ಯಕರ ಎಂದು ಭಾವ; ಸಾಸಿವೆಕಾಳಿನಷ್ಟೇ ನೀಡಬೇಕೆಂದೇನೂ ಅಲ್ಲ.

೪. ಕಾರಣಾಂತರದಿಂದ ಹೆಚ್ಚು ಗೋಪೀಚಂದನ ನೀಡಲು ಅಸಾಧ್ಯವಾದಾಗ ಸ್ವಲ್ಪ ಪ್ರಮಾಣದಲ್ಲಾದರೂ ನೀಡಬೇಕು ಎಂದರ್ಥ.

೫. ಸಾಮಾನ್ಯವಾಗಿ ದೇವಕಾರ್ಯ, ಪಿತೃಕಾರ್ಯಗಳಲ್ಲಿ ಗೋಪೀಚಂದನದ ದಾನ ತಪ್ಪದೇ ವಿಹಿತವಾಗಿರುವುದು ಅದರ ವಿಶೇಷಮಹತ್ತ್ವಕ್ಕೆ ಸೂಚಕ.

★★

## ಜ್ಞಾನಿಗೂ ಸ್ವಕರ್ಮಾಚರಣೆಯು ವಿಹಿತ

**ಜ್ಞಾನೀ ಚ ಕರ್ಮಾಣಿ ಸದೋದಿತಾನಿ**
**ಕುರ್ಯಾದಕಾಮಃ ಸತತಂ ಭವೇತ ॥ ೨೩೦ ॥**

ಅ: ಜ್ಞಾನಿಯಾದವನೂ ಸಹ ಶಾಸ್ತ್ರೋಕ್ತವಾದ ಕರ್ಮಗಳನ್ನು ಸದಾ ಆಚರಿಸಲೇಬೇಕು. ಅದರಂತೆ ಸದಾ ಫಲಾಶೆಯನ್ನು ಬಿಟ್ಟವನೂ ಆಗಿರಬೇಕು.

ವಿ: ೧. ಅಜ್ಞಾನಿಯಂತೆ ಜ್ಞಾನಿಗೂ ಸಹ ಕರ್ತವ್ಯಕರ್ಮಗಳ ಆಚರಣೆ ಕಡ್ಡಾಯವಾದುದು ಎಂದರ್ಥ:

'ಜಾನತಾಮಪಿ ಕರ್ತವ್ಯಂ ಕರ್ಮಾತ್ಮಸದೃಶಂ ಸದಾ।
ತತ್ರಾತ್ಮಸದೃಶಾಜ್ಞಾನಾದ್ರಾಗಾದ್ಯೈರ್ವಾ ವಿಮೋಹಿತಾಃ।

ಜಾನಂತೋಽಪಿ ಹ್ಯಸದೃಶಂ ಕರ್ಮ ಕುರ್ಯುರ್ಯುತೇ ವಿಭುಮ್ ।
ಚತುರಾಸ್ಯಂ ಸ ನಾಯೋಗ್ಯಂ ಕರ್ಮ ಕುರ್ಯಾತ್ ಕಥಂಚನ ॥'

– ಇತಿ ನಾರದೀಯೇ ॥ - ಭಾ. ತಾ. (೭/೩/೧೧)

ಜ್ಞಾನಾತ್ ಪೂರ್ವಾಣಿ ಕರ್ಮಾಣಿ ಶುಭಾನಿ ಜ್ಞಾನಸಿದ್ಧಯೇ ।
ಅಕಾಮ್ಯಾನಿ ನಿಷಿದ್ಧಾನಿ ಜ್ಞಾನರೋಧಾಯ ಭುಕ್ತಯೇ ॥

- ಅನುವ್ಯಾಖ್ಯಾನ (೩/೪/೨೧೪)

'ಯಥಾವತ್ಕರ್ಮ ಕರ್ತುಸ್ತು ಜ್ಞಾನಸಾಹಾಯ್ಯಕಾರಕಮ್ ।
ಅನ್ಯಥಾಕುರ್ವತಃ ಕರ್ಮ ನಿರಯಾಯ ಭವಿಷ್ಯತಿ ।
ತಥಾಽಪಿ ಕರ್ಮ ನಿಂದಂತಿ ನ ಯತಃ ಕರ್ತುಮಂಜಸಾ ।
ಶಕ್ಯಂ ಜ್ಞಾನಫಲಸ್ಯಾಪಿ ಬಹುತ್ವಾನ್ಮೋಹನಾಯ ಚ ॥' ಇತಿ ಬ್ರಹ್ಮಾಂಡೇ॥

- ಭಾ. ತಾ. (೪/೨೫/೮)

ಕರ್ತೃತ್ವಮಾತ್ಮನೋ ಯಸ್ಮಾದ್ ಜ್ಞಾನನಿಷ್ಠೋ ನ ಮನ್ಯತೇ ।
ಅತಃ ಕುರ್ವನ್ನಪಿ ಸದಾ ದೋಷಬುದ್ಧ್ಯಾ ನ ನಿಂದಿತಮ್ ।
ಗುಣಬುದ್ಧ್ಯಾ ನ ವಿಹಿತಂ ಕಿಂತ್ವೀಶಪ್ರೇರಿತೋಽಸ್ಮ್ಯಹಮ್ ।
ಸ ಏವ ಚ ಮಯಿ ಸ್ಥಿತ್ವಾ ನಿಂದ್ಯಾನಿಂದ್ಯೇ ಕರೋತ್ಯಜಃ ।
ನ ಮೇ ದೋಷೋ ನ ಚ ಗುಣಃ ಕರ್ತೃತ್ವಾಭಾವತಃ ಸ್ಫುಟಮ್ ।
ಸ್ವತಂತ್ರತ್ವಾನ್ನ ಚೇಶಸ್ಯ ಯೇಽಜ್ಞಾಸ್ತೇಷು ಭವೇದಪಿ ।
ಇತಿ ಮತ್ವಾ ನಿವರ್ತೇತ ನಿಂದ್ಯಾತ್ ಕುರ್ಯಾದ್ಗುಣಾನಪಿ' ಬೋದ್ಧವ್ಯಾ ॥
' ಅನಿತ್ಯಾ ಮೇ ಗುಣಾ ನ ಸ್ಯುರ್ದೋಷಾ ನೈವ ಕಥಂಚನ ।
ಇತಿ ಮತ್ವಾ ಶುಭಂ ಕುರ್ಯಾನ್ನಿವರ್ತೇದಶುಭಾದಪಿ ।
ಜ್ಞಾನೀ ತ್ವಕರ್ತೃತಾಮಾನಾದೀಶಕರ್ತೃತ್ವನಿಶ್ಚಯಾತ್ ।
ಕಿಂತು ಪೂರ್ಣಗುಣಾಯ್ಯೈವ ನ ತು ದೋಷಾಪನುತ್ತಯೇ ।
ನ ಚಾಲ್ಪಗುಣಸಿದ್ಧ್ಯರ್ಥಂ ಬಾಲವತ್ ಕೃತನಿಶ್ಚಯಃ ।' ವೈಶಾರದ್ಯಾ ॥

- ಭಾ. ತಾ. (೧೧/೭/೧೧-೧೨)

ನಿಷಿದ್ಧಕಾಮಯುಕ್ತಾನಾಮಸತಾಂ ತು ವಿಶೇಷತಃ ।
ದುರ್ಜ್ಞೇಯೋ ಭಗವಾನ್ ವಿಷ್ಣುರ್ಹೃದಿಸ್ಥೋಽಸ್ಮೃತಹಾರವತ್ ।
ಅಕಾಮತ್ವೇನ ಭಜತಾಂ ದದಾತ್ಯಭಯಮಂತಕಾತ್ ।
ಪೂರ್ಣಾನಂದಾದಿ ತೇಽಶ್ನಂತಿ ಪೂರ್ಣಾನಂದಾದಿಕಾಃ ಸ್ವತಃ ॥

- ಭಾಗವತತಾತ್ಪರ್ಯೋದ್ಧೃತಬ್ರಹ್ಮತರ್ಕವಚನ (೧೦/೯೪/೪೯)

೨. ಅಜ್ಞಾನಿಯು ಕರ್ಮಾಚರಣೆಯನ್ನು ಫಲಾಶೆಯಿಂದ ಮಾಡಿದರೆ ಜ್ಞಾನಿಯಾದವನು ಫಲಾಶೆಯನ್ನು ತೊರೆದು ಮಾಡುವನು ಎಂಬುದು ವಿಶೇಷ[೧] ; ಇದರಿಂದ

---

೧. ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।

ಜ್ಞಾನಿಯ ಹಿರಿಮೆ ಕರ್ಮಫಲದ ಆಶೆಯನ್ನು ತೊರೆಯುವುದರಲ್ಲಿದೆಯೇ ಹೊರತು ಕರ್ಮಾಚರಣೆಯನ್ನೇ ತೊರೆಯುವುದರಲ್ಲಲ್ಲ ಎಂಬುದು ಸ್ಫುಟ ಪಡುವುದು.

೩. ಇಲ್ಲಿ ಜ್ಞಾನಿಯೆಂದರೆ ಮುಖ್ಯವಾಗಿ ಅಪರೋಕ್ಷಜ್ಞಾನಿ ಎಂದೇ ಅರ್ಥ.

★★

## ಬ್ರಹ್ಮಜ್ಞಾನಿಗೂ ಕರ್ಮತ್ಯಾಗ ವಿಹಿತವಲ್ಲ

**ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।**
**ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ ೨೩೧ ॥**

**ಅ:** ಹಿಂದಿನ ಹಾಗೂ ಮುಂದಿನ ಸಮಸ್ತವನ್ನೂ ಬಲ್ಲವನು, ಮೂರುಲೋಕಗಳನ್ನು ಉದ್ಧರಿಸಲು ಸಮರ್ಥನಾದವನು ಸಹ, ಶ್ರುತ್ಯುಕ್ತವಾದ ಹಾಗೂ ಸ್ಮೃತ್ಯುಕ್ತವಾದ ಆಚಾರವನ್ನು ಸರ್ವಥಾ ತೊರೆಯಕೂಡದು.

ವಿ: ೧. ಇದರಲ್ಲೂ ಸಹ ಹಿಂದಿನ ಶ್ಲೋಕದ ಅರ್ಥದ ವಿವರಣೆ ಬಂದಿದೆ; ಸಾಮಾನ್ಯ ಅಪರೋಕ್ಷಜ್ಞಾನಿಗೆ ಮಾತ್ರವಲ್ಲದೇ ಭೂತಭವಿಷ್ಯದ್ವರ್ತಮಾನಗಳನ್ನು ತಿಳಿದವನೂ ಮೂರು ಲೋಕಗಳನ್ನೂ ಸಹ ಉದ್ಧರಿಸಬಲ್ಲವನೂ ಆದ ಶ್ರೇಷ್ಠಜ್ಞಾನಿಗೂ ಸಹ ವಿಹಿತಕರ್ಮಾಚರಣೆ ಕಡ್ಡಾಯ ಎಂದರ್ಥ.

೨. ಹಿಂದಿನ ಶ್ಲೋಕದಲ್ಲಿ ಬಂದಿರುವ ಸದೋದಿತಾನಿ ಎಂಬ ಪದಕ್ಕೆ ಇಲ್ಲಿಯ ಶ್ರೌತಂ ಮತ್ತು ಸ್ಮಾರ್ತಂ ಎಂಬ ಪದಗಳಲ್ಲಿ ವಿವರಣೆ ಇದೆ; ಎಂದರೆ ಶಾಸ್ತ್ರೋಕ್ತವಾದ ಕರ್ಮ ಶ್ರುತಿ ಅಥವಾ ಸ್ಮೃತಿಗಳಲ್ಲಿ ಉಕ್ತವಾದುದೇ ಹೊರತು ಬೇರೆಯದಲ್ಲ ಎಂದರ್ಥ.

★★

## ಕರ್ಮಸಿದ್ಧಿಯ ಉಪಾಯಗಳು

**ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ**
**ತದೇವ ವೀರ್ಯವತ್ತರಂ ಭವತಿ ॥ ೨೩೨ ॥**

**ಅ:** ಯಾವ ಕರ್ಮವನ್ನು ವಿದ್ಯೆಯಿಂದ, ಶ್ರದ್ಧೆಯಿಂದ, ಉಪನಿಷತ್ತಿನಿಂದ ಆಚರಿಸುವನೋ ಅದೇ ಅತ್ಯಂತ ವೀರ್ಯವತ್ತಾದುದು ಎನ್ನಿಸುವುದು.

ವಿ: ೧. ಯಾವುದೇ ಕರ್ಮಾಚರಣೆಗೆ ವಿದ್ಯೆ, ಶ್ರದ್ಧೆ ಹಾಗೂ ಉಪನಿಷತ್ತುಗಳು ಹಿನ್ನೆಲೆಯಾಗಿರಬೇಕು ಎಂದರ್ಥ.

---

ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥ – ಗೀತಾ( ೩/೨೫)

೨. ಇಲ್ಲಿ ವಿದ್ಯೆಯೆಂದರೆ ಜ್ಞಾನ, ಶ್ರದ್ಧೆ ಎಂದರೆ ಆಸ್ತಿಕ್ಯ ಬುದ್ಧಿ (ಭಕ್ತಿ), ಉಪನಿಷತ್ತೆಂದರೆ ಶಾಸ್ತ್ರ ಎಂದು ಭಾವ; ಶಾಸ್ತ್ರೋಕ್ತವಾದ ಕರ್ಮಗಳನ್ನು ಚೆನ್ನಾಗಿ ಅರಿತು ಶ್ರದ್ಧೆಯಿಂದ ಆಚರಿಸಿದಾಗ ಪೂರ್ಣಫಲ ಲಭಿಸುವುದು ಎಂದರ್ಥ; ಇದು ಛಾಂದೋಗ್ಯೋಪನಿಷತ್ತಿನ ವಚನ.

೩. ಅಪರೋಕ್ಷಜ್ಞಾನಿಗೆ ಮೋಕ್ಷವು ನಿಶ್ಚಿತವಾದರೂ ವಿಹಿತಕರ್ಮಗಳಿಂದ ಆನಂದವೃದ್ಧಿ, ನಿಷಿದ್ಧಕರ್ಮಗಳಿಂದ ಆನಂದಹ್ರಾಸ ಎಂದರ್ಥ:

**'ಜ್ಞಾನಿನೋ ಮೋಕ್ಷನಿಯಮಸ್ತಥಾಽಪಿ ಶುಭಕರ್ಮಣಾ।**
**ಆನಂದವೃದ್ಧಿರನ್ಯೇನ ಹ್ರಾಸೋ ಜ್ಞಾನಂ ತು ಕರ್ಮಣಾ'**

**– ಪರಮಶ್ರುತಿ (ಗೀತಾತಾತ್ಪರ್ಯ - ೩/೩)**

೪. ಸ್ವೋತ್ತಮದ್ರೋಹವು ಅಪರೋಕ್ಷಜ್ಞಾನಿಗಳಿಗೂ ಬಾಧಕವೆನ್ನಿಸಿದ ಮಹಾಪಾತಕ: **ಶ್ರೇಷ್ಠಾಪರಾಧಾನ್ನಾನ್ಯದೋಷಸ್ಯ ಲೇಪಸ್ತೇಜೀಯಸಾಂ ನಿರ್ಣಯೋಽಯಂ ಹಿ ಶಾಸ್ತ್ರೇ । - ಮ. ಭಾ. ತಾ. ನಿ. (೨೦/೧೫೯)**

★★

## ಬಾಳಿನುದ್ದಕ್ಕೂ ಸ್ವಕರ್ಮಾಚರಣೆಯು ವಿಹಿತ

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨೩೩ ॥**

**ಅ:** ಈ ಲೋಕದಲ್ಲಿ ಕರ್ಮಗಳನ್ನು ಆಚರಿಸುತ್ತಲೇ ನೂರುವರ್ಷಗಳ ಕಾಲ ಜೀವಿಸಬಯಸಬೇಕು; ಇದಲ್ಲದೆ ಬೇರೊಂದು ದಾರಿಯಿಲ್ಲ; ಇದರಿಂದ ನರನಿಗೆ ಕರ್ಮದ ಲೇಪವಾಗದು.

ವಿ: ೧. ಇದು ಈಶಾವಾಸ್ಯೋಪನಿಷತ್ತಿನ ದ್ವಿತೀಯಮಂತ್ರ.

೨. ಪೂರ್ಣಾಯುಷ್ಯವನ್ನು ಕರ್ತವ್ಯಕರ್ಮಾಚರಣೆ ಮಾಡುತ್ತಲೇ ಕಳೆಯಬಯಸಬೇಕು ಎಂದರೆ ವಿಹಿತಕರ್ಮದಿಂದ ವಿನಾಯಿತಿ ಆಯುಷ್ಯದ ಯಾವ ಹಂತದಲ್ಲೂ ಸರ್ವಥಾ ಇರದು ಎಂದರ್ಥ.

೩. ಬದುಕಿನ ಸಾರ್ಥಕ್ಯವಿರುವುದೇ ವಿಹಿತಕರ್ಮಾಚರಣೆಯಲ್ಲಿ ಎಂಬುದು ಇಲ್ಲಿಯ ಆಶಯ.

೪. ಕರ್ಮಲೇಪಕ್ಕೆ ಪರಿಹಾರ ಕರ್ಮತ್ಯಾಗವಲ್ಲ, ಕರ್ಮಫಲತ್ಯಾಗ ಎಂಬ ಕರ್ಮಯೋಗದ ರಹಸ್ಯ ಇಲ್ಲಿ ನಿರೂಪಿತವಾಗಿದೆ.

೫. ಶ್ರೀಮದಾಚಾರ್ಯರ **'ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ'** ಎಂಬ ದ್ವಾದಶಸ್ತೋತ್ರದ ಮಾತು ಇವುಗಳ ವಿವರಣೆಯಂತಿದೆ.

## ಧರ್ಮನಿರ್ಣಯದ ಆಕರಗಳು

**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ।**
**ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೨೩೪ ॥**

**ಅ:** ಸಜ್ಜನರ ಆಚಾರ, ತನ್ನ ಸಂತೋಷ ಹಾಗೂ ವೇದೋಕ್ತವಾಗಿರುವಿಕೆ ಇವು ಧರ್ಮವೆನ್ನಿಸುವುದು; ಇದಕ್ಕೆ ವಿರುದ್ಧವಾದುದ್ದೆಲ್ಲಾ ಅಧರ್ಮ.

**ವಿ:** ೧. ಧರ್ಮದ ಸ್ವರೂಪವನ್ನು ನಿರ್ಣಯಿಸಿಕೊಳ್ಳಲು ಮುಖ್ಯ ಆಧಾರಗಳನ್ನು ಇಲ್ಲಿ ನಿರೂಪಿಸಿರುವರು.

೨. ಸಜ್ಜನರ ಆಚಾರ ತನ್ನ ಮನಸ್ತೃಪ್ತಿ ಹಾಗೂ ವೇದೋಕ್ತ ತತ್ತ್ವ ಇವು ಮೂರೂ ಧರ್ಮನಿರ್ಣಯದ ಆಕರಗಳು. ಇದಕ್ಕೆ ವಿರುದ್ಧವಾದದ್ದೆಲ್ಲ ಅಧರ್ಮ ಎಂದರ್ಥ:

**... ವಿರೋಧೇ ಚ ಬಹೂನನುವರ್ತೇತ ವೈಷ್ಣವಾನ್ ।- ಮ.ಭಾ.ತಾ.ನಿ. (೨೯/೨೩)**

೩. **'ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇಚ ತದ್ವಿದಾಮ್'** ಸಕಲ-ವೇದಗಳು ಧರ್ಮಜಿಜ್ಞಾಸೆಗೆ ಮೂಲಾಧಾರ; ಅದರಂತೆ ವೇದಬಲ್ಲವರ ನಡೆನುಡಿಗಳೂ ಸಹ; ಮನುಸ್ಮೃತಿಯ ಈ ಮಾತಿನಲ್ಲಿ ಈ ಶ್ಲೋಕದ ಭಾವವಿರುವುದು ಗಮನಾರ್ಹ.

೪. **'ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ । ಏತತ್ ಚತುರ್ವಿಧಂ ಪ್ರಾಹುಃ ಸಾಕ್ಷಾತ್ ಧರ್ಮಸ್ಯ ಲಕ್ಷಣಮ್'** ಎಂಬ ಸ್ಮೃತಿವಾಕ್ಯದಲ್ಲಿ ವೇದ, ಸ್ಮೃತಿ, ಸಜ್ಜನರ ಆಚಾರ, ಹಾಗೂ ತನ್ನ ಮನಸ್ಸಿನ ತೃಪ್ತಿ ಈ ನಾಲ್ಕನ್ನೂ ಧರ್ಮನಿರ್ಣಾಯಕ ಪ್ರಮಾಣಗಳು ಎಂದು ತಿಳಿಸಲಾಗಿದೆ.

೫. ಇವುಗಳಲ್ಲಿ ವೇದೋಕ್ತವಾದದ್ದು ಧರ್ಮ; ವೇದಾನುಕ್ತವಾದರೂ ಸ್ಮೃತ್ಯುಕ್ತ-ವಾದದ್ದು ಧರ್ಮ; ವೇದ ಸ್ಮೃತಿ ಎರಡರಲ್ಲೂ ಅನುಕ್ತವಾದ ವಿವರಗಳ ಬಗ್ಗೆ ಸಜ್ಜನರ ಆಚಾರವೇ ಧರ್ಮ; ಈ ಮೂರೂ ಇಲ್ಲವಾದಾಗ ತನಗೆ ಹಿತವೆಂದು ತೋರುವುದೇ ಧರ್ಮ ಎಂಬ ವಿಶೇಷಾಂಶವನ್ನು ಗಮನಿಸಬೇಕು.

೬. ಈ ನಾಲ್ಕೂ ಒಡಗೂಡಿದಾಗ ಅದು ಅತ್ಯಂತ ಮುಖ್ಯ ಅರ್ಥದಲ್ಲಿಯೇ ಧರ್ಮವೆನ್ನಿಸುವುದು; ಇದನ್ನು ಗಮನಿಸದೇ ಕೇವಲ ತನಗೆ ಪ್ರಿಯವಾದದ್ದಷ್ಟೇ ಧರ್ಮ ಎಂದು ತಿಳಿಯುವುದು ಶಾಸ್ತ್ರಸಮ್ಮತವಲ್ಲ ಎಂಬ ವಿಶೇಷಾಂಶವನ್ನು ಗಮನಿಸಬೇಕು.

★★

## ನಿವೃತ್ತಕರ್ಮದ ಹಿರಿಮೆ

**ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ।**
**ನಿವೃತ್ತಂ ಸೇವಮಾನಸ್ತು [1]ಬ್ರಹ್ಮಾಭ್ಯೇತಿ ಸನಾತನಮ್ ॥೨೩೫॥**

**ಅ:** ಜ್ಞಾನಪೂರ್ವಕವಾದ ನಿಷ್ಕಾಮಕರ್ಮ ನಿವೃತ್ತಕರ್ಮ ಎನ್ನಿಸುವುದು; ನಿವೃತ್ತ-ಕರ್ಮವನ್ನು ಆಚರಿಸುವವನು ಸನಾತನನಾದ ಪರಮಾತ್ಮನನ್ನು ಹೊಂದುವನು.

**ವಿ:** ೧. ಕರ್ಮವು ಪ್ರವೃತ್ತ ಮತ್ತು ನಿವೃತ್ತ ಎಂಬುದಾಗಿ ಎರಡು ಬಗೆ; ಫಲಕಾಮನೆ-ಯಿಂದ ಪ್ರವೃತ್ತವಾದ ಕರ್ಮ ಪ್ರವೃತ್ತಕರ್ಮವಾದರೆ, ಫಲಕಾಮನೆ ತೊರೆದ ಕರ್ಮ ನಿವೃತ್ತಕರ್ಮ; ನಿವೃತ್ತಕರ್ಮದ ಆಚರಣೆ ಜ್ಞಾನದ್ವಾರಾ ಮೋಕ್ಷಹೇತು ಎಂದರ್ಥ:

**ಸ್ವರ್ಗಾದ್ಯರ್ಥಂ ಪ್ರವೃತ್ತಂ ಸ್ಯಾತ್ ನಿವೃತ್ತಂ ಮುಕ್ತಯೇ ತು ಯತ್ ।**
**ಸ ಮಹಾನಿಯಮೋ ನಾಮ ಕರ್ಮ ಯತ್ರಾಧಿಕಾರಿಕಮ್ ।**
**ಮಹತೋ ನಿಯಮಾದ್ ವಿಷ್ಣೋಃ ಪ್ರೀತ್ಯಾ ಮುಕ್ತೌ ಸುಖೋನ್ನತಿಃ ।**
**– ಭವಿಷ್ಯತ್ಪುರಾಣ । (ಭಾ.ತಾ. ೪/೪/೧೭ )**

೨. ಇದು ಮನುಸ್ಮೃತಿ ಹಾಗೂ ವ್ಯಾಸಸ್ಮೃತಿಗಳಲ್ಲಿನ ವಚನ (ಗೀ.ಭಾ. ೩/೪; ಗೀ.ತಾ. ೫/೫).

★★

## ಗ್ರಂಥಮಾಹಾತ್ಮ್ಯ

**ಶ್ರೀಮದಾನಂದತೀರ್ಥಾರ್ಯಸಹಸ್ರಕಿರಣೋತ್ಥಿತಾ ।**
**ಗೋತತಿಃ ಸತತಂ ಸೇವ್ಯಾ ಗೀರ್ವಾಣೈಃ [2]ಸಿದ್ಧಿದಾ ಭವೇತ್ ॥ ೨೩೬ ॥**

**ಅ:** ಶ್ರೀಮದಾನಂದತೀರ್ಥಾರ್ಯರು ಎಂಬ ಸೂರ್ಯನಿಂದ ಹೊರ-ಹೊಮ್ಮಿರುವ ಈ ವಾಕ್ಯಗಳ ಸಮುದಾಯ ದೇವತೆಗಳಿಂದ ಸದಾ ಸೇವಿಸಲ್ಪಡ-ಬೇಕು. ಇದು ಸಿದ್ಧಿಯನ್ನು ನೀಡುವಂತಹುದು.

**ವಿ:** ೧. ಗ್ರಂಥಾಂತ್ಯದಲ್ಲಿ ಶ್ರೀಮದಾಚಾರ್ಯರು ಆದರ ಹಿರಿಮೆಯನ್ನು ಮತ್ತೊಮ್ಮೆ ಸಾರಿರುವರು.

೨. **ಶ್ರೀಮದಾಚಾರ್ಯರೇ** ಸೂರ್ಯ; ಅವರಿಂದ ಪ್ರಕಾಶಿತಗೊಂಡಿರುವ ವಾಕ್ಯ-**ಗಳೇ** ಕಿರಣಗಳ ಸಮೂಹ ಎಂಬಲ್ಲಿನ ರೂಪಕ ಮನೋಜ್ಞವಾದುದು.

---

೧. ಬ್ರಹ್ಮಾತ್ಯೇತಿ ( ಪಾ.) ; ಮಾನವೇ – ಗೀತಾಭಾಷ್ಯ (೩/೪)
೨. ಶುದ್ಧಿದಾ ಇತಿ ಕ್ವಚಿತ್ ।

೩. ಸೂರ್ಯನ ಕಿರಣಗಳು ಜಗತ್ತನ್ನು ಬೆಳಗುವಂತೆ ಶ್ರೀಮಧ್ವಸೂರ್ಯರ ಈ ವಾಕ್ಯಗಳು ತಾತ್ತ್ವಿಕಜಗತ್ತನ್ನು ಪ್ರಕಾಶ ಪಡಿಸುವವು ಎಂದು ಭಾವ.

೪. ಮಧ್ವವಿಜಯದ **'ಅಪಿ ತ್ರಿಲೋಕ್ಯಾ ಬಹಿರುಲ್ಲಸಂತೀ'** ಎಂಬ ಶ್ಲೋಕದಲ್ಲಿ ಮಧ್ವರ ಕೀರ್ತಿಯನ್ನು ಸೂರ್ಯಕಾಂತಿಗಿಂತ ಮಿಗಿಲು ಎಂದು ವರ್ಣಿಸಿರುವುದು ಮಧ್ವ- ಸೂರ್ಯರು ಲೋಕದ ಸೂರ್ಯನಿಗಿಂತ ಅತ್ಯಂತ ಶ್ರೇಷ್ಠರಾದವರು ಎಂಬುದನ್ನು ನಿರೂಪಿಸುವುದು (ಸುಮಧ್ವವಿಜಯ(೧/೩) :

**ಅಪಿ ತ್ರಿಲೋಕ್ಯಾ ಬಹಿರುಲ್ಲಸಂತೀ**
**ತಮೋ ಹರಂತೀ ಮುಹುರಾಂತರಂ ಚ।**
**ದಿಶ್ಯಾದ್ದೃಶಂ ನೋ ವಿಶದಾಂ ಜಯಂತೀ**
**ಮಧ್ವಸ್ಯ ಕೀರ್ತಿರ್ದಿನನಾಥದೀಪ್ತಿಮ್॥**

೫. **ಗೀರ್ವಾಣೈಃ** ಎಂಬ ಪದದಿಂದ ಈ ಗ್ರಂಥಕ್ಕೆ ದೇವತೆಗಳೇ ಮುಖ್ಯಾಧಿಕಾರಿಗಳು ಎಂದು ಸೂಚಿತ; ಇದು **'ಸುರಾದ್ಯಾ ನರಾಂತಾ'** (ಮ.ವಿ.೧೧/೭೯) ಎಂಬ ವಾಕ್ಯಕ್ಕೆ ಗಮಕ.

೬. ಇಲ್ಲಿ ಸಿದ್ಧಿ ಎಂದರೆ ಮೋಕ್ಷವೆಂದೇ ಅರ್ಥ; ಈ ಗ್ರಂಥದಿಂದ ಬರುವ ಜ್ಞಾನದಿಂದ ಕೊನೆಗೆ ಅಪರೋಕ್ಷಜ್ಞಾನ ಲಭಿಸಿ ಮೋಕ್ಷ ಲಭಿಸುವುದು ಎಂಬುದು ಇದರ ಮುಖ್ಯ ಫಲಶ್ರುತಿ.

೭. ಈ ಕೃಷ್ಣಾಮೃತಮಹಾರ್ಣವಕೃತಿಯನ್ನು ರಚಿಸಿದ ಸ್ಥಳ ವೈದ್ಯನಾಥೇಶ್ವರವೆಂದು ಪ್ರಸಿದ್ಧವಾದ ಪುಣ್ಯಕ್ಷೇತ್ರ ; ಕೊಕ್ಕಡ ಎಂಬುದು ಅದರ ಇಂದಿನ ಹೆಸರು :

**ಕ್ಷೇತ್ರಾಗ್ರ್ಯಂ ತ್ರಿಭುವನವೈದ್ಯನಾಥನಾಥಂ**
**ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವಿ।**
**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ**
**ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ॥ - ಸುಮಧ್ವವಿಜಯ (೧೬/೪೦)**

★★

## ಕೃತಿಕಾರರ ಸ್ವರೂಪವಿವೇಕ

ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-
ರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ ೨೩೭ ॥

ಅ : ಯಾವ ವಾಯುದೇವರ ದಿವ್ಯವಾದ ಮೂರುರೂಪಗಳು ವೇದವಚನದಲ್ಲಿ ಉಕ್ತವಾಗಿವೆಯೋ ಆ ವಾಯುದೇವರು ಬಲಸ್ವರೂಪರು, ಜ್ಞಾನಪೂರ್ಣರು,

ಸಕಲಜೀವರನ್ನು ಭರಣ ಮಾಡುವಂತಹವರು, ಜಗತ್ಪೂಜ್ಯರಾದವರು. ಅವರ ಅವತಾರರೂಪಗಳು ಮೂಲರೂಪದಂತೆಯೇ ಇರುವವು. ಶ್ರೀರಾಮದೇವರ ಮಾತುಗಳನ್ನು ಒಯ್ದದ್ದು ಮೊದಲನೆಯದು (ಹನುಮದ್ರೂಪ); ಅಪಾರವಾದ ಶತ್ರು-ಸೇನೆಯನ್ನು ಸದೆ ಬಡೆದದ್ದು ಎರಡನೆಯದು (ಭೀಮರೂಪ); ಮಧ್ವ ಎಂಬ ಇದು ಮೂರನೆಯದು; ಇದರಿಂದ ವಿಷ್ಣುಪ್ರೀತ್ಯರ್ಥವಾಗಿ ಈ ಗ್ರಂಥ ರಚಿತವಾಯಿತು.

ವಿ: ೧. ಶ್ರೀಮದಾಚಾರ್ಯರು ತಾವು ವಾಯುದೇವರ ಅವತಾರ; ಬಲ-ಜ್ಞಾನಾದಿಗಳಿಂದ ಪೂರ್ಣರಾದವರು. ವೇದಪ್ರತಿಪಾದ್ಯರಾದವರು. ಹನುಮಂತನಾಗಿ ಶ್ರೀರಾಮಸೇವೆಯನ್ನು, ಭೀಮಸೇನನಾಗಿ ಶ್ರೀಕೃಷ್ಣಸೇವೆಯನ್ನು ಮಾಡಿ ಈಗ ಮಧ್ವ-ರೂಪದಿಂದ ಶ್ರೀವ್ಯಾಸಸೇವೆಯನ್ನು ಮಾಡುತ್ತಿರುವವರು ಎಂದು ಇಲ್ಲಿ ತಿಳಿಸಿರುವರು; ಅವರ ಅವತಾರರೂಪಗಳೂ ಸಹ ಮೂಲರೂಪದಂತೆಯೇ ಜ್ಞಾನಾದಿಗಳಿಂದ ಪೂರ್ಣವಾದ ಮಹತ್ತರವಾದ ದಿವ್ಯರೂಪಗಳು ಎಂಬುದು ಇಲ್ಲಿಯ ವಿಶೇಷ.

೨. ಶ್ರೀಮದಾಚಾರ್ಯರು ತಮ್ಮ ಅನೇಕ ಗ್ರಂಥಗಳಲ್ಲಿ ತಮ್ಮ ಸ್ವರೂಪವನ್ನು ತಿಳಿಸುವ ಈ ಶ್ಲೋಕವನ್ನು ಬರೆದಿರುವರು. ತಾವು ಶ್ರೀಹರಿಯ ಮುಖ್ಯಪ್ರತೀಕವಾಗಿದ್ದು ಮೋಕ್ಷದಾಯಕನಾದ ಶ್ರೀಹರಿಯಂತೆ ಯಥಾಯೋಗ್ಯವಾಗಿ ಉಪಾಸನೆಮಾಡಲ್ಪಡಲೇಬೇಕಾದ್ದವರಾದ್ದರಿಂದ ಅವರು ಹೀಗೆ ತಮ್ಮ ಸ್ವರೂಪವನ್ನು ತಿಳಿಸಿರುವರು ಎಂಬ ವಿಶೇಷವನ್ನು ಶ್ರೀಜಯತೀರ್ಥರು ತಮ್ಮ ಟೀಕೆಗಳಲ್ಲಿ ತಿಳಿಸಿರುವರು.

೩. ಈ ಶ್ಲೋಕದ ಬಗ್ಗೆ ವಿಶೇಷ ವಿವರಣೆಯನ್ನು ಶ್ರೀಪದ್ಮನಾಭತೀರ್ಥರು, ಸನ್ನ್ಯಾಯ ರತ್ನಾವಳಿಯಲ್ಲೂ, ತ್ರಿವಿಕ್ರಮಪಂಡಿತಾಚಾರ್ಯರು ತತ್ತ್ವಪ್ರದೀಪದಲ್ಲೂ, ಶ್ರೀಜಯ-ತೀರ್ಥರು ನ್ಯಾಯಸುಧೆಯಲ್ಲೂ, ಶ್ರೀನಾರಾಯಣಪಂಡಿತಾಚಾರ್ಯರು ನಯಚಂದ್ರಿಕೆ-ಯಲ್ಲೂ ನೀಡಿರುವರು[೧].

೪. ಮೂಲರೂಪದಂತೆಯೇ ಅವತಾರರೂಪಗಳಲ್ಲೂ ಸಹ ಪರಿಪೂರ್ಣವಾದ ವೇದವಚನಪ್ರತಿಪಾದ್ಯವಾದ ಶ್ರೀರಾಮ, ಶ್ರೀಕೃಷ್ಣ ಹಾಗೂ ಶ್ರೀವೇದವ್ಯಾಸರೂಪದ ಶ್ರೀಹರಿಯ ಪ್ರೀತ್ಯರ್ಥವಾಗಿ ಶ್ರೀಮಧ್ವರೂಪದ ವಾಯುದೇವರಾದ ತಮ್ಮಿಂದ ಈ ಕೃತಿ ರಚಿತವಾಯಿತು ಎಂಬ ಅರ್ಥವೂ ಈ ಶ್ಲೋಕಕ್ಕೆ ವಿವಕ್ಷಿತ. ಇದರ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಬಳಿತ್ಥಾಸೂಕ್ತ' (ಕನ್ನಡ ಅನುವಾದ ಸಮೇತ) ಕೃತಿಯಲ್ಲಿ ನೀಡಲಾಗಿದೆ.

★★

೧. ವಿವರವನ್ನು ನಮ್ಮ ಪ್ರಕಾಶನದ 'ರಾಮಾಮೃತಮಹಾರ್ಣವ' ಅನುವಾದದಲ್ಲಿ ಕೊಡಲಾಗಿದೆ.

## ಗ್ರಂಥಸಮರ್ಪಣೆ

**ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೨೩೮ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತಃ ಕೃಷ್ಣಾಮೃತಮಹಾರ್ಣವಃ ॥**

**ಅ:** ಸಕಲಗುಣಗಳಿಂದ ಪರಿಪೂರ್ಣನೂ, ಸಕಲದೋಷಗಳಿಂದ ರಹಿತನೂ ಆದ ಮಹಾವಿಷ್ಣುವು ನನಗೆ ಪರಮಸಖ; ನನಗೆ ಸದಾ ಪ್ರಸನ್ನನಾಗಿರುವ ಅವನು ಇನ್ನೂ ಹೆಚ್ಚಾಗಿ ಪ್ರಸನ್ನನಾಗಲಿ.

ವಿ: ೧. ಗ್ರಂಥವನ್ನು ಶ್ರೀಹರಿಗೆ ಸಮರ್ಪಿಸುತ್ತಾ ಶ್ರೀಮದಾಚಾರ್ಯರು ಮತ್ತೊಮ್ಮೆ ಅವನು ಸರ್ವಗುಣಪೂರ್ಣ ಹಾಗೂ ಸಕಲದೋಷದೂರ ಎಂಬುದನ್ನು ನಿರೂಪಿಸಿರುವರು.

೨. ಇಲ್ಲಿಯ **ಪರಮಃ ಸುಹೃತ್** ಎಂಬ ಮಾತು **'ದ್ವಾಸುಪರ್ಣಾ ಸಯುಜಾ ಸಖಾಯಾ'** ಎಂಬ ಶ್ರುತ್ಯರ್ಥರೂಪವಾಗಿರುವುದು ವಿಶೇಷ.

೩. ತಮ್ಮ ಸ್ವರೂಪವನ್ನು ತಿಳಿಸುವ ಶ್ಲೋಕದ ಅನಂತರ ಅಂತಹ ಪ್ರತಿಯೊಂದು ಪ್ರಸಂಗದಲ್ಲೂ ಶ್ರೀಮದಾಚಾರ್ಯರು ಮತ್ತೊಮ್ಮೆ ಶ್ರೀಹರಿಸ್ತವನರೂಪವಾದ ಇಂತಹ ಶ್ಲೋಕಗಳನ್ನು ಬರೆದಿರುವರು; ತಮ್ಮ ಸ್ವರೂಪಕಥನದೊಂದಿಗೆ ಗ್ರಂಥವನ್ನು ಮುಕ್ತಾಯ ಮಾಡಲು ಇಷ್ಟಪಡದೇ ಶ್ರೀಮದಾಚಾರ್ಯರು ಕೊನೆಯಲ್ಲಿ ಹೀಗೆ ಮತ್ತೊಮ್ಮೆ ಶ್ರೀಹರಿಸ್ತೋತ್ರವನ್ನು ಮಾಡಿರುವರು ಎಂಬ ವಿಶೇಷಾಂಶವನ್ನು ಶ್ರೀಜಯತೀರ್ಥರು ನ್ಯಾಯಸುಧೆಯಲ್ಲಿ ತಿಳಿಸಿರುವರು.

೪. ಹೀಗೆ ಶ್ರೀಹರಿಸರ್ವೋತ್ತಮತ್ವವನ್ನೇ ಸರ್ವಾತ್ಮನಾ ಪ್ರತಿಪಾದಿಸುವ ಮೂಲಕ ಶ್ರೀಮದಾಚಾರ್ಯರು ತೋರಿರುವ ಪರಿಶುದ್ಧವಾದಧರ್ಮ ಅವರು ಋಜುಶಿರೋಮಣಿಗಳು ಎಂಬುದಕ್ಕೆ ದ್ಯೋತಕ.

೫. ಈ ಶ್ಲೋಕವು ಮಹಾಭಾರತತಾತ್ಪರ್ಯನಿರ್ಣಯ ಕೃತಿಯ ಉಪಸಂಹಾರಶ್ಲೋಕವೂ ಆಗಿರುವುದು ವಿಶೇಷ.

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★★★

**ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥**

★★★★★

## ಪರಿಶಿಷ್ಟ - ೧

# ಸ್ಮೃತಿಮುಕ್ತಾವಲಿ ಕೃಷ್ಣಾಚಾರ್ಯರ ವ್ಯಾಖ್ಯಾನ ಹಾಗೂ ಇತರ ಕೆಲವು ಹಸ್ತಪ್ರತಿಗಳಲ್ಲಿನ ಕೃಷ್ಣಾಮೃತಮಹಾರ್ಣವ ಕೃತಿಯ ಅಧಿಕಶ್ಲೋಕಗಳು

**ಸಕೃದಭ್ಯರ್ಚಿತೋ ಯೇನ ದೇವದೇವೋ ಜನಾರ್ದನಃ।**
**ಯತ್ ಕೃತಂ ತತ್ ಕೃತಂ ತೇನ ಸಂಪ್ರಾಪ್ತಂ ಪರಮಂ ಪದಮ್ ॥೧॥**

ದೇವದೇವನಾದ ಜನಾರ್ದನನು ಯಾರಿಂದ ಒಮ್ಮೆಯಾದರೂ ಪೂಜಿತನಾಗುವನೋ ಅವನು ಮಾಡಿದ್ದೆಲ್ಲಾ ಸಾರ್ಥಕ. ಅವನು ಪರಮಪದವನ್ನು ಹೊಂದುವನು.

**ವಿಷ್ಣೋರ್ನೈವೇದ್ಯಶೇಷೇಣ ಯೋ ಭುನಕ್ತಿ ದಿನೇ ದಿನೇ।**
**ಸಿಕ್ಥೇ ಸಿಕ್ಥೇ ಲಭೇತ್ ಪುಣ್ಯಂ ಚಾಂದ್ರಾಯಣಶತಾಧಿಕಮ್ ॥೨॥**

ವಿಷ್ಣುವಿನ ನೈವೇದ್ಯಶೇಷದಿಂದ ಯಾವನು ದಿನದಿನದಲ್ಲೂ ಭೋಜನ ಮಾಡುವನೋ ಅವನು ತುತ್ತು ತುತ್ತಿನಲ್ಲೂ ನೂರಾರು ಚಾಂದ್ರಾಯಣಗಳಿಗಿಂತ ಹೆಚ್ಚಿನ ಪುಣ್ಯವನ್ನು ಹೊಂದುವನು.

**ನೈವೇದ್ಯಶೇಷಂ ತುಲಸೀವಿಮಿಶ್ರಿತಂ**
**ವಿಶೇಷತಃ ಪಾದಜಲೇನ ಸಿಕ್ತಮ್।**
**ಯೋಽಶ್ನಾತಿ ನಿತ್ಯಂ ಪುರತೋ ಮುರಾರೇಃ**
**ಪ್ರಾಪ್ನೋತಿ ಯಜ್ಞಾಯುತಕೋಟಿಪುಣ್ಯಮ್ ॥೩॥**

ತುಲಸಿಯಿಂದ ಒಡಗೂಡಿದ ಪಾದೋದಿಕದಿಂದ ಪ್ರೋಕ್ಷಿತವಾದ ವಿಷ್ಣುವಿನ ನೈವೇದ್ಯಶೇಷವನ್ನು ಯಾವನು ನಿತ್ಯ ಶ್ರೀಹರಿಯ ಎದುರು ಉಣ್ಣುವನೋ ಅವನು ಹತ್ತುಸಾವಿರಕೋಟಿ ಯಜ್ಞಗಳ ಪುಣ್ಯವನ್ನು ಪಡೆಯುವನು.

**ಶಾಲಗ್ರಾಮಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ।**
**ತತ್ರ ಸ್ನಾನಂ ಚ ದಾನಂ ಚ ವಾರಾಣಾಸ್ಯಾಃ ಶತಾಧಿಕಮ್ ॥೪॥**

ಶಾಲಿಗ್ರಾಮ ಶಿಲೆಯು ಎಲ್ಲಿರುವುದೋ ಅಲ್ಲಿ ಶ್ರೀಹರಿಯು ನೆಲೆಸಿರುವನು. ಅಲ್ಲಿ ಸ್ನಾನ ಮಾಡುವುದು ದಾನ ಮಾಡುವುದು ಕಾಶಿಗಿಂತ ನೂರುಪಟ್ಟು ಶ್ರೇಷ್ಠವೆನ್ನಿಸುವುದು.

**ಅಪೀಷದ್ದಶಮೀವಿದ್ಧಾ ಸದಾ ತಾಂ ಪರಿವರ್ಜಯೇತ್।**
**ಸುರಾಬಿಂದುಸಮಾಯುಕ್ತಾಂ ಪ್ರವದಂತಿ ಮನೀಷಿಣಃ ॥೫॥**

ದಶಮಿಯಿಂದ ಸ್ವಲ್ಪ ಸಂಪರ್ಕ ಹೊಂದಿದ್ದರೂ ಅದನ್ನು ಜ್ಞಾನಿಗಳು ಸುರೆಯ ಬಿಂದುವಿನಿಂದ ಕೂಡಿದುದು ಎಂದು ಹೇಳುವರು. ಅಂತಹ ಏಕಾದಶಿಯನ್ನು ಯಾವಾಗಲೂ ತ್ಯಜಿಸಬೇಕು.

**ಅನ್ನಂ ನಿವೇದಯೇನ್ಮಹ್ಯಂ ಪ್ರಾಪ್ತೇ ಮದ್ವಾಸರೇ ಶುಭೇ ।**
**ತಸ್ಯಾಪಿ ನರಕಪ್ರಾಪ್ತಿಃ ಕಿಂಪುನರ್ಭೋಜನೇ ಕೃತೇ ॥ ೬ ॥**

ಮಂಗಳಕರವಾದ ಹರಿದಿನದಲ್ಲಿ ಯಾವನು ನನಗೆ ಅನ್ನವನ್ನು ನೈವೇದ್ಯ ಮಾಡುವನೋ ಅವನಿಗೂ ನರಕ ತಪ್ಪಿದ್ದಲ್ಲ; ಇನ್ನು ಉಂಡಲ್ಲಿ ಹೇಳಬೇಕೇ?

**ಏಕಾದಶ್ಯಾಂ ನ ಭುಂಜೀತ ನ ಸುರಾಂ ವಾ ಪಿಬೇತ್ ಕ್ವಚಿತ್ ।**
**ಬ್ರಾಹ್ಮಣೋ ನೈವ ಹಂತವ್ಯ ಇತ್ಯೇಷಾ ವೈದಿಕೀ ಸ್ಮೃತಿಃ ॥ ೭ ॥**

ಏಕಾದಶಿಯಂದು ಉಣ್ಣಕೂಡದು ; ಎಲ್ಲೂ ಮದ್ಯಪಾನವನ್ನು ಮಾಡಕೂಡದು; ಬ್ರಾಹ್ಮಣನನ್ನು ಸರ್ವಥಾ ನೋಯಿಸಕೂಡದು. ಇದು ವೇದಾನುಕೂಲವಾದ ಸ್ಮೃತಿ.

**ಅನರ್ಪಯಿತ್ವಾ ಗೋವಿಂದೇ ಯೋ ಭುಂಕ್ತೇ ಮಾನವಾಧಮಃ ।**
**ಶ್ವಾನವಿಷ್ಠಾಸಮಂ ಚಾನ್ನಂ ನೀರಂ ಚ ಸುರಯಾ ಸಮಮ್ ॥ ೮ ॥**

ಗೋವಿಂದನಿಗೆ ನಿವೇದಿಸದೇ ಯಾವ ಮಾನವಾಧಮನು ಉಣ್ಣುವನೋ ಆ ಅನ್ನ ನಾಯಿಯ ಮಲಕ್ಕೆ ಸಮಾನ ; ನೀರು ಮದ್ಯಕ್ಕೆ ಸಮಾನ.

**ಕವಲೇ ಕವಲೇ ತು ಯಃ ಕುರ್ಯಾದ್ಗೋವಿಂದಸ್ಯಾನುಕೀರ್ತನಮ್ ।**
**ಜೀವನ್ಮುಕ್ತೋಽನ್ಯಥಾ ಕುರ್ವನ್ ಕೇವಲೋದರಪೂರಣಮ್ ॥ ೯ ॥**

ಪ್ರತಿ ತುತ್ತಿನಲ್ಲೂ ಯಾವನು ಗೋವಿಂದನನ್ನು ಕೀರ್ತಿಸುವನೋ ಅವನು ಜೀವನ್ಮುಕ್ತನೇ ಸರಿ ; ಹಾಗೆ ಮಾಡದವನು ಕೇವಲ ಹೊಟ್ಟೆ ಹೊರೆಯಲೆಂದು ಬದುಕುವುದೇ ಸರಿ.

**ಸರ್ಪಿಃ ಕರ್ಪೂರಸದೃಶಮರ್ಪಿತಂ ಶೇಷಶಾಯಿನೇ ।**
**ಅನರ್ಪಿತಂ ತು ಯತ್ಸರ್ಪಿಃ ಕರ್ಪೂರತಿಲಜಂ ಯಥಾ ॥ ೧೦ ॥**

ಶೇಷಶಾಯಿಯಾದ ಶ್ರೀಹರಿಗೆ ಸಮರ್ಪಿತವಾಗುವ ತುಪ್ಪ ಕರ್ಪೂರ ಸದೃಶ-ವಾದುದು; ಅವನಿಗೆ ಅರ್ಪಿತವಾಗದ ತುಪ್ಪ ಕೇವಲ ಕೊಳಕು ಮಾತ್ರ.

**ಊರ್ಧ್ವಪುಂಡ್ರಂ ಮಹಾಸೂಕ್ಷ್ಮಂ ಲಲಾಟೇ ಯಸ್ಯ ದೃಶ್ಯತೇ ।**
**ಸ ಚಂಡಾಲೋಽಪಿ ಶುದ್ಧಾತ್ಮಾ ಪೂಜ್ಯ ಏವ ನ ಸಂಶಯಃ ॥ ೧೧ ॥**

ತುಂಬಾ ಸೂಕ್ಷ್ಮವಾದ ಊರ್ಧ್ವಪುಂಡ್ರವು ಯಾವನ ಹಣೆಯಲ್ಲಿ ಕಂಗೊಳಿಸುವುದೋ ಅವನು ಚಂಡಾಲನಾದರೂ ಶುದ್ಧಾತ್ಮನೇ ಆಗಿ ಪೂಜ್ಯನೆನಿಸುವನು; ಸಂಶಯವಿಲ್ಲ.

**ನಾಮ್ನೋऽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।**
**ತಾವತ್ ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥ ೧೨ ॥**

ಶ್ರೀಹರಿಯ ಒಂದು ನಾಮಕ್ಕೆ ಪಾಪ ಪರಿಹರಿಸುವ ಶಕ್ತಿ ಎಷ್ಟಿದೆ ಎಂದರೆ ಅಷ್ಟು ಪಾಪವನ್ನು ಮಾಡಲು ಎಂತಹ ಪಾಪಿ ಮನುಷ್ಯನಿಗೂ ಸಾಧ್ಯವಾಗದು.

**ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ ।**
**ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥ ೧೩ ॥**

ನಿನ್ನಿಂದ ಸೇವಿತವಾದ ಹಾರ ಗಂಧ ವಸ್ತ್ರ ಆಭರಣಗಳನ್ನು ಸೇವಿಸುವವರಾಗಿ ಉಚ್ಛಿಷ್ಟವನ್ನು ತಿನ್ನುವವರಾಗಿ ನಿನ್ನ ದಾಸರಾದ ನಾವು ನಿನ್ನ ಮಾಯೆಯನ್ನು ಗೆಲ್ಲುವೆವು (ಇದು ಶ್ರೀಮದ್ಭಾಗವತದಲ್ಲಿ ಶ್ರೀಕೃಷ್ಣನನ್ನು ಕುರಿತು ಉದ್ಧವವಚನ).

**ಪುಷ್ಪಮನ್ನಂ ಫಲಂ ತೋಯಂ ಶಿವಸ್ಥಂ ನ ಸ್ಪೃಶೇತ್ ಕ್ವಚಿತ್ ।**
**ಲಂಘಯೇನ್ನೈವ ನಿರ್ಮಾಲ್ಯಂ ಕೂಪೇ ಸರ್ವಂ ವಿನಿಕ್ಷಿಪೇತ್ ॥ ೧೪ ॥**

ಶಿವನ ಮೇಲೆ ಹಾಕಿದ ಹೂವು ಅರ್ಪಿಸಿದ ಅನ್ನ ಹಣ್ಣು ನೀರುಗಳನ್ನು ಎಲ್ಲೂ ಸ್ಪರ್ಶಿಸಕೂಡದು; ನಿರ್ಮಾಲ್ಯವನ್ನು ದಾಟಕೂಡದು; ಅದನ್ನೆಲ್ಲಾ ಕೂಪದಲ್ಲಿ ಹಾಕಬೇಕು.

**ದ್ವಾದಶಾಕ್ಷರಮಂತ್ರೇಣ ಹ್ಯಭಿಷಿಚ್ಯ ವಿಧಾನತಃ ।**
**ಸಾಲಿಗ್ರಾಮಜಲೈಃ ಸ್ನಾತಃ ಸರ್ವತೀರ್ಥೇಷು ಸರ್ವದಾ ॥ ೧೫ ॥**

ದ್ವಾದಶಾಕ್ಷರ ಮಂತ್ರದಿಂದ ವಿಧ್ಯುಕ್ತವಾಗಿ ಅಭಿಷೇಕಮಾಡಿ ಶಾಲಗ್ರಾಮದ ನೀರಿನಿಂದ ಪ್ರೋಕ್ಷಿಸಿಕೊಳ್ಳುವವನು ಸರ್ವತೀರ್ಥಗಳಲ್ಲೂ ಸ್ನಾನಮಾಡಿದವನಾಗುವನು.

**ಯಃ ಕ್ರಮಾದಭಿಷಿಚ್ಯಾಥ ತತ್ತೋಯೈಃ ಸ್ವಶಿರೋ ನರಃ ।**
**ಅಭಿಷಿಚ್ಯ ಯದಿ ಪಿಬೇದ್ಯಾತಿ ವಿಷ್ಣೋಃ ಪರಂ ಪದಮ್ ॥ ೧೬ ॥**

ಯಾವನು ಕ್ರಮವಾಗಿ ಅಭಿಷೇಕಮಾಡಿ ಆ ಜಲಗಳಿಂದ ತನ್ನ ಶಿರಸ್ಸಿನ ಮೇಲೆ ಪ್ರೋಕ್ಷಣೆ ಮಾಡಿಕೊಂಡು ಪ್ರಾಶನಮಾಡುವವನು ವಿಷ್ಣುವಿನ ಶ್ರೇಷ್ಠಲೋಕವನ್ನು ಹೊಂದುವನು.

**ಗಂಗಾ ಗೋದಾವರೀ ರೇವಾ ನದ್ಯೋ ಮುಕ್ತಿಪ್ರದಾಶ್ಚ ಯಾಃ ।**
**ನಿವಸಂತಿ ಸರ್ವತೀರ್ಥಾಃ ಸಾಲಗ್ರಾಮಶಿಲಾಜಲೇ ॥ ೧೭ ॥**

ಗಂಗೆ ಗೋದಾವರಿ ನರ್ಮದಾ ಮೊದಲಾದ ಮುಕ್ತಿಪ್ರದವಾದ ನದಿಗಳೂ ಸಕಲತೀರ್ಥಗಳೂ ಶಾಲಗ್ರಾಮಶಿಲೆಯಿಂದ ಹೊರಬರುವ ಜಲದಲ್ಲಿ ನೆಲೆಸಿರುವವು.

ಸಾಲಗ್ರಾಮಶಿಲಾಚಕ್ರಂ ವಜ್ರಕೀಟವಿನಿರ್ಮಿತಮ್ ।
ಅಧಿಷ್ಠಾನಂ ಹಿ ತದ್ವಿಷ್ಣೋಃ ಸರ್ವಪಾಪಪ್ರಣಾಶನಮ್ ॥ ೧೮ ॥

ವಜ್ರಕೀಟಗಳಿಂದ ಕೊರೆದು ನಿರ್ಮಿತವಾದ ಶಾಲಗ್ರಾಮಶಿಲಾಚಕ್ರವು ಶ್ರೀವಿಷ್ಣುವಿಗೆ ಅಧಿಷ್ಠಾನ; ಅದು ಸಕಲಪಾಪಗಳನ್ನೂ ಪರಿಹರಿಸುವುದು.

ಸಾಲಗ್ರಾಮಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ।
ತತ್ರ ದೇವಾಃ ಸುರಾ ಯಜ್ಞಾ ಭುವನಾನಿ ಚತುರ್ದಶ ॥ ೧೯ ॥

ಶಾಲಗ್ರಾಮಶಿಲಾರೂಪದಲ್ಲಿ ಕೇಶವನಾದ ಶ್ರೀಹರಿಯು ಎಲ್ಲಿ ನೆಲೆಸಿರುವನೋ ಅಲ್ಲಿ ದೇವತೆಗಳು, ಯಜ್ಞಗಳೂ, ಹದಿನಾಲ್ಕು ಲೋಕಗಳೂ ನೆಲೆಸಿರುವವು.

ಯಥಾ ಕಾಷ್ಠಗತೋ ವಹ್ನಿರ್ಮಥ್ನಸ್ಥಾನೇ ಪ್ರಕಾಶತೇ ।
ತಥಾ ಸರ್ವಗತೋ ವಿಷ್ಣುಃ ಸಾಲಗ್ರಾಮೇ ಪ್ರಕಾಶತೇ ॥ ೨೦ ॥

ಕಾಷ್ಠದೊಳಗಿನ ಅಗ್ನಿ ಮಥಿಸಿದ ಸ್ಥಳದಲ್ಲಿ ಹೊರಹೊಮ್ಮುವಂತೆ ಸರ್ವಗತನಾದ ವಿಷ್ಣುವು ಶಾಲಗ್ರಾಮದಲ್ಲಿ ಸನ್ನಿಹಿತನಾಗಿರುವನು.

ನ ತಥಾ ರಮತೇ ಲಕ್ಷ್ಮ್ಯಾ ನ ತಥಾ ಸ್ವಪುರೇ ಹರಿಃ ।
ಸಾಲಗ್ರಾಮಶಿಲಾಚಕ್ರೇ ಯಥಾ ಸ ರಮತೇ ಸದಾ ॥ ೨೧ ॥

ಶ್ರೀಹರಿಯು ಶಾಲಗ್ರಾಮ ಶಿಲೆಯ ಚಕ್ರದಲ್ಲಿ ಹೇಗೆ ವಿಹಾರಮಾಡುವನೋ ಹಾಗೆ ಲಕ್ಷ್ಮಿಯೊಂದಿಗೆ ವಿಹರಿಸನು; ತನ್ನ ಲೋಕವಾದ ವೈಕುಂಠದಲ್ಲೂ ವಿಹರಿಸನು; (ಶಾಲಗ್ರಾಮಶಿಲೆಯಲ್ಲಿ ಶ್ರೀವಿಷ್ಣುವಿನ ವಿಶೇಷಸನ್ನಿಧಾನ ಎಂದು ತಾತ್ಪರ್ಯ.)

ಶಿಲಾ ದ್ವಾದಶ ವೈ ವೈಶ್ಯ ಸಾಲಗ್ರಾಮಸಮುದ್ಭವಾಃ ।
ವಿಧಿವತ್ ಪೂಜಿತಾ ಯೇನ ತಸ್ಯ ಪುಣ್ಯಂ ವದಾಮಿ ತೇ ॥ ೨೨ ॥

ಶಾಲಗ್ರಾಮದಿಂದ ನಿರ್ಮಿತವಾದ ಹನ್ನೆರಡು ಶಿಲೆಗಳನ್ನು ವಿಧಿವತ್ತಾಗಿ ಯಾವನು ಪೂಜಿಸುವನೋ ಅವನಿಗೆ ಲಭಿಸುವ ಪುಣ್ಯವನ್ನು ತಿಳಿಸುವೆ.

ಕೋಟಿದ್ವಾದಶಕೈರ್ಲಿಂಗೈಃ ಪೂಜಿತೈಃ ಸ್ವರ್ಣಪಂಕಜೈಃ ।
ಯತ್ಸ್ಯಾದ್ ದ್ವಾದಶಕಲ್ಪೇಷು ದಿನೇನೈಕೇನ ಲಭ್ಯತೇ ॥ ೨೩ ॥

ಹನ್ನೆರಡು ಕಲ್ಪಗಳ ಕಾಲ ಸುವರ್ಣಕಮಲಗಳಿಂದ ಕೋಟಿದ್ವಾದಶ ಜ್ಯೋತಿರ್ಲಿಂಗಗಳು ಪೂಜಿತವಾದಾಗ ಲಭಿಸುವ ಪುಣ್ಯ ಇವನಿಗೆ ಒಂದೇ ದಿನದಲ್ಲಿ ಲಭಿಸುವುದು (ದ್ವಾದಶ ಜ್ಯೋತಿರ್ಲಿಂಗಗಳನ್ನು ಕೋಟಿ ಸಂಖ್ಯೆಯಲ್ಲಿ ಸುವರ್ಣಕಮಲಗಳಿಂದ ಹನ್ನೆರಡು ಕಲ್ಪಗಳ ಕಾಲ ಪೂಜಿಸಿದಾಗ ಬರುವ ಪುಣ್ಯ ಹನ್ನೆರಡು ಶಾಲಗ್ರಾಮಶಿಲಾಮೂರ್ತಿಗಳನ್ನು ಒಂದೇ ದಿನ ಪೂಜಿಸಿದಾಗ ಲಭಿಸುವುದು ಎಂದರ್ಥ).

**ಸಾಲಗ್ರಾಮಶಿಲಾಯಾಂ ತು ಯಃ ಶ್ರಾದ್ಧಂ ಕುರುತೇ ನರಃ ।**
**ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಶತಂ ದಿವಿ ॥ ೨೪ ॥**

ಶಾಲಗ್ರಾಮಶಿಲೆಯ ಬಳಿ ಯಾವ ನರನು ಶ್ರಾದ್ಧವನ್ನು ಮಾಡುವನೋ ಅವನ ಪಿತೃಗಳು ನೂರು ಕಲ್ಪಗಳ ಕಾಲ ಸ್ವರ್ಗದಲ್ಲಿ ತೃಪ್ತರಾಗಿ ನೆಲೆಸುವರು.

**ಸಾಲಗ್ರಾಮಶಿಲಾಗ್ರೇ ಯಃ ಶ್ರಾದ್ಧಂ ದದ್ಯಾದ್ವಿಚಕ್ಷಣಃ ।**
**ಪಿತರಸ್ತಸ್ಯ ತೃಪ್ಯಂತಿ ಮುಕ್ತಿಂ ಯಾಂತಿ ನ ಸಂಶಯಃ ॥ ೨೫ ॥**

ಶಾಲಗ್ರಾಮಶಿಲೆಯ ಎದುರು ಯಾವ ಜ್ಞಾನಿಯು ಶ್ರಾದ್ಧವನ್ನು ಮಾಡುವನೋ ಅವನ ಪಿತೃಗಳು ತೃಪ್ತರಾಗುವರು. ಮುಕ್ತಿಗೆ ತೆರಳುವರು. ಸಂಶಯವಿಲ್ಲ.

**ಆಶಂಸಂತೇ ಸದಾ ದೇವಾಃ ಪಿತರಃ ಸರ್ವ ಏವ ಹಿ ।**
**ಯಮಿಷ್ಟ್ವಾದೌ ಮಹಾವಿಷ್ಣುಂ ಪಶ್ಚಾತ್ತೇನ ಪಿತೄನ್ ಸುರಾನ್ ।**
**ಯಸ್ತರ್ಪಯೇತ್ ಸ ವೈ ಪುತ್ರಃ ಸಭಾರ್ಯಃ ಸ ತು ಜೀವತು ॥ ೨೬ ॥**

ದೇವತೆಗಳು ಸಕಲ ಪಿತೃಗಳು ಸದಾ ಆಶಿಸುವರು – "ಯಾವನು ಮಹಾವಿಷ್ಣುವನ್ನು ಮೊದಲಿಗೆ ಪೂಜಿಸಿ ಬಳಿಕ ಆ ನೈವೇದ್ಯಶೇಷದಿಂದ ದೇವತೆಗಳನ್ನೂ ಪಿತೃಗಳನ್ನೂ ಸಪತ್ನೀಕನಾಗಿ ಸಂತೋಷಪಡಿಸುವನೋ ಅಂತಹವನೇ ಪುತ್ರ. ಅವನು ಚಿರಕಾಲಬಾಳಲಿ".

ಪಾದ್ಮೇ –

**ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಂ ದೇವತಾಂತರಮ್ ।**
**ಪಿತೃಭ್ಯಶ್ಚಾಪಿ ತದ್ದೇಯಂ ತದಾನಂತ್ಯಾಯ ಕಲ್ಪತೇ ॥ ೨೭ ॥**

ವಿಷ್ಣುವಿಗೆ ನೈವೇದ್ಯಮಾಡಿದ ಅನ್ನದಿಂದ ಇತರದೇವತೆಗಳನ್ನು ಆರಾಧಿಸಬೇಕು. ಅದನ್ನೇ ಪಿತೃಗಳಿಗೂ ಸಮರ್ಪಿಸಬೇಕು. ಅದು ಅನಂತಮಡಿಯಾಗುವುದು.

**ಪಿತೃಶೇಷಂ ತು ಯೋ ದದ್ಯಾದ್ಧರಯೇ ಪರಮಾತ್ಮನೇ ।**
**ರೇತೋಧಾಃ ಪಿತರಸ್ತಸ್ಯ ಭವಂತಿ ಕ್ಲೇಶಭಾಗಿನಃ ॥ ೨೮ ॥**

ಯಾವನು ಪಿತೃಶೇಷವನ್ನು ಪರಮಾತ್ಮನಿಗೆ ನೀಡುವನೋ ಅಂತಹ ಪಾಪಿಯ ಪಿತೃಗಳು ದುಃಖಭಾಗಿಗಳಾಗಿ ಆಗುವರು (ಇವೆರಡೂ ಪದ್ಮಪುರಾಣದ ಶ್ಲೋಕಗಳು).

ಗಾರುಡೇ -

**ಯಃ ಶ್ರಾದ್ಧಕಾಲೇ ಹರಿಭುಕ್ತಶೇಷಂ ದದಾತಿ ಭಕ್ತ್ಯಾ ಪಿತೃದೇವತಾನಾಮ್ ।**
**ತೇನೈವ ಪಿಂಡೈಃ ಸುತಿಲೈರ್ವಿಮಿಶ್ರೈರಾಕಲ್ಪಕೋಟ್ಯಃ ಪಿತರಃ ಸುತೃಪ್ತಾಃ ॥ ೨೯ ॥**

ಯಾವನು ಶ್ರಾದ್ಧಕಾಲದಲ್ಲಿ ಪಿತೃದೇವತೆಗಳಿಗೆ ಶ್ರೀಹರಿಯ ನೈವೇದ್ಯಶೇಷವನ್ನು ಭಕ್ತಿಯಿಂದ ನೀಡುವನೋ ಅದರಿಂದಲೇ ಉತ್ತಮ ಎಳ್ಳುಗಳಿಂದ ಮಿಶ್ರಿತವಾದ ಪಿಂಡಗಳನ್ನು ಮಾಡುವನೋ ಅಂತಹವನ ಪಿತೃಗಳು ಕೋಟಿ ಕಲ್ಪಗಳ ವರೆಗೆ ತೃಪ್ತರಾಗುವರು.

**ಸಾಲಗ್ರಾಮಶಿಲಾಯಾಸ್ತು ಮೂಲ್ಯಮುದ್ಘಾಟಯೇನ್ನರಃ ।**
**ವಿಕ್ರೇತಾ ಚಾನುಮಂತಾ ಚ ಯಃ ಪರೀಕ್ಷ್ಯಾನುಮೋದಯೇತ್ ॥ ೩೦ ॥**

**ಸರ್ವೇ ತೇ ನರಕಂ ಯಾಂತಿ ಯಾವದಾಭೂತಸಂಪ್ಲವಮ್ ।**
**ಅತಶ್ಚ ವರ್ಜಯೇದ್ವಿದ್ವಾನ್ ಚಕ್ರಸ್ಯ ಕ್ರಯವಿಕ್ರಯಮ್ ॥ ೩೧ ॥**

ಶಾಲಗ್ರಾಮಶಿಲೆಗೆ ಯಾವ ಮನುಷ್ಯನು ಬೆಲೆ ಕಟ್ಟುವನೋ, ಮಾರುವನೋ, ಅದನ್ನು ಯಾವನು ಒಪ್ಪುವನೋ, ಯಾವನು ಪರೀಕ್ಷೆ ಮಾಡಿ ಸಮ್ಮತಿಸುವನೋ, ಅವರೆಲ್ಲರೂ ಪ್ರಳಯಕಾಲದವರೆಗೂ ನರಕವನ್ನು ಹೊಂದುವರು. ಆದ್ದರಿಂದ ತಿಳಿದವನು ಶಾಲಗ್ರಾಮಗಳನ್ನು ಮಾರುವುದನ್ನೂ ಕೊಳ್ಳುವುದನ್ನೂ ಮಾಡಕೂಡದು.

**ಕಿಂಬಹೂಕ್ತೇನ ಕರ್ತವ್ಯಮರ್ಚನಂ ಪಾಪಭೀರುಣಾ ।**
**ಚಕ್ರಾಭ್ಯಾಂ ಸಹ ಚಕ್ರಂ ಚ ಸದಾ ಪೂಜ್ಯಂ ಮುಮುಕ್ಷುಭಿಃ ॥ ೩೨ ॥**

ಹೆಚ್ಚು ಹೇಳುವುದೇನು ! ಪಾಪಭೀರುವಾದವನು ಎರಡು ಚಕ್ರಾಂಕಿತಗಳೊಂದಿಗೆ ಶಾಲಗ್ರಾಮವನ್ನು ಸದಾ ಪೂಜಿಸಲೇಬೇಕು.

**ಯೇ ಪಿಬಂತಿ ಸದಾ ನಿತ್ಯಂ ಸಾಲಗ್ರಾಮಶಿಲಾಜಲಮ್ ।**
**ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಮ್ ॥ ೩೩ ॥**

ಯಾರು ಸದಾ ನಿತ್ಯದಲ್ಲೂ ಶಾಲಗ್ರಾಮಶಿಲೆಗೆ ಅಭಿಷೇಕಮಾಡಿದ ನೀರನ್ನು ಪಾನಮಾಡುವರೋ ಅವರು ಸಾವಿರಾರು ಬಾರಿ ಪಂಚಗವ್ಯವನ್ನು ಪ್ರಾಶನಮಾಡಿ ಏನು ಪ್ರಯೋಜನ? (ಸಾವಿರಾರು ಬಾರಿ ಪಂಚಗವ್ಯಪ್ರಾಶನಕ್ಕಿಂತ ಶಾಲಗ್ರಾಮಕ್ಕೆ ಅಭಿಷೇಕ-ಮಾಡಿದ ತೀರ್ಥಪ್ರಾಶನ ಶ್ರೇಷ್ಠವಾದುದು ಎಂದರ್ಥ).

**ರುದ್ರಃ -**

**ಶಂಖೋದಕಂ ಚ ನೈವೇದ್ಯಂ ನಿರ್ಮಾಲ್ಯಂ ಪಾದಯೋರ್ಜಲಮ್ ।**
**ಆರಾರ್ತಿರ್ಧೂಪಶೇಷಶ್ಚ ಬ್ರಹ್ಮಹತ್ಯಾಪಹಾರಕಾಃ ॥ ೩೪ ॥**

ಶಂಖೋದಕ ನೈವೇದ್ಯ, ನಿರ್ಮಾಲ್ಯ, ಪಾದತೊಳೆದ ಜಲ, ಮಂಗಳಾರತಿ, ಅಂಗಾರ - ಇವೆಲ್ಲ ಬ್ರಹ್ಮಹತ್ಯೆಯನ್ನು ಪರಿಹರಿಸುವವು.

**ಶಂಖಮಧ್ಯೇ ಸ್ಥಿತಂ ತೋಯಂ ಭ್ರಾಮಿತಂ ಕೇಶವೋಪರಿ ।**
**ಅಂಗಲಗ್ನಂ ಮನುಷ್ಯಾಣಾಂ ಬ್ರಹ್ಮಹತ್ಯಾಯುತಂ ದಹೇತ್ ॥ ೩೫ ॥**

ಶ್ರೀಕೇಶವನಾದ ಶ್ರೀಹರಿಗೆ ಭ್ರಾಮಣಮಾಡಿದ ಶಂಖದೊಳಗಿನ ನೀರು ಮನುಷ್ಯರ ಮೈಮೇಲೆ ಬಿದ್ದಾಗ ಹತ್ತುಸಾವಿರ ಬ್ರಹ್ಮಹತ್ಯಾದೋಷವನ್ನು ಸುಟ್ಟು ಹಾಕುವುದು. (ಶಂಖೋದಕ ಪ್ರೋಕ್ಷಣೆಯಿಂದ ಬ್ರಹ್ಮಹತ್ಯೆ ಪರಿಹಾರವಾಗುವುದು ಎಂದರ್ಥ. ಶ್ರೀಅಕ್ಷೋಭ್ಯತೀರ್ಥರು, ಶ್ರೀಶ್ರೀಪಾದರಾಜರು ಶಂಖೋದಕಪ್ರೋಕ್ಷಣೆಯಿಂದ ಬ್ರಹ್ಮ-ಹತ್ಯಾದೋಷವನ್ನು ಪರಿಹಾರಮಾಡಿದ ಮಹಿಮೆ ಅವರ ಚರಿತ್ರೆಗಳಲ್ಲಿ ದಾಖಲಾಗಿದೆ).

**ನ ಗ್ರಹಾ ನ ಚ ಕೂಷ್ಮಾಂಡಾಃ ಪಿಶಾಚೋರಗರಾಕ್ಷಸಾಃ ।**
**ದೃಷ್ಟ್ವಾ ಶಂಖೋದಕಂ ಮೂರ್ಧ್ನಿ ವಿದ್ರವಂತಿ ದಿಶೋ ದಶ ॥ ೩೬ ॥**

ಗ್ರಹಗಳಾಗಲೀ, ಕೂಷ್ಮಾಂಡಗಳಾಗಲೀ, ಪಿಶಾಚಿಗಳು, ಸರ್ಪಗಳು, ರಾಕ್ಷಸರಾಗಲೀ ಪೀಡಿಸಲಾರವು. ಶಂಖೋದಕವನ್ನು ಶಿರಸ್ಸಿನ ಮೇಲೆ ನೋಡುತ್ತಲೇ ಅವು ಹತ್ತು ದಿಕ್ಕುಗಳಿಗೂ ಪಲಾಯನಮಾಡುವವು (ಶಂಖೋದಕಪ್ರೋಕ್ಷಣೆ ಮಾಡಿಸಿಕೊಂಡವನಿಗೆ ಗ್ರಹಪಿಶಾಚ್ಯಾದಿಗಳ ಪೀಡೆ ಸರ್ವಥಾ ಒದಗದು ಎಂದರ್ಥ).

**ಷಡ್ಭಿರ್ಮಾಸೋಪವಾಸೈಸ್ತು ಯತ್ಫಲಂ ಪರಿಕೀರ್ತಿತಮ್ ।**
**ವಿಷ್ಣೋರ್ನಿವೇದಿತಾನ್ನೇನ ತತ್ಫಲಂ ಭುಂಜತಾಂ ಕಲೌ ॥ ೩೭ ॥**

ಆರು ಮಾಸೋಪವಾಸಗಳ ವ್ರತವನ್ನು ಆಚರಿಸಿದಾಗ ಲಭಿಸುವ ಫಲವು ಕಲಿಯುಗದಲ್ಲಿ ವಿಷ್ಣುವಿಗೆ ನೈವೇದ್ಯಮಾಡಿದ ಅನ್ನವನ್ನು ತಿನ್ನುವವನಿಗೆ ಲಭಿಸುವುದು.

**ವಿಷ್ಣೋರ್ನಿರ್ಮಾಲ್ಯಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ ।**
**ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ॥ ೩೮ ॥**

ವಿಷ್ಣುವಿನ ನಿರ್ಮಾಲ್ಯಶೇಷದಿಂದ ಯಾವನು ತನ್ನ ಅವಯವಗಳನ್ನು ಲೇಪಿಸಿ-ಕೊಳ್ಳುವನೋ ಅವನ ದುರಿತಗಳು ಸಂಪೂರ್ಣವಾಗಿ ನಾಶವಾಗುವವು; ರೋಗಗಳು ತುಂಡುತುಂಡಾಗುವವು.

**ಅಕಾಲಮೃತ್ಯುಮಥನಂ ಸರ್ವವ್ಯಾಧಿವಿನಾಶನಮ್ ।**
**ಸರ್ವದುರಿತೋಪಶಮನಂ ವಿಷ್ಣುಪಾದೋದಕಂ ಶುಭಮ್ ॥ ೩೯ ॥**

ಮಂಗಳಕರವಾದ ವಿಷ್ಣುಪಾದೋದಕವು ಅಕಾಲಮೃತ್ಯುವನ್ನು ಪರಿಹರಿಸುವವು. ಸಕಲರೋಗಗಳನ್ನೂ ಗುಣಪಡಿಸುವವು. ಸರ್ವದುರಿತಗಳನ್ನೂ ನಾಶ ಮಾಡುವವು.

**ಕೌತುಕಂ ಶ್ರುಣು ಮೇ ದೇವಿ ವಿಷ್ಣೋರಾರಾರ್ತಿವಹ್ನಿನಾ ।**
**ತಾಪಿತಂ ನಾಶಮಾಯಾತಿ ಬ್ರಹ್ಮಹತ್ಯಾದಿಪಾತಕಮ್ ॥ ೪೦ ॥**

ದೇವಿಯೇ! ಆಶ್ಚರ್ಯವನ್ನು ಕೇಳು! ವಿಷ್ಣುವಿಗೆ ಮಾಡಿ ಮಂಗಳಾರತಿಯ ಜ್ವಾಲೆಯಿಂದ ತಾಪಗೊಳ್ಳುವ ಬ್ರಹ್ಮಹತ್ಯಾದಿಪಾಪಗಳು ನಾಶ ಹೊಂದುವವು. (ಶ್ರೀಹರಿಗೆ ಮಾಡಿದ ಮಂಗಳಾರತಿಯನ್ನು ಸ್ವೀಕರಿಸುವುದು ಬ್ರಹ್ಮಹತ್ಯಾದಿದೋಷಪರಿಹಾರಕ ಎಂದರ್ಥ).

**ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್ ।**
**ದುರಿತಾನಿ ವಿನಶ್ಯಂತಿ ವ್ಯಾಧಯೋ ಯಾಂತಿ ಖಂಡಶಃ ॥ ೪೧ ॥**

ಯಾವನು ವಿಷ್ಣುವಿಗೆ ಸಮರ್ಪಿತವಾದ ಅಂಗಾರಶೇಷದಿಂದ ಅವಯವಗಳನ್ನು ಲೇಪಿಸಿಕೊಳ್ಳುವನೋ ಅವನ ಆಪತ್ತುಗಳು ಪರಿಹಾರವಾಗುವವು; ರೋಗಗಳು ವಾಸಿಯಾಗುವವು.

**ಯದಲ್ಪದ್ವಾದಶೀ ದೃಷ್ಟ್ವಾ ನಿಶೀಥಾದೂರ್ಧ್ವಮೇವ ತು ।**
**ಆಮಧ್ಯಾಹ್ನಾಃ ಕ್ರಿಯಾಃ ಸರ್ವಾಃ ಕರ್ತವ್ಯಾಃ ಶಂಭುಶಾಸನಾತ್ ॥ ೪೨ ॥**

ಅಲ್ಪದ್ವಾದಶಿಯಿದ್ದಾಗ ಮಹಾನಿಶೀಥಕಳೆಯುತ್ತಲೇ ಮಧ್ಯಾಹ್ನದವರೆಗಿನ ಸಕಲ-ಕಾರ್ಯಗಳನ್ನು ಪೂರೈಸಬೇಕು ಎಂದು ಶಿವನ ಶಾಸನವಿದೆ.

**ಊರ್ಧ್ವಪುಂಡ್ರಂ ಲಲಾಟೇ ತು ದಂಡಾಕಾರಂ ಸುಶೋಭನಮ್ ।**
**ಮಧ್ಯೇ ಛಿದ್ರೇಣ ಸಂಯುಕ್ತಂ ತಚ್ಛಿದ್ರಂ ಮಮ ಮಂದಿರಮ್ ॥ ೪೩ ॥**

ಹಣೆಯಲ್ಲಿ ಊರ್ಧ್ವಪುಂಡ್ರವು ದಂಡಾಕಾರದಲ್ಲಿ ಶೋಭಿಸುವಂತಿರಬೇಕು. ಮಧ್ಯದಲ್ಲಿ ಛಿದ್ರದಿಂದ ಕೂಡಿರಬೇಕು. ಆ ಛಿದ್ರ ನನ್ನ ಮಂದಿರ (ಹಣೆಯ ಮೇಲೆ ಧರಿಸುವ ಊರ್ಧ್ವಪುಂಡ್ರ ಇತರ ನಾಮಗಳಂತೆ ಇರದೇ ಮಧ್ಯೆ ಛಿದ್ರದಿಂದ ಕೂಡಿರಬೇಕು ಎಂಬ ವಿಶೇಷಾಂಶ ಇದರಲ್ಲಿದೆ).

**ಶ್ವಪಾಕಮಿವ ನೇಕ್ಷೇತ ಲೋಕೇ ವಿಪ್ರಮವೈಷ್ಣವಮ್ ।**
**ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಮ್ ॥ ೪೪ ॥**

ವಿಷ್ಣುಭಕ್ತನಲ್ಲದ ಬ್ರಾಹ್ಮಣನನ್ನು ಲೋಕದಲ್ಲಿ ಶ್ವಪಾಕನಂತೆ ಕಾಣಬೇಕು. ವರ್ಣಬಾಹ್ಯನಾಗಿದ್ದರೂ ವಿಷ್ಣುಭಕ್ತನಾಗಿದ್ದಲ್ಲಿ ಮೂರು ಲೋಕಗಳನ್ನೂ ಪಾವನಗೊಳಿಸುವನು.

ಯಮಃ –

ವೈಷ್ಣವೋ ಯದ್ಗೃಹೇ ಭುಂಕ್ತೇ ಯೇಷಾಂ ವೈಷ್ಣವಸಂಗತಿಃ ।
ತೇಽಪಿ ವಃ ಪರಿಹರ್ತವ್ಯಾಃ ಸತ್ಸಂಗಹತಕಿಲ್ಬಿಷಾಃ ॥ ೪೫ ॥

ಯಾವನ ಮನೆಯಲ್ಲಿ ವಿಷ್ಣುಭಕ್ತನು ಭೋಜನಮಾಡುವನೋ ಯಾರಿಗೆ ವಿಷ್ಣುಭಕ್ತರ ಸಹವಾಸ ಒದಗುವುದೋ, ಸಜ್ಜನರ ಸಂಗದಿಂದಾಗಿ ಸಕಲಪಾಪಗಳನ್ನೂ ಕಳೆದುಕೊಂಡಿರುವ ಅಂತಹವರನ್ನು ನೀವು ಮುಟ್ಟಬೇಡಿ (ಇದು ಯಮನು ತನ್ನ ದೂತರಿಗೆ ನೀಡಿದ ಆದೇಶ).

ವಿಷ್ಣುಭಕ್ತಸ್ಯ ಯೇ ದಾಸಾಃ ವೈಷ್ಣವಾನ್ನಭುಜಶ್ಚ ಯೇ ।
ತೇಽಪಿ ತದ್ವದ್ದ್ವಿಜಾ ವೈಶ್ಯ ಗತಿಂ ಯಾಂತಿ ನಿರಾಕುಲಾಃ ॥ ೪೬ ॥

ವಿಷ್ಣುಭಕ್ತನಾದವನಿಗೆ ಯಾರು ಭೃತ್ಯರಾಗಿರುವರೋ ಯಾರು ವೈಷ್ಣವರ ಅನ್ನವನ್ನು ಉಣ್ಣುವರೋ ಅಂತಹವರೂ ಸಹ ಯಾವುದೇ ಆತಂಕವಿಲ್ಲದೇ ಸದ್ಗತಿಗೆ ತೆರಳುವರು.

ಪ್ರಾರ್ಥಯೇದ್ವೈಷ್ಣವಸ್ಯಾನ್ನಂ ಪ್ರಯತ್ನೇನ ವಿಚಕ್ಷಣಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥ ೪೭ ॥

ವೈಷ್ಣವನ ಅನ್ನವನ್ನು ಜ್ಞಾನಿಯಾದವನು ಪ್ರಯತ್ನಪೂರ್ವಕವಾಗಿ ಬೇಡಿ ತಿನ್ನಬೇಕು. ಅವನು ಸಕಲಪಾಪಗಳಿಂದ ಬಿಡುಗಡೆ ಹೊಂದಿ ವಿಷ್ಣುಲೋಕದಲ್ಲಿ ಪೂಜಿತನಾಗುವನು.

ಮಹಾಪಾತಕಸಂಯುಕ್ತೋ ವ್ರಜೇದ್ವೈಷ್ಣವಮಂದಿರಮ್ ।
ಯಾಚಯೇದನ್ನಮಮೃತಂ ತದಭಾವೇ ಜಲಂ ಪಿಬೇತ್ ॥ ೪೮ ॥

ಮಹಾಪಾತಕದಿಂದ ಕೂಡಿದವನು ವಿಷ್ಣುಭಕ್ತನ ಮನೆಗೆ ತೆರಳಬೇಕು. ಅವನ ಮನೆಯ ಅಮೃತದಂತಹ ಅನ್ನವನ್ನು ಬೇಡಬೇಕು. ಅದು ಇಲ್ಲವಾದಲ್ಲಿ ನೀರನ್ನಾದರೂ ಕುಡಿಯಬೇಕು.

ಸರ್ವಪಾಪವಿಶುದ್ಧ್ಯರ್ಥಂ ವಿಷ್ಣುಭಕ್ತಗೃಹಂ ವ್ರಜೇತ್ ।
ತಂ ನಮಸ್ಕೃತ್ಯ ಭಕ್ತ್ಯಾ ತು ಯಾಚಯೇದನ್ನಮುತ್ತಮಮ್ ॥ ೪೯ ॥

ಸಕಲಪಾಪಗಳ ಪರಿಶುದ್ಧಿಗಾಗಿ ವಿಷ್ಣುಭಕ್ತನ ಮನೆಗೆ ತೆರಳಬೇಕು. ಅವನಿಗೆ ಭಕ್ತಿಯಿಂದ ನಮಸ್ಕರಿಸಿ ಉತ್ತಮವಾದ ಅನ್ನವನ್ನು ಬೇಡಬೇಕು.

ಸಾಂಗಂ ಸಮುದ್ರಂ ಸನ್ಯಾಸಂ ಸಋಷಿಛಂದದೈವತಮ್ ।
ಸದೀಕ್ಷಾವಿಧಿವತ್ಸ್ನಾನಂ ಸಯಂತ್ರಂ ದ್ವಾದಶಾಕ್ಷರಮ್ ॥ ೫೦ ॥

**ಅಷ್ಟಾಕ್ಷರಂ ಚ ಮಂತ್ರೇಶಂ ಜಪಂತಸ್ತೇ ಹಿ ವೈಷ್ಣವಾಃ।**
**ತಾನ್ ದೃಷ್ಟ್ವಾ ಬ್ರಹ್ಮಹಾ ಶುದ್ಧಃ ಸ್ಯಾದನ್ಯೋ ವೈಷ್ಣವಃ ಸ್ವಯಮ್ ॥ ೫೧ ॥**

ಅಂಗನ್ಯಾಸದೊಂದಿಗೆ ಮುದ್ರೆಗಳೊಂದಿಗೆ ಸಾಂಗವಾಗಿ ಋಷಿಛಂದಸ್ಸು ದೇವತೆಗಳ ಕೀರ್ತನದೊಂದಿಗೆ ದೀಕ್ಷಾವಿಧಿಪೂರ್ವಕವಾಗಿ, ಯಂತ್ರಪೂರ್ವಕವಾಗಿ ದ್ವಾದಶಾಕ್ಷರ-ಮಂತ್ರವನ್ನು ಮಂತ್ರರಾಜವಾದ ಅಷ್ಟಾಕ್ಷರಮಂತ್ರವನ್ನು ಯಾರು ಜಪಿಸುವರೋ ಅವರೇ ವೈಷ್ಣವರು. ಅವರನ್ನು ನೋಡಿದರೆ ಮತ್ತೊಬ್ಬ ವೈಷ್ಣವನು ಬ್ರಹ್ಮಹತ್ಯಾದೋಷದಿಂದಲೂ ಸಹ ಶುದ್ಧನಾಗುವನು (ಇದರಲ್ಲಿ ನಾರಾಯಣಾದಿವೈಷ್ಣವಮಂತ್ರಗಳನ್ನು ವಿಧ್ಯುಕ್ತವಾಗಿ ಜಪಿಸುವವನೇ ವೈಷ್ಣವ; ಅವನ ದರ್ಶನವು ಮಹಾಪುಣ್ಯಕರ ಎಂಬ ವಿಶೇಷಾಂಶ ನಿರೂಪಿತವಾಗಿದೆ).

**ಕೃತಘ್ನೋ ವಾಽಥ ಗೋಘ್ನೋ ವಾ ಹೈತುಕಃ ಸರ್ವಪಾತಕಃ।**
**ಗೋಪೀಚಂದನಸಂಪರ್ಕಾತ್ ಪೂತೋ ಭವತಿ ಮಾನವಃ ॥ ೫೨ ॥**

ಕೃತಘ್ನನಾಗಿರಲೀ, ಗೋಹತ್ಯೆ ಮಾಡಿದವನಾಗಿರಲೀ, ಕುತರ್ಕವನ್ನು ಅವಲಂಬಿಸಿರು-ವವನಾಗಲೀ, ಸಕಲಪಾಪಗಳನ್ನೂ ಮಾಡಿದವನಾಗಿರಲೀ ಗೋಪೀಚಂದನದ ಸಂಪರ್ಕದಿಂದಾಗಿ ಅಂತಹ ಮಾನವನು ಪವಿತ್ರನಾಗುವನು.

**ನಾವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಮ್।**
**ಚಕ್ರಾಂಕಿತಾಯ ದಾತವ್ಯಂ ಹವ್ಯಂ ಕವ್ಯಂ ದ್ವಿಜಾತಯೇ ॥ ೫೩ ॥**

ವಿಷ್ಣುಭಕ್ತನಲ್ಲದವನಿಗೆ ಏನನ್ನೂ ದಾನವನ್ನಾಗಿ ನೀಡಕೂಡದು; ಒಂದು ಹನಿನೀರನ್ನೂ ಕೊಡಕೂಡದು; ಒಂದಗುಳು ಅನ್ನವನ್ನೂ ನೀಡಬಾರದು. ಚಕ್ರಮೊದಲಾದ ಚಿಹ್ನೆಗಳನ್ನು ಧರಿಸಿದ ಬ್ರಾಹ್ಮಣನಿಗೆ ಹವ್ಯಕವ್ಯಗಳನ್ನು ನೀಡಬೇಕು.

**ವ್ಯಾಸಃ -**

**ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಮ್।**
**ವಾಮೇ ಶಂಖಂ ಚ ಬಿಭೃಯಾತ್ ತದ್ವಿಷ್ಣೋರಿತಿ ವೈಋಚಾ ॥ ೫೪ ॥**

ವಿಪ್ರನು ಬಲಭುಜದಲ್ಲಿ ಸುದರ್ಶನಚಕ್ರವನ್ನು ಧರಿಸಬೇಕು. ಎಡಭುಜದಲ್ಲಿ ತದ್ವಿಷ್ಣೋಃ ಎಂಬ ಋಕ್ಕಿನಿಂದ ಶಂಖವನ್ನು ಧರಿಸಬೇಕು.

**ಉಪವೀತೀ ಬದ್ಧಶಿಖೋ ಬ್ರಾಹ್ಮಣೋ ಭುಜಮೂಲಯೋಃ।**
**ಧಾರಯೇದಬ್ಜಚಕ್ರೇ ತು ಪವಿತ್ರಂ ತೇ ಇತಿ ಶ್ರುತಿಃ ॥ ೫೫ ॥**

ಯಜ್ಞೋಪವೀತಧರಿಸಿದವನಾಗಿ ಶಿಖಾಬಂಧನದಿಂದ ಕೂಡಿದವನಾಗಿ ಬ್ರಾಹ್ಮಣನು ತೋಳುಗಳ ಮೇಲೆ ಪದ್ಮಚಕ್ರಗಳನ್ನು ಧರಿಸಬೇಕು. 'ಪವಿತ್ರಂ ತೇ' ಎಂಬುದಾಗಿ ಶ್ರುತಿ ಇದೆ.

ರುದ್ರಃ -

ಪಂಚಾಯುಧಾನಿ ಧಾರ್ಯಾಣಿ ಭಕ್ತಿಶ್ರದ್ಧೋಪಬೃಂಹಿತೈಃ ।
ಲಲಾಟೇ ಮೂರ್ಧ್ನಿ ಹೃದ್ಬಾಹ್ವೋರೇಕೈಕಂ ತು ಪೃ ಥಕ್ ಪೃಥಕ್ ॥ ೫೬ ॥

ಲಲಾಟೇ ತು ಗದಾ ಧಾರ್ಯಾ ಮೂರ್ಧ್ನಿ ಚಾಪಂ ಶರಂ ತಥಾ ।
ಹೃತ್ಪದ್ಮಂ ನಂದಕಂ ಚೈವ ಶಂಖಚಕ್ರೇ ಭುಜದ್ವಯೇ ॥ ೫೭ ॥

ಭಕ್ತಿಶ್ರದ್ಧೆಗಳಿಂದ ಕೂಡಿದವನಾಗಿ ಪಂಚಾಯುಧಗಳನ್ನು ಧರಿಸಬೇಕು. ಹಣೆ ಶಿರಸ್ಸು ಹೃದಯ ಮತ್ತು ಎರಡು ತೋಳುಗಳ ಮೇಲೆ ಒಂದೊಂದನ್ನೂ ಪ್ರತ್ಯೇಕವಾಗಿ ಧರಿಸಬೇಕು. ಹಣೆಯ ಮೇಲೆ ಗದೆಯನ್ನು ಧರಿಸಬೇಕು. ಶಿರಸ್ಸಿನ ಮೇಲೆ ಧನುಸ್ಸು ಮತ್ತು ಬಾಣಗಳನ್ನುಧರಿಸಬೇಕು. ಹೃದಯದಲ್ಲಿ ಪದ್ಮವನ್ನೂ ನಂದಕವನ್ನೂ ಎರಡು ಭುಜಗಳ ಮೇಲೆ ಶಂಖಚಕ್ರಗಳನ್ನೂ ಧರಿಸಬೇಕು.

॥ ಶ್ರೀಕೃಷ್ಣಾರ್ಪಣಮಸ್ತು ॥

* * * * *

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

* * * * *

ಪರಿಶಿಷ್ಟ - ೨

## ಕೃಷ್ಣಾಮೃತಮಹಾರ್ಣವ - ಶ್ಲೋಕಾರ್ಧಾನುಕ್ರಮಣಿಕೆ

*****

## ಪರಿಶಿಷ್ಟ - ೧ ರಲ್ಲಿ ಬಂದಿರುವ ಶ್ಲೋಕಗಳ ಶ್ಲೋಕಾರ್ಧಾನುಕ್ರಮಣಿಕೆ

॥ ಶ್ರೀಕೃಷ್ಣಾರ್ಪಣಮಸ್ತು ॥

★★★★★

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

# SRI VYASAMADHWA SAMSHODHANA PRATISHTANA

No. 89/24, III CROSS, MOUNT JOY EXTENSION,HANUMANTHANAGAR, BANGALORE - 560 019, PH : **080-26611011, 26602802,** email : info@vyasamadhwa.org

Bank Account No. 0472101031491 - Canara Bank, Hanumanthanagar Branch, IFSC Code : CNRB0000472

## ನಮ್ಮ ಪ್ರಕಾಶನದ ಕೆಲವು ಕನ್ನಡ ಪುಸ್ತಕಗಳು

| | |
|---|---|
| ಸುಮಧ್ವವಿಜಯ (ಕನ್ನಡ ಅನುವಾದ) | 350 |
| ತೀರ್ಥಪ್ರಬಂಧ (ಕನ್ನಡ ಅನುವಾದ ಸಮೇತ) | 140 |
| ಸ್ತೋತ್ರಮಾಲಿಕಾ-1 | 70 |
| ಸ್ತೋತ್ರಮಾಲಿಕಾ-2 | 180 |
| ಸ್ತೋತ್ರಮಾಲಿಕಾ-3 | 150 |
| ಸ್ತೋತ್ರಮಾಲಿಕಾ-4 | 150 |
| ಸ್ತೋತ್ರಮಾಲಿಕಾ-6 | 240 |
| ಸ್ತೋತ್ರಮಾಲಿಕಾ-7(ಲಕ್ಷ್ಮೀಸ್ತೋತ್ರಮಾಲಿಕಾ) | 100 |
| ಸ್ತೋತ್ರಮಾಲಿಕಾ-8 | 170 |
| ಸ್ತೋತ್ರಮಾಲಿಕಾ-9 | 180 |
| ಲಕ್ಷ್ಮೀಭಜನಾಮೃತ | 60 |
| ಗೋಪಾಲದಾಸರ ಕೃತಿಗಳು | 60 |
| ಗೀತಾಮಧು | 100 |
| ಕೃಷ್ಣಜಯಂತೀವ್ರತ | 25 |
| ಜಯತೀರ್ಥದರ್ಶನ | 50 |
| ಪೂರ್ಣಪ್ರಜ್ಞದರ್ಶನ | 115 |
| ಆದ್ಯಂತ ಶ್ಲೋಕಗಳು | 15 |
| ಅಧಿಕಮಾಸ | 25 |
| ರಾಘವೇಂದ್ರದರ್ಶನ | 65 |
| ಶ್ರೀರಘೋತ್ತಮತೀರ್ಥರು | 25 |
| ಪವಿತ್ರ ಪಾಚಕ | 30 |
| ವೇದವ್ಯಾಸಪೂಜಾವಿಧಿ | 35 |
| ಮಧ್ವಭಾರತ | 200 |

| | |
|---|---|
| ಹರಿವಾಯುಸ್ತುತಿ | 60 |
| ಭಗವದ್ಗೀತಾ ಮಾಹಾತ್ಮೆ | 40 |
| ಚಾತುರ್ಮಾಸ್ಯವ್ರತ | 50 |
| ಪವಿತ್ರ ತುಲಸೀ | 130 |
| ಮಧ್ವಸಿದ್ಧಾಂತ ಸೌರಭ | 45 |
| ಪುರಂದರದಾಸರ ಆಯ್ದ ಕೃತಿಗಳು | 65 |
| ರಾಘವೇಂದ್ರಸ್ತೋತ್ರ | 75 |
| ದ್ವಾರಕಾ ಮಹಾತ್ಮ್ಯೆ | 70 |
| ರುಗ್ಮಿಣೀಶವಿಜಯ (ಅನುವಾದ) | 400 |
| ರುಗ್ಮಿಣೀಶವಿಜಯ (ಮೂಲ) | 100 |
| ಸುಮಧ್ವವಿಜಯ (ಮೂಲ) | 100 |
| ಏಕಾದಶೀವ್ರತ | 40 |
| ಹರಿಭಕ್ತಿಸಾರ | 220 |
| ಮಂಗಲಾಷ್ಟಕ | 50 |
| ಕಂಬಾಲೂರು ಶ್ರೀರಾಮಚಂದ್ರತೀರ್ಥರು | 45 |
| ಸುಂದರಕಾಂಡ | 35 |
| ದ್ರೌಪದಿ-ವಿದುರ | 85 |
| ಶ್ರೀಸತ್ಯಧರ್ಮತೀರ್ಥಕೃತಿಮಂಜರೀ | 90 |

**SANSKRIT BOOKS**

| | |
|---|---|
| Mantra Ratna kosha of Sri Sumateendratirtha | 25 |
| Ishavasyopanishad Bhashya of Sri Vyasatirtha | 35 |
| Poojakalpa of Sri Vadirajatirtha | 25 |
| Sri Rugminisha Vijaya of Sri Vadirajatirtha (With commentary of Sri Narayanacharya) | 600 |
| Sangraha Ramayana of Sri Narayanapanditacharya | 500 |
| Shrimad Bhagavadgeeta (Geeta Bhashya of Srimadanandatirtha, Geeta bhashya teeka off Sri Padmanabhatirtha, geeta lakshalankara off Sri Vadirajatirtha) | 300 |

*****

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ ಪ್ರವಚನಗಳ

## ಎಂ.ಪಿ.3. ಸಿ.ಡಿ./ಡಿ.ವಿ.ಡಿಗಳು

### ಎಂ. ಪಿ. ೩ ಸಿ. ಡಿ. ಗಳು

| ಸಿ.ಡಿ. ಗಳು | ಬೆಲೆ / ಅವಧಿ |
|---|---|
| 1. ಶ್ರೀಮದ್ಭಾಗವತ (ಪ್ರೋಷ್ಠಪದಿ) | ರೂ. 100 / 26 ಗಂ. |
| 2. ಶ್ರೀನಿವಾಸಕಲ್ಯಾಣ | ರೂ. 50 / 12 ಗಂ. |
| 3. ರಾಮಾಯಣ | ರೂ. 50 / 18 ಗಂ. |
| 4. ಸುಂದರಕಾಂಡ | ರೂ. 50 / 16 ಗಂ. |
| 5. ಮಹಾಭಾರತದಲ್ಲಿ ಅರ್ಜುನ ಮತ್ತು ಯುದಿಷ್ಠಿರರ ಪಾತ್ರ | ರೂ. 60 / 16 ಗಂ. |
| 6. ಮಹಾಭಾರತದಲ್ಲಿ ಕರ್ಣನ ಪಾತ್ರ | ರೂ. 60 / 10 ಗಂ. |
| 7. ಮಹಾಭಾರತದಲ್ಲಿ ಭೀಷ್ಮ ಮತ್ತು ವಿದುರರ ಪಾತ್ರ | ರೂ. 60 / 18 ಗಂ. |
| 8. ಏಕಾದಶಿ–ದೇವರು–ಉಪನಯನ–ಗಾಯತ್ರಿ –ಲಕ್ಷ್ಮೀಶೋಭಾನೆ– ರಾಘವೇಂದ್ರಮಂಗಳಾಷ್ಟಕ | ರೂ. 50 / 8 ಗಂ. |
| 9. ಸುಮಧ್ವವಿಜಯ | ರೂ. 50 / 18 ಗಂ. |
| 10. ಚಾತುರ್ಮಾಸ್ಯ – ಧಾತ್ರೀಹವನ | ರೂ. 20 / 8 ಗಂ. |
| 11. ದ್ವಾದಶ ಸ್ತೋತ್ರ (ಪಾಠ) | ರೂ. 50 / 15 ಗಂ. |
| 12. ಸದಾಚಾರಸ್ಮೃತಿ | ರೂ. 20 / 3 ಗಂ. |
| 13. ಹರಿಕಥಾಮೃತಸಾರ (ಭಾಗ –1, 2) | ರೂ. 50 / 20 ಗಂ. |
| 14. ಹರಿವಂಶ | ರೂ. 50 / 10 ಗಂ. |
| 15. ಹರಿವಾಯುಸ್ತುತಿ (ಪಾಠ – ಪ್ರವಚನ) | ರೂ. 100 / 25 ಗಂ. |
| 16. ವಿಷ್ಣುಪುರಾಣ | ರೂ. 50 / 8 ಗಂ. |
| 17. ಗೀತಾಮಾಹಾತ್ಮ್ಯ | ರೂ. 50 / 15 ಗಂ. |
| 18. ಮಾಧ್ವ ಯತಿಗಳು ಮತ್ತು ಹರಿದಾಸರು | ರೂ. 50 / 15 ಗಂ. |
| 19. ಮಧ್ವ ಫಾರ್ ಯೂಥ್ (ಕಾರ್ಯಾಗಾರ) | ರೂ. 50 / 18 ಗಂ. |
| 20. ಸರ್ವಮೂಲ – ಪಾಠ | ರೂ.200 / 40 ಗಂ. |
| 21. ಮಹಾಭಾರತತಾತ್ಪರ್ಯನಿರ್ಣಯ (ಪ್ರವಚನ) | ರೂ. 150 / 40 ಗಂ. |
| 22. ಪ್ರಾತಃಸಂಕಲ್ಪಗದ್ಯ (ಪಾಠ) | ರೂ. 25 / 3 ಗಂ. |

### ಡಿ.ವಿ.ಡಿ (ಡಿ.ವಿ.ಡಿ ಪ್ಲೇಯರ್‌ನಲ್ಲಿ ಮಾತ್ರ)

| | |
|---|---|
| 1. ಸಮಗ್ರ ಭಾಗವತ (ಪಾಠ) | ರೂ. 1,000 / 4 ಡಿ.ವಿ.ಡಿ ಸೆಟ್ / 450 ಗಂ. |
| 2. ಮಹಾಭಾರತ (ಪ್ರವಚನ) | ರೂ. 400 / 150 ಗಂ. |
| 3. ಭಗವದ್ಗೀತೆ (ಪ್ರವಚನ) | ರೂ. 600 - 3 ಡಿ.ವಿ.ಡಿ. ಸೆಟ್ / 225 ಗಂ. |
| 4. ಭಾಗವತ ಸಾರೋದ್ಧಾರ (ಪಾಠ) | ರೂ. 150 / 70 ಗಂ. / 1 ಡಿ.ವಿ.ಡಿ. ಸೆಟ್ |
| 5. ಸಮಗ್ರ ಭಾಗವತ (ಪಾಠ) | ರೂ. 1,500 / 10 ಸಿ.ಡಿ. ಸೆಟ್ / 450 ಗಂ. |
| 6. ವಿಷ್ಣುತತ್ತ್ವನಿರ್ಣಯ (ಪಾಠ) | ರೂ. 300 |